ಪ್ರಥಮ ಮುದ್ರಣ : ನವಂಬರ್ ೧೯೫೫



ಮುಖಚಿತ್ರ :
ಜಿ. ಕೆ. ಮೂರ್ತಿ

**ಬೆಲೆ : ರೂ ೧-೮-೦**

ಮುದ್ರಕರು :
ಎಂ. ಎಸ್. ಚಿಂತಾಮಣಿ, ಬಿ. ಎಸ್‌ಸಿ.,
ಈಸ್ಟರ್ನ್ ಪ್ರೆಸ್
ಜಯಚಾಮರಾಜ ರಸ್ತೆ, ಬೆಂಗಳೂರು-೨

# ಮುನ್ಮಾತು

ವಾಮಾಚಾರದ ವಿಷಯವಾಗಿ ನಾನು ಬರೆಯಬೇಕೆಂದಿರುವ ಕಾದಂಬರಿಗಳಲ್ಲಿ 'ಶಕ್ತಿ ಪೂಜೆ' ಎರಡನೆಯದು. ಇದನ್ನು ಈ ಮೊದಲೇ ಪ್ರಕಟವಾದ 'ಮಂತ್ರ ಶಕ್ತಿ'ಯ ದ್ವಿತೀಯ ಭಾಗವೆಂದಾಗಲಿ ಅಥವಾ ಸ್ವತಂತ್ರ ಕೃತಿಯೆಂದಾಗಲಿ ಭಾವಿಸಿ ಓದಬಹುದು.

ಕ್ಷುದ್ರಶಕ್ತಿ ಉಪಾಸಕರಾದ ಮೂವರ ಸಾಧನೆ, ಜೀವನ ಮತ್ತು ಪರಿಣಾಮ ಗಳನ್ನೂ, ಗಣಪತಿ ಔಪಾಸನೆಯನ್ನು ಸಿದ್ಧಿಸಿಕೊಂಡ ಓರ್ವ ದೃಢ ಚಿತ್ತದ ಸಾಧಕನ ಮತ್ತು ಅವನ ಸಂಸಾರದ ಚಿತ್ರಣವನ್ನೂ ಈ ಕೃತಿಯಲ್ಲಿ ಕೊಟ್ಟದ್ದೇನೆ.

ಈ ಕಾದಂಬರಿಯಲ್ಲಿ ಕಂಡು ಬರುವ ಉತ್ತ್ರೇಕ್ಷಕ ಸನ್ನಿವೇಶಗಳು ವಾಮಾ ಚಾರದಲ್ಲಿ ತೀರ ಸಹಜವಾದುವು: ಈ ತಂತ್ರ ವಿದ್ಯೆಯೇ ಇಂದು ಅಪನಂಬಿಕೆ ಗೊಳಪಟ್ಟ ವಿಷಯವಾಗಿರುವುದರಿಂದ, ಇದರ ಬಗ್ಗ ಲೇಖಕ ಏನನ್ನೂ ನಿರ್ದಿಷ್ಟವಾಗಿ ಹೇಳಲಾರ. ಮಾಯ, ಮಂತ್ರ, ಮಾಟ, ಮಹೇಂದ್ರಜಾಲ, ಪ್ರೇತಸಂಭಾಷಣೆ- ಇತ್ಯಾದಿಗಳನ್ನು ನಂಬಲೇಬೇಕೆಂದು ಲೇಖಕ ಒತ್ತಾಯಪಡಿಸುವುದಿಲ್ಲ. ತನಗೆ ನಂಬಿಕೆಯಿದೆ, ಕೆಲವಾರು ಪ್ರತ್ಯಕ್ಷ ಘಟನೆಗಳು ತನ್ನ ಅನುಭವಕ್ಕೆ ಬಂದಿವೆ- ಎಂಬುದಿಷ್ಟೇ ಈ ತೆರನಾದ ಕೃತಿಯನ್ನು ರಚಿಸಲು ಲೇಖಕನಿಗೆ ದೊರೆಕಿರುವ ಆಧಾರ.

ಈ ಕಾದಂಬರಿಯಲ್ಲಿ, ಶ್ರೀಮಾನ್ ಸುಬೋಧ ರಾಮರಾಯರ 'ವಿನಾಯಕ ಪೂಜಾ ರಹಸ್ಯ' ಎಂಬ ಲೇಖನದಿಂದಲೂ ಮತ್ತು ಶ್ರೀಮಾನ್ ಸು. ವೆಂಕಟಾಚಲ ಯ್ಯನವರ 'ಜೀವಾತ್ಮ' ಎಂಬ ಅನುವಾದಿತ ಕೃತಿಯಿಂದಲೂ ಸಂದರ್ಭೋ ಚಿತವಾದ ಕೆಲವಾರು ಪಂಕ್ತಿಗಳನ್ನು ಆಯ್ದು ಬಳಸಿಕೊಂಡಿದ್ದೇನೆ. ಇದಕ್ಕಾಗಿ ಈ ಲೇಖಕ ಮಹಾಶಯರಿರ್ವರಿಗೂ ನಾನು ಕೃತಜ್ಞ.

ಇದಕ್ಕೆ ಮುನ್ನ ಪ್ರಕಟವಾದ 'ಮಂತ್ರಶಕ್ತಿ'ಗೆ ದೇಶೀಯ ಕನ್ನಡಿಗರು ಮಾತ್ರವಲ್ಲದೆ ಹೊರನಾಡಿನ ಹಾಗೂ ವಿದೇಶಗಳಲ್ಲಿನ ಹಲವಾರು ಮಂದಿ ಕನ್ನಡಿಗರೂ ಸಹ ಅಭೂತ ಪೂರ್ವ ಸ್ವಾಗತವನ್ನು ನೀಡಿ ಪ್ರೋತ್ಸಾಹಿಸಿದ್ದಾರೆ- ನೂರಾರು ಮಂದಿ ವಾಚಕರು ತಮ್ಮ ನಿರ್ದಾಕ್ಷಿಣ್ಯವಾದ ಅಭಿಪ್ರಾಯವನ್ನು ತಿಳಿಸಿ ಉಪಕಾರ ಮಾಡಿದ್ದಾರೆ. ಕೆಲಮಂದಿ ವಾಮಾಚಾರಿಗಳೂ - ಮಂತ್ರ ವಿದ್ಯೆ ಕಲಿತ ಮಹನೀ ಯರೂ ;ಈ ಕೃತಿಯು ತಮಗೆ ಬೋಧಪ್ರದವಾಗಿದೆಯೆಂದು ತಿಳಿಸಿದ್ದಾರೆ. ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲುತ್ತವೆ.

ಸದಾ ನನ್ನ ಮತ್ತು ನನ್ನ ಕೃತಿಗಳ ಬಗ್ಗೆ ಆತ್ಮೀಯವಾದ ಆಸಕ್ತಿಯನ್ನು ವ್ಯಕ್ತಪಡಿಸುತ್ತಾ ಬಹುತೆರನಾಗಿ ನೆರವಾಗುತ್ತಿರುವ ಗೆಳೆಯ ಕೆ. ವಿ. ಶೇಷಾದ್ರಿಯವರಿಗೂ, ಈ ಕೃತಿಯನ್ನು ರಚಿಸಲು ನೆರವಾದ ನನ್ನ ಮಾಂತ್ರಿಕ ಮಿತ್ರರಿಗೂ, ಪ್ರಕಟಿಸಲು ಮುಂದೆ ಬಂದ ಸುದರ್ಶನ ಪ್ರಕಾಶನದ ಮಿತ್ರರಾದ ತಾ. ರಾ. ನಾಗರಾಜರಿಗೂ ನಾನು ಕೃತಜ್ಞನಾಗಿದ್ದೇನೆ. ಅಲ್ಲದೆ, ಅತ್ಯಲ್ಪಕಾಲದಲ್ಲಿಯೇ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಈಸ್ಟರ್ನ್ ಪ್ರೆಸ್ ಒಡೆಯರಾದ ಶ್ರೀ ಎಂ. ಎಸ್. ಚಿಂತಾಮಣಿಯವರ ಉಪಕಾರವೂ ಸ್ಮರಣೀಯ.

ಇಂದಿರಾತನಯ

## ಅರ್ಪಣೆ

ಚಿಕ್ಕೇನಹಳ್ಳಿಯ ಶ್ರೀಮಾನ್ ಮಂಚೇಗೌಡ
ಮತ್ತು ಶ್ರೀಮತಿ ಅಂಕಮ್ಮ – ಇವರಿಗೆ

— ಇಂದಿರಾತನಯ

# ಶಕ್ತಿ ಪೂಜೆ

ಭದ್ರಯ್ಯ................

ಅಬ್ಬಾ! ಎಂಥ ಕ್ರೂರವ್ಯಕ್ತಿ ಆತ!! ಅವನನ್ನು ಒಂದುಸಾರಿ ನೋಡಿದರೇ ಮೈ ನಡುಗುತ್ತದೆ. ಬೆನ್ನಿನಮೇಲೆ ನೀಳವಾಗಿ ಬಿಟ್ಟ ಆ ಕೇಶ ರಾಶಿ, ಕಿವಿಯಲ್ಲಿನ ಆ ದಪ್ಪ ಕಡಕು, ಹಣೆಯ ಅಡ್ಡಕ್ಕೆ ಚೌಕಾಕಾರವಾಗಿ ಇಟ್ಟ ಕುಂಕುಮ, ಅಗಲವಾದ ಕಣ್ಣುಗಳು, ದಪ್ಪವಾದ ಮೂಗು, ಮೇಲು ತುಟಿಯನ್ನು ಬಿಲ್ಲಿನಾಕಾರದಲ್ಲಿ ಸುತ್ತುವರಿದ ದಟ್ಟವಾದ ಮೀಸೆ, ಪುಷ್ಟವಾದ ಸ್ಥೂಲಕಾಯ, ಕಬ್ಬಿಣದ ಕಂಬಗಳಂತೆ ದೃಢವಾಗಿ–ಕಪ್ಪಾಗಿ ಇದ್ದ ಕಾಲುಗಳು ಭದ್ರಯ್ಯನನ್ನು ಭದ್ರವಾದ ಆಳೆಂದೇ ಸಾರುತ್ತಿದ್ದವು.

ಇಂಥಹ ಭದ್ರವಾದ ಆಳನ್ನೂ ಸಭಾಪತಿಶಾಸ್ತ್ರಿಗಳು ಒಮ್ಮೆ 'ಗಡಗಡ'ನೆ ನಡುಗಿಸಿದರು.

ಒಂದು ದಿನ ಸಭಾಪತಿಶಾಸ್ತ್ರಿಗಳು ತಮ್ಮ ದೊಡ್ಡಮ್ಮನ ಮಗ ವೆಂಕಟೇಶಯ್ಯನ ಹೆಂಡತಿ ನರಸಮ್ಮನಿಗೆ ತುಂಬಾ ಕಾಯಿಲೆಯೆಂದು ತಿಳಿದು, ಆಕೆಯನ್ನು ನೋಡಿಕೊಂಡು ಬರಲು ತಮ್ಮ ಮನೆಯವರನ್ನೆಲ್ಲಾ ಕರೆದು ಕೊಂಡು ಅಲಸೂರು ಪೇಟೆಯಲ್ಲಿದ್ದ ಅವರ ಮನೆಗೆ ಹೊರಟರು. ದಾರಿಯಲ್ಲಿ ಭದ್ರಯ್ಯ ಎದುರಾದ. ಶಾಸ್ತ್ರಿಗಳ ಮನೆಯವರಾರೂ ಅವನನ್ನು ಗಮನಿಸಲಿಲ್ಲ. ಎದುರಿಗೆ ಬಂದ ಭದ್ರಯ್ಯ ಈ ಪರಿವಾರವನ್ನೇ ಹಿಂಬಾಲಿಸುತ್ತಾ ಬಂದ. ಶಾಸ್ತ್ರಿಗಳು ಹೋಗಬೇಕಾಗಿದ್ದ ವೆಂಕಟೇಶಯ್ಯನ ಮನೆಯ ಪಕ್ಕದಲ್ಲಿಯೇ ಭದ್ರಯ್ಯನ ಮನೆ.

ಹಿಂಬಾಲಿಸುತ್ತಿದ್ದ ಭದ್ರಯ್ಯ ಶಾಸ್ತ್ರಿಗಳ ತಂಗಿ ರುಕ್ಕಮ್ಮನನ್ನೇ ನೋಡುತ್ತ ಬರುತ್ತಿದ್ದ. ಆಕೆ ಪ್ರಥಮ ಬಾರಿಗೆ ಋತುಮತಿಯಾಗಿ ಅಂದಿಗೆ ಐದುದಿನಗಳಾಗಿದ್ದುವು. ಯೌವ್ವನಕ್ಕೆ ಅಡಿಯಿಟ್ಟ ಆ ಹೊಸದರಲ್ಲಿ ರುಕ್ಮಿಣಿ ತನ್ನ ಸೌಂದರ್ಯಕ್ಕೆ ಇನ್ನಷ್ಟು ಮೆರಗುಕೊಟ್ಟಂತೆ ತುಂಬಾ ಚೆಲುವಾಗಿ ಕಾಣು ತ್ತಿದ್ದಳು.

ಶಾಸ್ತ್ರಿಗಳು ವೆಂಕಟೇಶಯ್ಯನ ಮನೆಯ ಬಳಿಗೆ ಬಂದರು. ಇನ್ನೇನು ಹೊಸಲು ದಾಟಿ, ಒಳಗೆ ಹೋಗಬೇಕು—ಅಷ್ಟರಲ್ಲಿ ಗಟ್ಟಿಯಾಗಿ ಕೆಮ್ಮಿ, ಗಂಟಲು ಸರಿಮಾಡಿಕೊಳ್ಳುವ ಶಬ್ದ ಕೇಳಿಸಿತು. ಸಹಜವಾಗಿ ಎಲ್ಲರೂ ಹಿಂತಿರುಗಿ ನೋಡಿದರು. ಭದ್ರಯ್ಯ ತನ್ನ ಮೀಸೆಯ ಮೇಲೆ ಕೈಯಾಡಿಸುತ್ತಾ ರುಕ್ಮಿಣಿಯನ್ನೇ ನೋಡಿ ಶಬ್ದವಿಲ್ಲದಂತೆ ನಕ್ಕ. ಆ ದೃಶ್ಯವನ್ನು ಕಂಡ ಸಭಾಪತಿಶಾಸ್ತ್ರಿಗಳು ತುಂಬಾ ಕಸಿವಿಸಿಗೊಂಡರು.

ರುಕ್ಮಿಣಿಯನ್ನೇ ನೋಡುತ್ತಾ, ಮೆಲ್ಲಮೆಲ್ಲನೆ ಹೆಜ್ಜೆ ಇಡುತ್ತಿದ್ದ ಭದ್ರಯ್ಯ ಪಕ್ಕದಲ್ಲಿಯೇ ಇದ್ದ ತನ್ನ ಮನೆಯನ್ನು ಹೊಕ್ಕ.

"ಅಯೋಗ್ಯ—ಚಂಡಾಲ........"

—ಎಂದು ಗೊಣಗುತ್ತಾ ಶಾಸ್ತ್ರಿಗಳು ವೆಂಕಟೇಶಯ್ಯನ ಮನೆಯನ್ನು ಹೊಕ್ಕರು.

ವೆಂಕಟೇಶಯ್ಯ ಶಾಸ್ತ್ರಿಗಳ ದೊಡ್ಡಮ್ಮನ ಮಗ. ಆತನಿಗೆ ಗೊತ್ತಾದ ಉದ್ಯೋಗವೇನೂ ಇರಲಿಲ್ಲ. ಕೆಲಕಾಲ ಮುದ್ರಣಾಲಯದಲ್ಲಿ 'ಕಂಪೋಜಿಟರ್' ಆಗಿದ್ದ. ಅನಂತರ ಹೊಲಿಗೆಯ ಕೆಲಸವನ್ನು ಕಲಿತುಕೊಂಡು ದರ್ಜಿ ಅಂಗಡಿಯೊಂದರಲ್ಲಿ ಕೆಲಸಕ್ಕಿದ್ದ. ಅದನ್ನೂ ಬಿಟ್ಟು ಸ್ವಲ್ಪಕಾಲ ಅಚ್ಚ ವೈದೀಕನಾಗಿ ಪೌರೋಹಿತ್ಯವನ್ನು ಮಾಡುತ್ತಿದ್ದ. ಇಷ್ಟಾದರೂ ವೆಂಕಟೇಶಯ್ಯನಿಗೆ ಒಂದು ಹುಚ್ಚು—ಸಂಗೀತ ಕಲಿಯಬೇಕೆಂಬ ಹುಚ್ಚು !

ಹೊಟ್ಟೆಯ ಪಾಡಿಗಾಗಿ ಅವನು ಹಲವಾರು ಉದ್ಯೋಗಗಳನ್ನು ಮಾಡುತ್ತಿದ್ದರೂ ಸಂಗೀತ ಕಲಿಯುವುದನ್ನು ಮಾತ್ರ ಅವನು ಬಿಟ್ಟಿರಲಿಲ್ಲ. ಪಿಟೀಲು ನುಡಿಸುವುದರಲ್ಲಿ ಪ್ರಾವೀಣ್ಯತೆಯನ್ನು ಗಳಿಸಿಕೊಳ್ಳಬೇಕೆಂಬುದೇ ಅವನ ಮುಖ್ಯ ಉದ್ದೇಶವಾಗಿತ್ತು. ಆ ತನ್ನ ಉದ್ದೇಶವನ್ನು ಅಪಾರ ಶ್ರಮದಿಂದ ಸಾಧಿಸಿಕೊಂಡು, ಒಳ್ಳೆಯ ಪಿಟೀಲು ವಿದ್ವಾಂಸನಾಗಿದ್ದ.

ಒಂದು ಸಾರಿ ರಾಮೋತ್ಸವದ ಅಂಗವಾಗಿ ಮಲ್ಲೇಶ್ವರದ ರಾಮಸೇವಾ ಮಂಡಳಿಯವರು ಏರ್ಪಡಿಸಿದ್ದ ಸಂಗೀತ ಕಚೇರಿಯಲ್ಲಿ ವೆಂಕಟೇಶಯ್ಯ ಭರ್ಜರಿಯಾಗಿ ಪಿಟೀಲು ಬಾರಿಸಿ ಜನ ಮನರಂಜನೆ ಮಾಡಿದ್ದ. ಅಂದಿನಿಂದ ಅವನ ಅದೃಷ್ಟವೇ ಬದಲಾಗಿತ್ತು.

ಆ ದಿನದ ಸಂಗೀತ ಕಚೇರಿ ಮುಗಿದ ಬಳಿಕ, ಹಲವಾರು ಮಂದಿ ವೆಂಕಟೇಶಯ್ಯನ ಸಂದರ್ಶನ ಪಡೆದು ಅವನನ್ನು ಹೊಗಳಿದರು. ನಾಲ್ಕಾರು

ಮಂದಿ ಅನುಕೂಲಸ್ಥರು ತಮ್ಮ ಮನೆಯ ಮಕ್ಕಳಿಗೆ ಸಂಗೀತಪಾಠ ಹೇಳಿಕೊಡಲು ವೆಂಕಟೇಶಯ್ಯನನ್ನು ಕೇಳಿಕೊಂಡರು.

ಅಂದಿನಿಂದ ಅವನ ಹೊಟ್ಟೆಯ ಪಾಡಿನ ಚಿಂತೆ ಕೊನೆಗೊಂಡಿತು. ತಿಂಗಳಿಗೆ ಸುಮಾರು ಇನ್ನೂರು ರೂಪಾಯಿಗಳವರೆಗೆ ಸಂಗೀತಪಾಠದಿಂದಲೇ ಸಂಪಾದಿಸುತ್ತಿದ್ದ. ಆದರೆ ಸಂಗೀತಕಲೆ ಅವನ ಕರಗತವಾದಂತೆ, ಸಂಪಾದನೆ ಹೆಚ್ಚಿದಂತೆ, ವೆಂಕಟೇಶಯ್ಯನ ರಸಿಕತೆಯೂ ಹೆಚ್ಚಿತು. ದಿನದಿನಕ್ಕೆ ಶೃಂಗಾರ ಪ್ರಿಯನಾಗುತ್ತಿದ್ದ ಆತ ಕಂಡಕಂಡ ಹೆಣ್ಣುಮಕ್ಕಳ ಮೇಲೆಲ್ಲಾ ಕಣ್ಣುಹರಿಸಿ ಕೆಟ್ಟಬಯಕೆಯನ್ನು ವ್ಯಕ್ತಪಡಿಸುತ್ತಿದ್ದ. ಇದರಿಂದಾಗಿ ವೆಂಕಟೇಶಯ್ಯನ ಅಧಃಪತನ ಬಹುಬೇಗನೆ ಆರಂಭವಾಯಿತು.

ಸಂಗೀತಪಾಠ ಹೇಳಿಸಿಕೊಳ್ಳುತ್ತಿದ್ದ ಹೆಣ್ಣುಮಕ್ಕಳು ವೆಂಕಟೇಶಯ್ಯನ ಬಗ್ಗೆ ತಮ್ಮ ಹಿರಿಯರಿಗೆ ದೂರುಕೊಟ್ಟರು. ಅವನ ಕೆಟ್ಟಕಣ್ಣಿನ ನೋಟವನು ಸೂಕ್ಷ್ಮವಾಗಿ ಬಣ್ಣಿಸಿ, ತಮಗಿನ್ನು ಸಂಗೀತಪಾಠ ಸಾಕೆಂದು ಹೇಳಿದರು. ಸ್ವತಃ ತಮ್ಮ ಮಕ್ಕಳೇ 'ಪಿಟೀಲು ಮೇಷ್ಟ್ರು' ವಿಷಯದಲ್ಲಿ ಬೇಸರಪಟ್ಟುಕೊಂಡಾಗ ಹಿರಿಯರು ಸುಮ್ಮನಿರುವರೇ ?

"ನಮ್ಮ ಹುಡುಗಿಗೆ ಸಂಗೀತಪಾಠ ಸಾಕು ಮೇಷ್ಟ್ರೇ. ನಾಳೆಯಿಂದ ನೀವು ಬರುವ ತೊಂದರೆ ತೆಗೆದುಕೊಳ್ಳಬೇಡಿ"

ಎಂಬರ್ಥದ ಮಾತುಗಳು ಬೇರೆ ಬೇರೆ ರೀತಿಯಲ್ಲಿ ವೆಂಕಟೇಶಯ್ಯನ ಕಿವಿಗೆ ಕೇಳಿಸಲಾರಂಭವಾಯಿತು. ದಿನ ದಿನಕ್ಕೆ ಪಾಠದ ಮನೆಗಳು ಕಡಿಮೆಯಾದವು. ಸಂಪಾದನೆ ಇನ್ನೂರುರೂಪಾಯಿಗಳಿಂದ ಐವತ್ತು ರೂಪಾಯಿಗೆ ಇಳಿದಾಗ ವೆಂಕಟೇಶಯ್ಯ ತಲೆಯಮೇಲೆ ಕೈಹೊತ್ತು ಕುಳಿತ.

ತಿಂಗಳ ಮೊದಲನೆಯ ತಾರೀಕಿಗೆ, ಬಾಡಿಗೆ ಕೊಡಬೇಕಾದಾಗ ವೆಂಕಟೇಶಯ್ಯ ವಿಶ್ವಸಾಹಸ ಮಾಡುತ್ತಿದ್ದ. ಹಾಲು ಮೊಸರಿನವರದ್ದಂತೂ ನಿತ್ಯರಾದ್ಧಾಂತ. ಅರೆಹೊಟ್ಟೆ ಒಪ್ಪತ್ತು ಊಟ, ಸಂಪೂರ್ಣ ಉಪವಾಸಗಳಿಂದಾಗಿ ಮನೆಯವರೆಲ್ಲಾ ದಿನದಿನಕ್ಕೆ ಸೊರಗಿಹೋಗುತ್ತಿದ್ದುದನ್ನು ನೆರೆಹೊರೆಯವರು ಅರಿತುಕೊಳ್ಳದಿರಲಿಲ್ಲ.

"ಈ ಸಂಗೀತದ ಮೇಷ್ಟ್ರಿಗೆ ಬಂದ ಗತಿ ಯಾರಿಗೂ ಬರುವುದಿಲ್ಲ"

– ಎಂದು ಆ ಸಂಸಾರದ ಸ್ಥಿತಿಯನ್ನು ಬಲ್ಲ ಹಲಕೆಲವರು ಅಂದುಕೊಂಡಿದ್ದು ವೆಂಕಟೇಶಯ್ಯನ ಕಿವಿಗೂ ಬಿದ್ದಿತ್ತು. ಆ ಸಮಯದಲ್ಲಿ ಆತ

ಮತ್ತೆ ಮುದ್ರಣಾಲಯವೊಂದನ್ನು ಸೇರಿ, 'ಕಂಪೋಜಿಟರ್' ಕೆಲಸದಿಂದ ಅಲ್ಪ ಸ್ವಲ್ಪ ಸಂಪಾದಿಸಬೇಕೆಂದು ನಿಶ್ಚಯಿಸಿದ್ದ.

ಇಂತಹ ದುರ್ದೆಶೆಯಲ್ಲಿ ನೆರವಿಗೆ ಬಂದವನು ನೆರೆಮನೆಯ ಭದ್ರಯ್ಯ.

ಒಂದು ದಿನ ಬಾಡಿದ ಮುಖದ ವೆಂಕಟೇಶಯ್ಯ ತಲೆತಗ್ಗಿಸಿಕೊಂಡು ಎಲ್ಲಿಗೋ ಹೊರಟಿದ್ದ. ಆ ಸಮಯದಲ್ಲಿ ತನ್ನ ಮನೆಯ ಮುಂದಿನ ಪುಟ್ಟ ಜಗುಲಿಯ ಮೇಲೆ ಕುಳಿತಿದ್ದ ಭದ್ರಯ್ಯ—

"ಏನ್ ಸ್ವಾಮಿ, ಈ ಬಿಸಿಲಾಗೇ ಎತ್ಲಾಗೋ ಹೊಂಟ್ರಲ್ಲ........"

ಎಂದು ಮಾತನಾಡಿಸಿದ. ವೆಂಕಟೇಶಯ್ಯ ಅರೆಕ್ಷಣ ಅಲ್ಲಿಯೇ ನಿಂತು ಗೆಲುವಿಲ್ಲದ ನಗೆಯನ್ನು ನಕ್ಕ.

"ಬನ್ನಿ, ಒಸಿ ಕುಂತ್ಕೊಂಡ್ ಓಗೀರಂತೆ"

ಭದ್ರಯ್ಯ ಆಹ್ವಾನಿಸಿದೊಡನೆ ವೆಂಕಟೇಶಯ್ಯ ಅತ್ತ ನಡೆದ. ಕುಳಿತಿದ್ದ ಭದ್ರಯ್ಯ ಒಳಗೆ ಹೋಗಿ ಚಾಪೆ ಹಾಸಿದ. ವೆಂಕಟೇಶಯ್ಯ ಕುಳಿತುಕೊಂಡ.

"ಏನು ಈ ನಿಗಿನಿಗಿ ಬಿಸಿಲಾಗೇ ಒಂಟಿದ್ದೀರಲ್ಲಾ"

"ಸುಮ್ಮನೆ ಭದ್ರಯ್ಯನವರೆ"

"ಇಷ್ಟೊತ್ತಾಗಿದ್ದರೂ ಇನ್ನಾ ಊಟ ಆದಂಗೆ ಕಾಣೋಕಿಲ್ಲಲ್ಲಾ"

"ಇಲ್ಲ, ಇವತ್ತು ಬೇಗನೆ ಊಟಮಾಡಿ ಸ್ವಲ್ಪ ಹೊತ್ತು ಮಲಗಿದ್ದೆ...."

ವೆಂಕಟೇಶಯ್ಯ ನಿಜಸಂಗತಿ ಮುಚ್ಚಿಡುತ್ತಿದ್ದಾನೆಂದು ತಿಳಿಯಲು ಭದ್ರಯ್ಯನಿಗೆ ಬಹುಕಾಲ ಬೇಕಾಗಲಿಲ್ಲ. ಕೂಡಲೇ ಅವನು ಒಳಗೆ ಹೋಗಿ ಒಂದು ಚಿಪ್ಪು ಬಾಳೆಯ ಹಣ್ಣನ್ನೂ ಒಂದು ಹೋಳು ತೆಂಗಿನ ಕಾಯನ್ನೂ ಸಕ್ಕರೆಯನ್ನೂ ತಂದು ವೆಂಕಟೇಶಯ್ಯನ ಮುಂದಿಟ್ಟ.

"ಇದೆಲ್ಲಾ ಏನು ಭದ್ರಯ್ಯನವರೆ ?"

"ತಗೋಣ್ರಿ ಸ್ವಾಮಿ – ಪರವಾಕಿಲ್ಲ. ಹಣ್ ತಿಂದ್ರೆ ಏನಾಯ್ತದೆ"

"ನನಗೆ ಹೊಟ್ಟೆ ತುಂಬಿದೆ. ಏನೂ ಬೇಕಾಗಿಯೇ ಇಲ್ಲ"

"ಪರವಾಕಿಲ್ಲ ಸ್ವಾಮಿ – ತಿನ್ನಿ"

ಭದ್ರಯ್ಯನ ಬಲವಂತಕ್ಕೆ ವೆಂಕಟೇಶಯ್ಯ ಒಂದು ಬಾಳೆಹಣ್ಣನ್ನು ಸುಲಿದು ಬಾಯಿಗಿಟ್ಟುಕೊಂಡನು.

"ಇದ್ಯಾಕ್ ಸ್ವಾಮಿ, ಬತ್ತಾ ಬತ್ತಾ ಇಂಗ್ ಸನ್‌ಗಾಗಿ ಬುಟ್ರಿ ?"

ಭದ್ರಯ್ಯನ ಮಾತಿಗೆ ವೆಂಕಟೇಶಯ್ಯ ವಿಷಾದದಿಂದ ನಕ್ಕ.

" ನೆಗ್ ನೆಗ್ತಾ ಚಂದಾಕಿದ್ದೋರು, ಭರ್ಜರಿಯಾಗಿ ಸರಿಗೆ ಶಲ್ಯಾವು ಒದ್‌ಕೊಂಡ್ ಬೀದೀಲಿ ತಿರುಗಾಡ್ತಿದ್ದೋರು ಇದ್ದಕ್ಕಿದ್ದಂಗೆ ಇಂಗಾಗ್ ಬುಟ್ರಲ್ ನೀವು........ "

" ಅದು ನನ್ನ ದೃರದೃಷ್ಟ ಭದ್ರಯ್ಯನವರೆ "

" ಅದೇನ್ ಸ್ವಾಮಿ ಅಂಥಾದ್ದು ? "

ವೆಂಕಟೇಶಯ್ಯ ತನಗೆ ದುರ್ದೆಶೆ ಪ್ರಾಪ್ತವಾದ ರೀತಿಯನ್ನು ನಿಧಾನವಾಗಿ ಹೇಳತೊಡಗಿದ. ಸಂಗೀತಪಾಠ ಹೇಳಿಸಿಕೊಳ್ಳುತ್ತಿದ್ದ ಮನೆಗಳವರು ತನ್ನನ್ನಿನ್ನು ಬರಬೇಡವೆಂದು ಹೇಳಿದುದನ್ನೂ, ಅದರಿಂದಾಗಿ ತಮ್ಮ ಸಂಪಾದನೆಗೆ ಸಂಚಕಾರ ಬಂದುದನ್ನೂ ಭದ್ರಯ್ಯನಿಗೆ ವಿವರವಾಗಿ ಬಣ್ಣಿಸಿದ. ಆದರೆ ಹಿಗಾಗಲು ತನ್ನ ಪಾಲಿನ ತಪ್ಪಾದ ' ಹೆಣ್ಣಿನ ಹುಚ್ಚೇ ' ಕಾರಣವೆಂಬುದನ್ನು ವೆಂಕಟೇಶಯ್ಯ ಹೇಳಲಿಲ್ಲ.

" ಅಯ್ಯೋ ಪಾಪ ! ಇಂಗೇ ಅಂತ ನನ್ಗೆ ಮೊದ್ಲೇ ಹೇಳೋಕಿಲ್ಲವ್ರಾ?"

ಭದ್ರಯ್ಯನ ಆ ಮರುಕದ ಮಾತಿನ ಹಿಂದೆ ದುರಾಸೆಯ ದುರಾಲೋಚನೆ ಇಣುಕುತ್ತಿದ್ದುದು ವೆಂಕಟೇಶಯ್ಯನಿಗೆ ಹೊಳೆಯಲಿಲ್ಲ.

" ಹೇಗೆ ಹೇಳಲಿ ಭದ್ರಯ್ಯನವರೆ. ನನ್ನ ಕಷ್ಟವನ್ನು ನಿಮಗೂ ಹಂಚಿ ಕೊಡುವುದು ಯಾವ ನ್ಯಾಯ ? "

" ಅಂಗೆಲ್ಲಾ ಅನ್ಬೇಡಿ ಸ್ವಾಮಿ. ಭದ್ರಯ್ಯನ ಬುದ್ಧೀನ ನೀವು ಕಾಣ್ರಿ !"

ಮಿಸೆಯಮೇಲೆ ಕೈಯ್ಯಾಡಿಸುತ್ತಾ ಭದ್ರಯ್ಯ ಹೆಮ್ಮೆಯಿಂದ ಹೇಳಿದ.

ವೆಂಕಟೇಶಯ್ಯ ಕಳೆಗುಂದಿದ ಮುಖದಿಂದ ತೆಪ್ಪಗೆ ಕುಳಿತಿದ್ದ.

" ಅವ್ವಾ, ಆ ಬ್ಯಾಗ್‌ನಾಗ ನಾಲ್ಕು ಸೇರು ಅಕ್ಕಿ ಹಾಕ್ಕೊಂಡ್ ತತ್ತಾ ಇಲ್ಲಿ "

ಎಂದು ಭದ್ರಯ್ಯ ಒಳಗಡೆ ಇದ್ದ ತನ್ನ ಮುದಿತಾಯಿಗೆ ಗಟ್ಟಿಯಾಗಿ ಕೂಗಿ ಹೇಳಿದ.

ಅವನಿಗೆ ಕಿವುಡಿಯಾದ ತಾಯಿಯನ್ನು ಬಿಟ್ಟು ಹೆಂಡತಿಯಾಗಲಿ, ಮಕ್ಕಳಾಗಲಿ, ಅಥವಾ ಬೇರೆ ಬಂಧುಗಳಾಗಲಿ ಇರಲಿಲ್ಲ. ಹಿಂದೊಮ್ಮೆ ಅವನಿಗೆ ಮದುವೆಯಾಗಿತ್ತಾದರೂ, ಮನೆಗೆ ಬಂದಿದ್ದ ಹೆಂಡತಿಯನ್ನು ಆರುತಿಂಗಳೂ

ಸರಿಯಾಗಿ ಬಾಳುಗೊಡಿಸದೆ, ತನ್ನ ಕೈಯ್ಯಾರೆ ಆ ಹೆಣ್ಣನ್ನು ಕೊಂದಿದ್ದ.

ಬೆಟ್ಟಹಳ್ಳಿಯ ಮುನಿಯಮ್ಮನನ್ನು ಮದುವೆಯಾದ ಹೊಸದರಲ್ಲಿ ಭದ್ರಯ್ಯನಿಗೆ ರಾಮಸಂದ್ರದ ನಿಂಗಣ್ಣನ ಪರಿಚಯವಾಯಿತು.

ನಿಂಗಣ್ಣ ಯಾವುದೋ ಒಂದು ಭೂತಶಕ್ತಿಯನ್ನು ವಶಪಡಿಸಿಕೊಂಡು, ಅದರ ಸಹಾಯದಿಂದ ಅನೇಕ ಅದ್ಭುತ – ಅಮಾನುಷ ಕೃತ್ಯಗಳನ್ನು ಮಾಡುತ್ತಿದ್ದ. ಅದನ್ನು ಕಂಡ ಭದ್ರಯ್ಯನ ಮನಸ್ಸು ಅತ್ತ ಸೆಳೆಯಿತು. ಅವನು ನಿಂಗಣ್ಣನ ಬೆನ್ನು ಹಿಂದೆಯೇ ತಿರುಗಲಾರಂಭಿಸಿದ. ಅವರಿಬ್ಬರೂ ಸಮ ವಯಸ್ಕರಾಗಿದ್ದರಿಂದ ಪರಸ್ಪರ ಸ್ನೇಹ ಬೇಗನೆ ಬೆಳೆಯಿತು.

ನಿಂಗಣ್ಣ ಬೆಂಗಳೂರಿಗೆ ಬಂದಾಗಲೆಲ್ಲಾ ಭದ್ರಯ್ಯನ ಮನೆಯಲ್ಲೇ ಬಿಡಾರ ಮಾಡುತ್ತಿದ್ದ. ಅವನು ಬಂದು ಹೋಗುವುದು ಹೆಚ್ಚಾದಂತೆ ಮುನಿಯಮ್ಮನೊಡನೆಯೂ, ಭದ್ರಯ್ಯನ ಮುದಿತಾಯಿಯೊಡನೆಯೂ ಅತಿಯಾದ ಸಲಿಗೆ ಬೆಳೆಯಿತು. ಆ ಸಲಿಗೆಯನ್ನು ದುರುಪಯೋಗಪಡಿಸಿಕೊಳ್ಳಲು ನಿಂಗಣ್ಣ ಮುಂದಾದ........

ಒಂದು ಮುಚ್ಚಂಜೆ ಭದ್ರಯ್ಯ ಮನೆಯಲ್ಲಿಲ್ಲದ ಸಮಯವನ್ನು ಸಾಧಿಸಿ, ನಿಂಗಣ್ಣ ಘಮಘಮಿಸುವ ಕೆಂಡ ಸಂಪಿಗೆಯನ್ನು ತನ್ನ ಕರವಸ್ತ್ರದಲ್ಲಿ ಕಟ್ಟಿಕೊಂಡು ಮುನಿಯಮ್ಮನನ್ನು ಕಾಣಲು ಬಂದ. ಆ ದಿನ ಭದ್ರಯ್ಯನ ತಾಯಿ ಅನಾರೋಗ್ಯದಿಂದ ನರಳುತ್ತಾ ಕತ್ತಲೆ ತುಂಬಿದ ಕೋಣೆಯ ಮೂಲೆಯಲ್ಲಿ ಮಲಗಿದ್ದುದು ನಿಂಗಣ್ಣನಿಗೆ ಇನ್ನಷ್ಟು ಉತ್ಸಾಹವನ್ನುಂಟುಮಾಡಿತ್ತು.

ಸದ್ದುಮಾಡದೆ ನೇರವಾಗಿ ಒಳಗೆ ಬಂದ ನಿಂಗಣ್ಣ ಒಲೆಯಮುಂದೆ ಕುಳಿತಿದ್ದ ಮುನಿಯಮ್ಮನ ಕಣ್ಣು ಮುಚ್ಚಿದಾಗ, ಆಕೆ ಗಾಬರಿಗೊಂಡಳು. ಭದ್ರಯ್ಯ ತನ್ನ ಹೆಂಡತಿಯ ವಿಷಯದಲ್ಲಿ ಎಂದೂ ಇಷ್ಟೊಂದು ಸಲಿಗೆ ವಹಿಸಿರಲಿಲ್ಲ. ಎಂದಮೇಲೆ – 'ಇಂದೇನು ಈ ಹೊಸರೀತಿ?' ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು ಮುನಿಯಮ್ಮ.

ತನ್ನ ಕಣ್ಣುಗಳನ್ನು ಮುಚ್ಚಿದ್ದ ಗಂಡಸಿನ ಕೈಗಳನ್ನು ಆಕೆ ನಿಧಾನವಾಗಿ ಸಡಲಿಸಲು ಯತ್ನಿಸಿದಳು. ಅಷ್ಟರಲ್ಲಿ ನಿಂಗಣ್ಣನೇ ತನ್ನ ಕೈ ತೆಗೆದು, ಅವಳ ಕಣ್ಮುಂದೆ ಕೆಂಡಸಂಪಿಗೆಯನ್ನು ಕಟ್ಟಿದ್ದ ಕರವಸ್ತ್ರವನ್ನು ಹಿಡಿದ. ಸಂಪಿಗೆಯ ವಾಸನೆಗಿಂತ ಆ ಕರವಸ್ತ್ರದ ವಾಸನೆಯೇ ಮುನಿಯಮ್ಮನಿಗೆ ಹೆಚ್ಚು ಪ್ರಿಯವಾಗಿ ತೋರಿತು. ಆಕೆ ಮರುಳುಗೊಂಡವಳಂತೆ ಆ ಕರವಸ್ತ್ರ

ವನ್ನೇ ಮತ್ತೆ ಮತ್ತೆ ಮೂಗಿನ ಬಳಿಗೊಯ್ದು ಮೂಸಿದಳು. ನಿಂಗಣ್ಣನಿಗೂ ಅದೇ ಬೇಕಾಗಿತ್ತು. ಆತ ಆ ಕರವಸ್ತ್ರಕ್ಕೆ ಸುಗಂಧ ದ್ರವ್ಯವನ್ನು ಚಿಮುಕಿಸಿ, ತನ್ನ ಭೂತಶಕ್ತಿಯ ನೆರವಿನಿಂದ 'ವಶೀಕರಣ'ದ ಆಕರ್ಷಕ ಶಕ್ತಿಯನ್ನು ತುಂಬಿದ್ದ.

ಒಲೆಯ ಮುಂದೆ ಕುಳಿತು ರಾತ್ರಿಯ ಅಡಿಗೆ ಮಾಡುತ್ತಿದ್ದ ಮುನಿಯಮ್ಮ ತನ್ನನ್ನು ತಾನೇ ಮರೆತು ಬಿಟ್ಟಿದ್ದಳು. ನಿಂಗಣ್ಣ ಅವಳ ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡಾಗ ಮುನಿಯಮ್ಮನ ಮುಖ ಕಳವಳಗೊಂಡಿತ್ತು.

"ಓ ನೀನಾ ನಿಂಗಪ್ಪಣ್ಣಾ! ನಾನೆಲ್ಲೋ 'ಅವರೇ'ನೋ ಅಂತಿದ್ದೆ"

ಮುನಿಯಮ್ಮ ಆಶ್ಚರ್ಯಚಕಿತಳಾಗಿ ಕೇಳಿದಾಗ, ನಿಂಗಣ್ಣ ಇನ್ನಷ್ಟು ಮುಂದರಿದು ಅವಳ ಮುಖಕ್ಕೆ ಮುಖವಿಟ್ಟು ಬಿಗಿಯಾಗಿ ಅಪ್ಪಿಕೊಂಡ. ಅವಳು ಸದ್ದು ಮಾಡದೆ, ಬೇಡವೆಂದು ಹೇಳದೆ ಸುಮ್ಮನಿದ್ದಳು.

"ಎಷ್ಟ್ ಚೆಂದಾಕಿದ್ದೀಯಾ ಮುನಿ ನೀನು ?"

"ನೀನ್ ಚೆಂದಾಕಿಲ್ವಾ ನಿಂಗಪ್ಪಣ್ಣ ?"

"ಇಬ್ರೂವೇ ಚೆಂದಾಕಿದ್ದೀವಿ....ಬೋ ಚೆಂದಾಕಿದ್ದೀವಿ'

ನಿಂಗಣ್ಣ ತನ್ನ ತೋಳ ಸೆರೆಯಲ್ಲಿ ಇನ್ನಷ್ಟು ಬಿಗಿಯಾಗಿ ಮುನಿಯಮ್ಮನನ್ನು ಬಂಧಿಸಿದಾಗ ಸೆರಗು ಜಾರಿ, ಸೀರೆಯಕಟ್ಟು ಸಡಿಲವಾಯಿತು. ಹಾಗೆಯೇ ಅವಳ ಕೈಯ್ಯಲ್ಲಿದ್ದ ಕೆಂಡಸಂಪಿಗೆ ಕಟ್ಟಿದ್ದ ಕರವಸ್ತ್ರವೂ ಕೆಳಗೆ ಬಿದ್ದಿತು. ಕಾಮಾಂಧನಾಗಿದ್ದ ನಿಂಗಣ್ಣ ತಾನೇನು ಮಾಡುತ್ತಿದ್ದೇನೆಂಬ ಪ್ರಜ್ಞೆಯಿಲ್ಲದೆ, ಕೆಳಗೆ ಬಿದ್ದ ಹೂವಿನಮೇಲೆ ಕಾಲಿಟ್ಟು ಒಸಕಿದ.

ಕರವಸ್ತ್ರ ಕೈತಪ್ಪಿ ಕೆಳಗೆ ಬಿದ್ದಕ್ಷಣದಿಂದ ಮುನಿಯಮ್ಮನ ಮೈ ಬಿಸಿಯಾಗತೊಡಗಿತು. ಮರುಳಾಗಿದ್ದ ಅವಳ ಮನಸ್ಸು ಮರಳಿ ತಿಳಿವು ಪಡೆಯಲಾರಂಭಿಸಿತ್ತು. ನಿರ್ಭಯವಾಗಿ ಪರಪುರುಷನೊಡನೆ ಸಂಗಸುಖಕ್ಕೆ ಸಿದ್ಧವಾಗಿದ್ದ ಅವಳ ಮೈ ನಡುಗಲಾರಂಭಿಸಿತು. ಹಣೆಯಮೇಲೆ ಬೆವರು ಹನಿಗಳು ಮೂಡಿ ನಿಂತವು.

ಹೀಗೆ ಎರಡು ನಿಮಿಷ ಕಳೆಯುವಷ್ಟರಲ್ಲಿ, ಮುನಿಯಮ್ಮ ತಟ್ಟನೆ ರೌದ್ರಾವೇಶಗೊಂಡು ನಿಂಗಣ್ಣನ ಎದೆಗೆ ಬಲವಾಗಿ ಗುದ್ದಿ, ಅವನ ತೋಳ್ಸೆರೆಯಿಂದ ಬಿಡಿಸಿಕೊಂಡು ದೂರ ನಿಂತಳು. ಅವಳ ಆ ಒಂದು ಪೆಟ್ಟಿಗೇ ನಿಂಗಣ್ಣನಿಗೆ ತಲೆ ತಿರುಗುವಂತಾಗಿತ್ತು. ಎದೆಗೆ ಪೆಟ್ಟು ಬಿದ್ದುದರಿಂದ ಎರಡು

ಕ್ಷಣ ಅವನ ಉಸಿರೇ ನಿಂತಂತಾಗಿತ್ತು.

ಮುನಿಯಮ್ಮ ಸರಿಯಾಗಿ ಸೀರೆಯುಟ್ಟು ಕೆದರಿದ ಮುಂಗೂದಲನ್ನು ನೇವರಿಸಿ ಕೊಂಡಳು. ಕೆಂಡಸಂಪಿಗೆ ಕಟ್ಟಿದ ಕರವಸ್ತ್ರವನ್ನು ಎತ್ತಿಕೊಂಡು, ಉರಿಯುತ್ತಿದ್ದ ಒಲೆಗೆ ಸಿಟ್ಟಿನಿಂದ ಎಸೆದಳು. ಅನಂತರ ನಿಂಗಣ್ಣನ ಕಡೆಗೆ ತಿರುಗಿ—

"ಏಟೊಂದು ಧೈರ್ಯಮಾಡ್ದೆ ನನ್ನ ಮುಟ್ಟುಕೊಣ್ಣೋಕೆ – ಮೂಳ! ಹೂ ತಂದಪ್ನೆ ಹೂವ – ಮಿಂಡಗಾತೀಗೆ ಮುಡಿಸೋಕೆ"

ಎನ್ನುತ್ತಾ ಅವನ ಮೋರೆಯನ್ನು ತಿವಿದು, 'ಥೂ' ಎಂದು ಅವನ ಕೆನ್ನೆಗೆ ಉಗುಳಿದಳು. ನಿಂಗಣ್ಣ ಅಧೀರನಾಗಿ, ತನ್ನ ಷರಟಿನಿಂದ ಮುಖದ ಮೇಲಿನ ಅವಳ ಎಂಜಲನ್ನು ಒರೆಸಿಕೊಳ್ಳುತ್ತಾ ಮೆಲ್ಲಮೆಲ್ಲನೆ ಹೊರಗಡೆ ಅಡಿಯಿಟ್ಟ.

ಮುನಿಯಮ್ಮ ಸರಸರನೆ ನಡೆದು, ಹಲ್ಲುಮುಡಿ ಕಚ್ಚಿ, ಅವನ ಅಂಗಿಯನ್ನು ಬಿಗಿಯಾಗಿ ಹಿಡಿದು—

"ಇನ್ನೊಂದು ದಪಾ ಇಂಥಾ ಕೆಲಸ ಮಾಡೋಕೆ ಬಂದುಗಿಂದೀಯ. ಜೋಕೆ!"

ಎಂದು ಎಚ್ಚರಿಸಿ, ಹಾಗೆಯೇ ಅವನನ್ನು ಮುಂದಕ್ಕೆ ನೂಕಿದಳು. ಆ ರಭಸಕ್ಕೆ ಹೊರಬಾಗಿಲಿನ ಹೊಸಿಲನ್ನು ಎಡವಿ ನಿಂಗಣ್ಣ ಬೀಳಬೇಕಾಗಿತ್ತು. ಆದರೆ ಅಷ್ಟರಲ್ಲಿ ಎದುರಿಗೆ ಬಂದ ಭದ್ರಯ್ಯ ಅವನನ್ನು ಹಿಡಿದುಕೊಂಡ.

"ಇದ್ಯಾಕ್ ನಿಂಗಪ್ಪಣ್ಣಾ, ಇಂಗ್ ಓಡ್ ಬಂದೆ?"

"ಇಲ್ಲಾ, ನಾಯಾಕ್ ಓಡ್‌ಬರ್‍ಲಿ, ಕಾಲ್ ತೊಡರ್‍ತು ಅಷ್ಟೆ"

ನಿಂಗಣ್ಣ, ತನಗಾದ ಅವಮಾನದ ಅಪಘಾತವನ್ನು ಹೇಳಿಕೊಳ್ಳಲು ಹಿಂಜರಿದ. ಆದರೆ ಮುನಿಯಮ್ಮನ ಬಗ್ಗೆ ಅವನ ಮನಸ್ಸಿನಲ್ಲಿ ಆಗಲೇ ದ್ವೇಷಾಂಕುರವಾಗಿತ್ತು.

"ಭದ್ರೂ, ನಾನು ಓಯ್ತೀನಿಕಣಪ್ಪಾ"

"ಎಲ್ಲೋಯ್ತಿ ನಿಂಗಪ್ಪಣ್ಣ. ಊರಿಂದ ಈವಾಗ್ ಬಂದೇನೋ–ಅಂಗೇ ಒಂಟೋತೀಯಾ?"

"ಬಂದೆ ಬಯಸ್ಕೋಪ್ ನೋಡಾವ ಅಂತ. ಯಾಕೋ ಜೀವ್ಕೇ ಚೆಂದಾಕಿಲ್ಲ. ಓಯ್ತಾನಿ"

" ಇರು, ಇವತ್ ರಾತ್ರೀಗೆ ಕೋಳಿ ಕುಯ್ಯಿಸ್ತೀನಿ. ಭರ್ಜರಿಯಾಗಿ ಉಂಡ್‌ಬುಟ್, ಬಯಸ್ಕೋಪ್ ನೋಡ್ಕಂಡ್ ಬರೋನ. ವತ್ತಾರೆ ನೀನು ಊರ್ಗೆ ಓಗೀವಂತೆ. "

ಭದ್ರಯ್ಯನ ಮಾತಿಗೆ ನಿಂಗಣ್ಣ ಒಪ್ಪಿಕೊಂಡ. ಆ ರಾತ್ರಿ ಸೊಗಸಾದ ಕೋಳಿಯ ಮಾಂಸದ ಔತಣವಾಯಿತು. ಇಬ್ಬರೂ ಹತ್ತಿರದಲ್ಲೇ ಇದ್ದ ಶಿವಾಜಿ ಟಾಕೀಸಿಗೆ ಹೋಗಿ, ತಮಿಳು ಚಿತ್ರವೊಂದನ್ನು ನೋಡಿಕೊಂಡು ಹಿಂದಿರುಗಿದರು. ಆ ಮಾತು ಈ ಮಾತು ಆಡುತ್ತಾ ಭದ್ರಯ್ಯ ಕೇಳಿದ—

" ನನ್ನ ಅಂಗೇ ಕೈಬುಟ್ ಬುಟ್ಟೆ ನಿಂಗಪ್ಪಣ್ಣಾ ನೀನು ! "

" ಇಲ್ಲ ಭದ್ರೂ, ಯಾವ್ದಕ್ಕೂ ಕಾಲಬರಬೇಕು ನೋಡು "

" ಆವತ್ತಿಂದಾ ಇಂಗೇನೇ ಏಳ್ತಿದ್ದೀಯಾ "

" ಅಂಗಲ್ಲ ಭದ್ರೂ, ನನ್ ಇದ್ಯೆ ಕಲಿಯೋಕೆ ನಿನ್ಗೆ ಕಲ್ಲಪ್ಪಂದ ಗುಂಡಿಗೆ ಬೇಕು "

" ಅದು ನನಗ್ಯೆತೆ ನಿಂಗಪ್ಪಣ್ಣ "

" ನಿಜಾನೆ ? "

" ಅದ್ಯಾಕ್ ಅಂಗ್ ಕೇಳ್ತೀಯಾ ? "

" ಅಂಗಲ್ಲಾ ಭದ್ರೂ, ನಾನು ಇಂಥಾದ್ದು ಮಾಡು ಅಂದ್ರೆ – ನೀನು ಮಾಡೋಕೆ ತಯಾರಾಗಿದ್ದೀಯಾ ? "

" ಓಹೋ ! "

" ಆಮೇಲೆ ಆಗಾಕಿಲ್ಲ ಅಂದ್ರೆ ಏನ್ ಮಾಡ್ಲಿ ? "

" ಇಲ್ಲ ನಿಂಗಪ್ಪಣ್ಣ, ಅಂಗನ್ನೋಕಿಲ್ಲ ನಾನು "

ಅಷ್ಟರಲ್ಲಿ ಇಬ್ಬರೂ ಹೆಂಡದಂಗಡಿಯನ್ನು ದಾಟಿ, ನಗರ್ತರಪೇಟೆಯ ರಸ್ತೆಯ ಕಡೆಗೆ ಬಂದಿದ್ದರು. ಸನಿಯದಲ್ಲೇ ಧರ್ಮರಾಯನ ದೇವಸ್ಥಾನ ಕಾಣುತ್ತಿತ್ತು.

ನಿಂಗಪ್ಪ ತಟ್ಟನೆ ಅಲ್ಲೇ ನಿಂತು.

" ಧರ್ಮರಾಯಸ್ವಾಮಿ ಆಣೇಗೂ ನಾನೇಳ್ದಂಗೆ ಮಾಡ್ತೀಯಾ ಭದ್ರೂ "

" ದೇವ್ರಾಣೆಗೂ ಮಾಡ್ತೀನಿಕಾಣ್ ನಿಂಗಪ್ಪಣ್ಣಾ "

" ಸಾನೆ ಕಷ್ಟವಾದ್ ಕೆಲ್ಸ ಭದ್ರೂ. ಗುಂಡಿಗೆ ಬಲವಾಗಿರಬೇಕು "

" ಆಗಲಿ ಕಾಣಣ್ಣಾ "

" ಅಂಗಾದ್ರೆ ನಾಳೆ ರಾತ್ರೀಗೆ ಮಶಾಣಕ್ಕೆ ಹೋಗೋನ. ಒಂದಷ್ಟು ಹಸಿ ಮಾಂಸಾನೂ, ದೊಡ್ಡಸೀಸಾಯಿದಾಗ ತುಂಬಾ ಹೆಂಡಾನೂ ತಂದ್ ಮಡೀಕ್ಕೋ. ಅಂಗೇ ಅಗಿಯೋಕೆ ಒಂದು ಗುದ್ದಲೀನೂ ಇರಲಿ. "

" ನೀನೂ ಬತ್ತೀಯಾ ತಾನೆ ನಿಂಗಪ್ಪಣ್ಣಾ ? "

" ಹ್ಞಂ. ಬಂದು, ನಿನ್ನ ಅಲ್ಲಿ ಬುಟ್ಬುಟ್ಟು ಏನೇನ್ ಮಾಡ್ಬೇಕೋ ಅದ್ನೆಲ್ಲಾ ನಿಂಗ್‌ಸರಿಯಾಗಿ ಹೇಳ್ಬುಟ್ಟು ನಾನ್ ಮನೀಗ್ ಬಂದ್‌ಬಿಡ್ತೀನಿ. ಸಾಧ್ನೆಮಾಡೋವಾಗ ಜೊತೇಲಿ ಯಾರೂ ಇರಬಾರ್ದು ನೀನೊಬ್ನೇ ಇರಬೇಕು. "

" ಆಗ್ಲಿ ಕಾಣಣ್ಣ, ಅಂಗೇ ಮಾಡೋನ"

ಎಂದ ಭದ್ರಯ್ಯ. ಇಬ್ಬರೂ ಮನೆಗೆ ಬಂದು ಮಲಗಿದರು. ಆದರೆ ಆ ರಾತ್ರಿ ಎಷ್ಟು ಹೊತ್ತಾದರೂ ಇಬ್ಬರಿಗೂ ನಿದ್ರೆ ಬಂದಿರಲಿಲ್ಲ.

ಭದ್ರಯ್ಯನಿಗೆ ಮುಂದಿನ ದಿನದ ಕಾರ್ಯಕ್ರಮಗಳ ಬಗ್ಗೆಯೇ ಯೋಚನೆಯಾಗಿತ್ತು. ಪ್ರತಿದಿನವೂ ಕಂಟ್ರಾಕ್ಟರನೊಬ್ಬನ ಬಳಿಗೆ ಕೆಲಸಕ್ಕೆ ಹೋಗುತ್ತಿದ್ದ ಅವನು ಮರುದಿನ ಉದ್ದೇಶಪೂರ್ವಕವಾಗಿಯೇ ತಪ್ಪಿಸಿಕೊಳ್ಳಲು ನಿರ್ಧರಿಸಿದ. ಮಾಂಸ ಮತ್ತು ಹೆಂಡಗಳಿಗಾಗಿ ತನ್ನ ಸಹೋದ್ಯೋಗಿಯೊಬ್ಬನ ಬಳಿ ಐದುರೂಪಾಯಿ ಸಾಲಪಡೆಯಬೇಕೆಂದು ತೀರ್ಮಾನಿಸಿಕೊಂಡ. ನಿಂಗಣ್ಣನಿಗೆ ಕರಗತವಾಗಿದ್ದ ಭೂತವಿದ್ಯೆ ತನಗೂ ಬಂದರೆ ಅಂತಹ ಐದು ರೂಪಾಯಿಗಳನ್ನು ಲೆಕ್ಕವಿಲ್ಲದಷ್ಟು ಸಂಪಾದಿಸುತ್ತೇನೆಂಬುದು ಅವನ ನಂಬಿಕೆ. ಆ ಹಿಗ್ಗಿನಲ್ಲಿಯೇ – ಹಾಗೆ ಅದ್ಭುತ ಕನಸುಕಟ್ಟುವುದರಲ್ಲಿಯೇ – ಆ ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಕಳೆದುಹೋಯಿತು.

ನಿಂಗಣ್ಣನೂ ನಿದ್ದೆ ಮಾಡದೆಯೇ ಆ ರಾತ್ರಿಯನ್ನು ಕಳೆದಿದ್ದ. ಮುನಿಯಮ್ಮ ಮಾಡಿದ ಅಪಮಾನ ಅವನನ್ನು ಕ್ಷಣಕ್ಷಣಕ್ಕೂ ಕೆರಳಿಸುತ್ತಿತ್ತು. ಹೇಗಾದರೂ ಸರಿಯೆ, ಅವಳನ್ನು ಅಡಗಿಸಿ, ತನ್ನ ಕೈಗೊಂಬೆಯನ್ನಾಗಿ ಮಾಡಿಕೊಳ್ಳಲೇಬೇಕೆಂದು ಆತ ಪರಿಪರಿಯಾಗಿ ಆಲೋಚಿಸಿ ಹಂಚಿಕೆ ಹಾಕುತ್ತಿದ್ದ. ಅವಳ ಮೇಲಿನ ಕ್ರೋಧವನ್ನು ತೀರಿಸಿಕೊಳ್ಳಲು ಮರುದಿನವೇ ಸರಿಯಾದ ದಿನವೆಂದು ಅವನಿಗೆ ಹೊಳೆದಿತ್ತು.

ಹೀಗೆ ಇಬ್ಬರೂ ತಮ್ಮ ತಮ್ಮ ಅನುಕೂಲಕ್ಕಾಗಿ ಕಾಯುತ್ತಿದ್ದ ' ಮರು

ದಿನ' ಅವರು ಹಾಸಿಗೆಯಮೇಲೆ ಉರುಳಿಕೊಂಡಿದ್ದಂತೆಯೇ ಉದಯ ವಾಯಿತು. ಇಡೀ ರಾತ್ರಿಯೆಲ್ಲಾ ಬಹುತೆರನಾಗಿ ಆಲೋಚಿಸುತ್ತಿದ್ದ ಇಬ್ಬರೂ ಅರುಣೋದಯವಾಗುವಾಗ ಜೋಂಪು ನಿದ್ರೆಯಲ್ಲಿ ಪ್ರೈಮರೆತಿದ್ದರು !

ಎಂದಿನಂತೆಯೇ ಬೇಗನೆ ಎದ್ದ ಮುನಿಯಮ್ಮ ಮನೆಯ ಮುಂಗಡೆ ನೀರು ಚಿಮುಕಿಸಿ, ರಂಗವಲ್ಲಿ ಇಟ್ಟು, ಅಡಿಗೆಮನೆ ಸೇರಿದಳು. ರಾತ್ರಿ ಅಡಿಗೆಯ ಮಡಕೆಗಳನ್ನು ತೊಳೆದಿಟ್ಟು ಒಲೆ ಹೊತ್ತಿಸಿದಳು. ಭದ್ರಯ್ಯನ ಪದ್ಧತಿಯಂತೆ ಕಾಫಿ ಸಿದ್ಧವಾಯಿತು. ಆದರೆ ಅವನೇ ಇನ್ನೂ ಹಾಸಿಗೆ ಬಿಟ್ಟೆದ್ದಿರಲಿಲ್ಲ.

ಮುನಿಯಮ್ಮ ಅಂಗಳಕ್ಕೆ ಬಂದು, ಪೂರ್ವದ ಕಡೆಗಿದ್ದ ಕಿಟಕಿಯನ್ನು ತೆರೆದಳು. ಹೂಬಿಸಿಲು ಭದ್ರಯ್ಯನ ಮುಖಕ್ಕೆ ಸರಿಯಾಗಿಬಿದ್ದಾಗ, ಅವನು ಎಚ್ಚರಗೊಂಡ. ಮುನಿಯಮ್ಮ ಮುಸಿಮುಸಿ ನಗುತ್ತಾ ಅಡಿಗೆ ಮನೆಯ ಕಡೆಗೆ ತೆರಳಿದಳು.

ಅಷ್ಟರಲ್ಲಿ ನಿಂಗಣ್ಣನೂ ಎದ್ದುದರಿಂದ, ಇಬ್ಬರೂ ಜೊತೆಯಲ್ಲಿಯೇ ಬಚ್ಚಲು ಮನೆಗೆಹೋಗಿ ಮುಖತೊಳೆದು ಬಂದರು. ಮುನಿಯಮ್ಮ ಎರಡು ಬಟ್ಟಲಿನಲ್ಲಿ ಕಾಫಿ ತಂದು ಅವರ ಮುಂದಿಟ್ಟಳು. ನಿಂಗಣ್ಣ ನಿಧಾನವಾಗಿ ಕಾಫಿಯನ್ನು ಹೀರುತ್ತಾ—

"ನಿಮ್ಮವ್ವ ಏನು ಮನೀಕ್ಕೊಂಡವಳಲ್ಲಾ – ಜೀವಕ್ ಚೆಂದಾಕಿಲ್ವಾ?"

ಎಂದು ಕೇಳಿದ. ತಾಯಿಯ ಕಡೆಗೇ ನೋಡುತ್ತಿದ್ದ ಭದ್ರಯ್ಯನ ಮುಖ ಕಳೆಗುಂದಿತು.

"ಮೂರು ದಿನ್‌ನಿಂದ ಇಂಗೇನೇ ಮನೀಕ್ಕೊಂಡವಳೆ ನಿಂಗಪ್ಪಣ್ಣ. ಅನ್ನ ಸೇರದು – ನೀರು ಸೇರದು."

"ಆಸ್ಪತ್ರೀಗ್ ತೋರ್‍ಸೋಕ್ ಇಲ್ವಾ ?"

"ಆಸ್ಪತ್ರೀ ಮದ್ದೇ ದಿನಾ ತಂದ್ಕೊಡ್ತಿದ್ದೀನಿ"

"ಒಸೀನೂ ಗುಣಾ ಕಾಣಿಸಿಲ್ವಾ ?"

"ವುಹ್ಞು"

"ಅಂಗಾದ್ರೆ, ನಾನೊಂದ್ ಔಸ್ದಿ ಮಾಡ್ತೀನಿ ಸುಮ್ಕಿರು ನೋಡಾವ"

ಎಂದ ನಿಂಗಣ್ಣ. ಭದ್ರಯ್ಯ ಕೃತಜ್ಞತೆಯಿಂದ ಅವನ ಕಡೆಗೆ ದೃಷ್ಟಿ ಬೀರಿದ.

ಕಾಫಿ ಕುಡಿದು ಮುಗಿಸಿದ ಬಳಿಕ ನಿಂಗಣ್ಣ –

" ಒಸಿ ಮಾರ್ಕಟ್‌ಕಡೀಕ್ ಓಗ್‌ಬುಟ್ ಬತ್ತೀನಿ "

ಎನ್ನುತ್ತಾ ಹೊರಹೊರಟ. ಭದ್ರಯ್ಯನೂ ತನಗೆ ಬೇಕಾದ ಐದು ರೂಪಾಯಿ ಸಾಲಕ್ಕಾಗಿ ತನ್ನ ಸಹೋದ್ಯೋಗಿಯ ಮನೆಯ ಕಡೆಗೆ ನಡೆದ.

ಆ ಮಧ್ಯಾಹ್ನ ನಿಂಗಣ್ಣ ಊಟಕ್ಕೂ ಭದ್ರಯ್ಯನ ಮನೆಗೆ ಬರಲಿಲ್ಲ. ಅವನಿಗಾಗಿ ಕಾಯುತ್ತಾ, ಸುಮಾರು ನಾಲ್ಕು ಗಂಟೆಯುವರೆಗೂ ಕುಳಿತಿದ್ದ. ನಿಂಗಣ್ಣ ಬಾರದಿದ್ದುದು ಅವನ ಉತ್ಸಾಹವನ್ನು ಕುಗ್ಗಿಸಿದಂತಾಗಿತ್ತು. ಮುನಿಯಮ್ಮ ಹತ್ತಾರು ಬಾರಿ ಅವನ ಬಳಿಗೆ ಬಂದು, ಊಟಮಾಡಲು ಏಳಬೇಕೆಂದು ಕೇಳಿಕೊಂಡಿದ್ದರೂ ಆತ ಅವಳ ಮಾತಿಗೆ ಗಮನವಿತ್ತಿರಲಿಲ್ಲ. ಅವನ ಮನಸ್ಸೆಲ್ಲಾ ನಿಂಗಣ್ಣನು ಬಾರದಿದ್ದ ವಿಷಯವನ್ನೇ ಹಲವು ಪರಿಯಾಗಿ ಯೋಚಿಸುತ್ತಿತ್ತು.

ಅಂತೂ ಸುಮಾರು ಆರು ಗಂಟೆಯ ವೇಳೆಗೆ ನಿಂಗಣ್ಣ ಬಂದಾಗ ಭದ್ರಯ್ಯನಿಗೆ ಸಂತೋಷವಾಯಿತು. ಅವನು ದೀರ್ಘವಾದ ನಿಟ್ಟುಸಿರು ಬಿಡುತ್ತಾ—

"ಇದೇನ್ ನಿಂಗಪ್ಪಣ್ಣ, ಮಧ್ಯಾಹ್ನ ಉಣ್ಣೋಕೂ ಬರದೆ ಎತ್ತೊಂಟೋಗಿದ್ದೆ. ನೀನು ಬತ್ತೀಯಾ ಬತ್ತೀಯಾ ಅಂತ ನಾನೂನೆ ಉಣ್ದೆ ಸುಮ್ಕೆ ಕುಂತಿವ್ನಿ."

ಎನ್ನುತ್ತಾ ಎದ್ದುನಿಂತ. ಒಳಗೆ ಬಂದ ನಿಂಗಣ್ಣ—

"ಏನ್ ಮಾಡೋಕಾಯ್ತದೆ ಭದ್ರೂ, ಮಾರ್ಕಟ್ ತಾವ್ಕ ಓದ್ನೋ ಇಲ್ವೋ–ಅಷ್ಟರಾಗೇ ವಂದಾರಗುಪ್ಪೆ ಚಿಕ್‌ರಂಗು ಸಿಕ್‌ಬುಟ್ಟ. ಅವನ್ ಹಿಂಡರ್‌ಗೆ 'ಮೋಇಣಿ' ಇಡ್‌ಕಂಡ್ ಬುಟ್ ಶಾನೆ ಕಾಟ ಕೊಡ್ತಿತ್ತಂತೆ. 'ನೀ ಬಂದೊರ್ತು ಆಗಾಕಿಲ್ಲ ನಿಂಗಪ್ಪಣ್ಣ. ನಿನ್ನೇ ಉಡೀಕ್ಕೊಂಡ್ ರಾಮ್‌ಸಂದ್ರಕ್ ಹೋಗಿ, ತೆಪ್ಗೆ ಇತ್ತಾಗೆ ಬತ್ತೀವ್ನಿ. ನೀ ಬಂದೇ ಬರ್ಬೇಕು' ಅಂತ ಮೊಂಡೀಕ್ ಬುದ್‌ಬುಟ್ಟ. ಇನ್ನೇನ್ ಮಾಡೋದು–ಓಗ್ದೇ ಇರೋ ಕಾಯ್ತದ ?"

"ಅಂಗಾದ್ರೆ ವಂದಾರಗುಪ್ಪೇಗೆ ಓಗ್‌ಬುಟ್ ಬಂದಾ ನಿಂಗಪ್ಪಣ್ಣ ?"

"ಹ್ಞಂ. ಆಯಮ್ಮನಿಗೆ ಹಿಡಿದಿದ್ 'ಮೋಇಣೀ'ನ ಬಿಡಿಸೋ ಒತ್ಗೆ ಸಾಕ್ ಸಾಕಾಗೋಯ್ತೇಳಪ್ಪ !"

ಎಂದ ನಿಂಗಣ್ಣ. ಅಷ್ಟರಲ್ಲಿ ಅಂಗಳಕ್ಕೆ ಬಂದ ಮುನಿಯಮ್ಮ—

"ಈವಾಗ್ನಾರ ಉಣ್ಣೋಕ್ ಬತ್ತೀರೋ ಇಲ್ವೋ ?"

ಎಂದು ಕೇಳಿದಳು. ಭದ್ರಯ್ಯನೂ ನಿಂಗಣ್ಣನೂ ಕೈಕಾಲು ತೊಳೆದು ಬಂದರು. ಮುನಿಯಮ್ಮ ತಣಿಗೆ ಇಟ್ಟು ಇಬ್ಬರಿಗೂ ಬಡಿಸಿದಳು. ಊಟ ಮಾಡುತ್ತಾ ನಿಂಗಣ್ಣ ಮಾತಿಗಾರಂಭಿಸಿದ—

"ಭದ್ರ್ರೊ, ನಾನ್ ಏಳಿದ್ದೆಲ್ಲಾ ತಂದ್ ಮಡಿಗಿದ್ದೀಯಾ ?"

"ಇನ್ನಾ ಇಲ್ಲ ಕಾಣಣ್ಣಾ"

"ಯಾಕ್ ಸುಮ್ಕಾಗ್ಬುಟ್ಟೆ ? ಎದರ್‌ಕೊಂಡ್‌ಬುಟ್ಯಾ ?"

"ಇಲ್ಲ ಕಣಣ್ಣಾ, ಗುಂಡ್ಗೆ ಒಡ್ಡೋದ್ರೊ ನಾನ್ ಎದರ್‌ಕೊಣೋಕಿಲ್ಲಾ !"

"ಅಂಗಾದ್ರೆ, ನಾ ಏಳಿದ್ ತರ್ದೆ ಸುಮ್ಕೆ ಇದೀಯಲ್ಲಾ"

"ತತ್ತೀನಿ ಕಣಣ್ಣಾ, ನೀ ಈಟೊತ್ತಾದ್ರೂ ಬರ್ನೀ ಇಲ್ಲಲ್ಲಾ ಅಂತ ಯೋಚ್ನೆ ಮಾಡ್ಕಂಡ್ ಸುಮ್ಕೆ ಕುಂತ್‌ಬುಟ್ಟಿದ್ದೆ. ಉಂಡ್‌ಬುಟ್ ಓಗಿ ತಂದ್ರೆ ಆಗಾಕಿಲ್ವಾ ?"

"ಆಯ್ತುದೆ ಅನ್ನು"

"ಅಂಗೇ ತಕ್ಕೊಂಡ್ ಓಂಟ್ ಓಗಾನ. ಮನೀಗ್ ಯಾಕ್ ಬರ್ಬೇಕೂ ?"

"ಹ್ನುಂ"

ಎಂದ ನಿಂಗಣ್ಣ. ಮಜ್ಜಿಗೆ ಊಟದ ಅಭ್ಯಾಸವಿಲ್ಲದ್ದರಿಂದ, ಇಬ್ಬರೂ ಇನ್ನೊಮ್ಮೆ ಸಾರನ್ನೇ ಹಾಕಿಸಿಕೊಂಡು, ಊಟ ಮಾಡಿ ಎದ್ದರು.

ಭದ್ರಯ್ಯ ಒಂದು ಗೋಣೀ ಚೀಲದಲ್ಲಿ ಗುದ್ದಲಿಯನ್ನೂ, ದೊಡ್ಡ ಸೀಸೆಯೊಂದನ್ನೂ ಇಟ್ಟುಕೊಂಡು, ಅದನ್ನು ತನ್ನ ಹೆಗಲಿನ ಮೇಲೆ ಹಾಕಿಕೊಂಡ. ಅನಂತರ ಇಬ್ಬರೂ ಮನೆಯಿಂದ ಹೊರ ಹೊರಟರು. ಹತ್ತಿರದಲ್ಲಿಯೇ ಇದ್ದ ಹೆಂಡದಂಗಡಿಗೆ ಬಂದು, ಸೀಸೆಯ ತುಂಬ ಹೆಂಡ ತುಂಬಿಸಿಕೊಂಡುದಾಯಿತು. ನರಸಿಂಹರಾಜಾ ರಸ್ತೆಯ ಹಿಂದಿನ ಗಲ್ಲಿಯಲ್ಲಿದ್ದ ಕಸಾಯಿಖಾನೆಗೆ ಬಂದು ನಾಲ್ಕು ಸೇರು ಹಳೆಯ ಮಾಂಸವನ್ನು ಕೊಂಡು ಇಬ್ಬರೂ ಸ್ಮಶಾನದ ಕಡೆಗೆ ಹೊರಟರು. ಸ್ವಲ್ಪ ದೂರ ಮೌನವಾಗಿ ಸಾಗಿತ್ತು ದಾರಿ.

ಹಾದಿ ತಿರುಗುವ ಚೌಕಿಯ ಬಳಿಗೆ ಇಬ್ಬರೂ ಬಂದಿದ್ದರು. ಅಷ್ಟರಲ್ಲಿ ಏನೋ ನೆನಪು ಮಾಡಿಕೊಂಡವನಂತೆ ನಿಂಗಣ್ಣ—

" ಚೂರಿ ತಂದಿದ್ದೀಯಾ ತಾನೇ ಭದ್ರೂ ?"

" ಇಲ್ಲ ಕಣಣ್ಣ. ನೀ ಏಳೇ ಇರ್ಲಿಲ್ಲಲ್ಲ !"

" ನಂಗೂ ನೆಪ್ಪಿರಲಿಲ್ಲ. ಯಾಸೆಟ್ಟಿ, ಉಡದಾರದಾಗ ಚಾಕಾನಾದರೂ ಮಡಿಗಿದ್ದೀಯೋ ಇಲ್ಲೋ ?"

" ಹ್ಞ. ಚಾಕೇನೋ ಅಯ್ತೆ ; ಚೂಪಾಗಿಲ್ಲ "

" ಒಸೀನೂ ಹರಿಯೋಕಿಲ್ವಾ ?"

" ಪರವಾಕಿಲ್ಲಣ್ಣ, ಹರೀತೈತೆ ಸುಮಾರಾಗಿ "

ಎಂದ ಭದ್ರಯ್ಯ. ಅಷ್ಟರಲ್ಲಿ ಸನಿಯದಲ್ಲಿದ್ದ ಚಲಚ್ಚಿತ್ರ ಮಂದಿರದಿಂದ ಜನಸಂದಣಿ ಹೊರಬಂದಿತು.

" ಇನ್ನಾ ಒಂಬತ್ ಗಂಟೇನೇನಾ ಭದ್ರೂ ?"

" ಹ್ಞ ಕಣಣ್ಣ. ಒಂಬತ್–ಒಂಬತ್ತೂವರೆ ಆಗಿರ್ಬೋದು. 'ಆರ್ಗಂಟೆ ಆಟ' ಈವಾಗ್ ಬುಟ್ಟವ್ರೆ "

" ಅಂಗಾದ್ರೆ, ನಾವು ಮಶಾಣಕ್ಕೆ ಓಗೋಕೆ ಇನ್ನಾ ಶಾನೆ ಒತ್ತಾಗ್ ಬೇಕ್ ಭದ್ರೂ. ಅನ್ನೊಂದು–ಅನ್ನೆಲ್ಡು ಗಂಟೆ ಆದ್ರೆ ಸರೋಗ್ತೈತೆ ನಮ್ ಕೆಲಸ್ಕೆ "

" ಅಂಗೇ ಆಗ್ಲಣ್ಣ "

" ಅಷ್ಟೊತ್‌ಗಂಟ ಇಲ್ಲೇ ಎಲ್ಲಾರ ಕುಂತಿರೋನ. ಕಾಸಿದ್ರೆ ಕಳ್ಳೇ ಕಾಯಾದ್ರೂ ತಕ್ಕೊಂಡ್ ಬಾ "–ಎಂದ ನಿಂಗಣ್ಣ.

ಇಬ್ಬರೂ ಬಳಿಯಲ್ಲೇ ಇದ್ದ ಶಾಲೆಯೊಂದರ ಆವರಣದಲ್ಲಿ ಕುಳಿತರು. ಭದ್ರಯ್ಯ ಹೋಗಿ ಕಡಲೇಕಾಯಿ ತಂದ.

" ಭದ್ರೂ, ಇನ್ನೊಂದ್ ಗಂಟೆ ಟೇಮಾದ್ ಮೇಲೆ ನಾನು ಮನೀಗ್ ಓಯ್ತೀನಿ. ನೀನು ಮಶಾಣದ ಕಡೆ ಓಯ್ತೀಯಾ ?"

" ನೀನು ಬರೋಕಿಲ್ವೇನಣ್ಣ ?"

" ಸಾಧ್ನೆ ಮಾಡೋವಾಗ ಜತೇನಾಗ ಯಾರೂ ಇರಬಾರದು "

ಭದ್ರಯ್ಯ ಮೌನವಾದ.

" ಏನೂ ಎದರ್‌ಕೊಣ್ ಬೇಡಾ ಭದ್ರೂ. ನಾ ಏಳ್‌ದಂಗೆ ಮಾಡು. ಸರೋಗ್ತದೆ. "

ನಿಂಗಣ್ಣನ ಮಾತಿನಿಂದ ಭದ್ರಯ್ಯನಿಗೆ ಸಮಾಧಾನವಾದಂತಿರಲಿಲ್ಲ.

" ಇಕಾ ನೋಡು ಭದ್ರೂ....ಇದ್ಯಾಕ್ ಸುಮ್ಕಾಗ್ಬುಟ್ಟೆ ? "

" ಇಲ್ಲ ಕಾಣಣ್ಣ...."

" ನೋಡು...."

ಎನ್ನುತ್ತಾ ನಿಂಗಣ್ಣ ಭದ್ರಯ್ಯನ ಗಮನವನ್ನು ತನ್ನ ಕಡೆಗೆ ಸೆಳೆದು, ಸ್ಮಶಾನದಲ್ಲಿ ಅವನು ಮಾಡಬೇಕಾದ ಕೆಲಸಗಳನ್ನೆಲ್ಲಾ ವಿವರಿಸಿದ.

" ಹೆಣ ನೋಡಿ ಎದರ್ಕೊಂಡ್ ಬುಡ್ತೀಯಾ ಭದ್ರೂ ?"

" ಇಲ್ಲ ಕಾಣಣ್ಣ."

" ಗುಂಡ್ಗೆ ಭದ್ರವಾಗೈತೆ ತಾನೆ ?"

" ಓ !"

" ಭೇಷ್ "

ನಿಂಗಣ್ಣ ಭದ್ರಯ್ಯನ ಬೆನ್ನು ತಟ್ಟಿ ಹುರಿದುಂಬಿಸಿದ.

ಹತ್ತಿರದ ಪೋಲೀಸ್ ಠಾಣೆಯಲ್ಲಿ ಗಂಟೆ ಬಾರಿಸಿದ ಶಬ್ದ ಕೇಳಿಸಿತು.

" ಅನ್ನೊಂದು ಒಡೀತಾ ಐತಣ್ಣ "

" ಸರಿ ಟೇಮಾಗ್ತ ಬಂತು. ಇನ್ ನಡೀ ನೀನು "

" ಹ್ಞಂ "

" ನಾ ಏಳಿದ್ದೆಲ್ಲಾ ಚೆಂದಾಕಿ ಮನಸಾಗ್ ಮಡೀಕ್ಕೋ "

" ಹ್ಞಂ "

" ಜೋಕೆ ಉಸಾರಾಗಿರು. ಎದರ್ಕೊಣ್ ಬೇಡಾ "

" ಹ್ಞಂ "

" ಓಯ್ತಾಯಾ ಭದ್ರೂ ?"

" ಹ್ಞಂ ಕಾಣಣ್ಣ."

ಭದ್ರಯ್ಯ ಗೋಣಿಚೀಲವನ್ನು ಹೆಗಲಿನ ಮೇಲೆ ಹಾಕಿಕೊಂಡು ಸ್ಮಶಾನದ ಕಡೆಗೆ ಹೆಜ್ಜೆ ಹಾಕಿದ. ಅವನು ಹೋಗುವುದನ್ನೇ ನೋಡುತ್ತಾ ಎರಡು ಕ್ಷಣ ನಿಂತಿದ್ದ ನಿಂಗಣ್ಣ. ಅನಂತರ ಭದ್ರಯ್ಯನ ಮನೆಯ ಕಡೆಗೆ ಹೊರಟ. ಇದುವರೆಗೂ, ಮಾತಿನಲ್ಲಿಯೂ – ಮನಸ್ಸಿನಲ್ಲಿಯೂ ಭದ್ರಯ್ಯನ ವಿಷಯವಾಗಿಯೇ ಅವನು ಮಗ್ನನಾಗಿದ್ದ. ಆದರೆ ಈಗ – ಮನೆಯ ಕಡೆಗೆ ನಡೆಯುತ್ತಿರುವಾಗ – ಅವನ ಮನಸ್ಸಿನ ತುಂಬಾ ಮುನಿಯಮ್ಮನೇ ಬಂದು ತುಂಬಿಕೊಂಡಳು.

ಹಿಂದಿನ ದಿನ ನಡೆದ ಅವಮಾನಕರ ಪ್ರಸಂಗದ ನೆನಪಾದಾಗ ನಿಂಗಣ್ಣನ ಮೈಮೇಲೆ ಮುಳ್ಳೆದ್ದಂತಾಯಿತು. ಮನಸ್ಸಿನಲ್ಲಿ ಮೂಡಿ ಮುಳುಗಿದ್ದ ಸೇಡಿನ ಕಿಡಿ ಮತ್ತೆ ಹೊಗೆಯಾಡಿತು. ಭೂತವಿದ್ಯೆ ಕಲಿತ ಅವನ ದೃಷ್ಟಿಯಲ್ಲಿ ಮತ್ಕುಣ ಸಮಾನಳಾಗಿ ತೋರುವ ಮುನಿಯಮ್ಮನ ಮತ್ತ ಕಾಠಿತ್ವವನ್ನು ಮುರಿಯಲು, ನಿಂಗಣ್ಣನ ಮನಸ್ಸು ಪರಿಪರಿಯಾಗಿ ಆಲೋಚಿಸಿತು. ' ವಶೀಕರಣ 'ದಿಂದಲೇ ಅವಳನ್ನು ತನ್ನವಳನ್ನಾಗಿ ಮಾಡಿಕೊಂಡು ಅನಂತರ ಹಿಂಸಿಸಬೇಕೆಂದು ಆತ ನಿರ್ಧರಿಸಿದ. ಆದರೆ ಅಂತಹ ಸನ್ನಿವೇಶದಲ್ಲಿ ' ವಶೀಕರಣ 'ದ ಪೂಜೆ ಮಾಡುವುದು ಸಾಧ್ಯವಿರಲಿಲ್ಲ.

ನಿಂಗಣ್ಣನಿಗೆ ಮಂತ್ರವಿದ್ಯೆಯು ಪರಿಚಯುವೇ ಇರಲಿಲ್ಲ. ಚಂಡೀ ಉಪಾಸಕನಾದ ಜೈಲುಹಳ್ಳಿಯ ಹೊಲೆಯರ ಚಲುಮಯ್ಯ ಕೇವಲ ಹತ್ತು ಕೋಳಿಗಳಿಗೆ ಆಸೆಪಟ್ಟು, ನಿಂಗಣ್ಣನಿಗೆ ಒಂದು ಪ್ರೇತವನ್ನು ವಶಮಾಡಿ ಕೊಟ್ಟಿದ್ದ. ಆದರೆ ಅದು ಅಲೆದಾಡುವ ಪ್ರೇತವಾಗಿರಲಿಲ್ಲ. ರಾಮಸಂದ್ರದ ' ಅಕ್ಕನ ತೋಪಿ 'ನಲ್ಲೇ ಅದು ನೆಲೆಯಾಗಿ ವಾಸಮಾಡುತ್ತಿತ್ತು.

ತನಗೆ ಬೇಕಾದ ಕೆಲಸಗಳನ್ನು ಸಾಧಿಸಿಕೊಳ್ಳಲು ನಿಂಗಣ್ಣ, ಒಬ್ಬರಿಗೂ ಪತ್ತೆಯಾಗದಂತೆ, ಅರ್ಧರಾತ್ರಿಯಲ್ಲಿ ' ಅಕ್ಕನ ತೋಪಿ 'ಗೆ ಹೋಗಿ ಪೂಜೆ ಪುರಸ್ಕಾರಗಳನ್ನು ಸಲ್ಲಿಸಿ, ಅಗೋಚರವಾದ ಪ್ರೇತದ ಮುಂದೆ, ತಾನು ಮಾಡಬೇಕಾದ ಕೆಲಸಗಳನ್ನೆಲ್ಲಾ ವಿವರಿಸಿ, ಅದಕ್ಕಾಗಿ ನೆರವುಬೇಕೆಂದು ಬೇಡಿ, ಭೂತತೃಪ್ತಿಗಾಗಿ ಯಾವುದಾದರೊಂದು ಪ್ರಾಣಿಯನ್ನು ಬಲಿಕೊಟ್ಟು ಕೋಳಿ ಕೂಗುವ ವೇಳೆಗೆ ಹಿಂತಿರುಗುತ್ತಿದ್ದ. ಎಷ್ಟೋ ವೇಳೆ ಅವನು ಅಶ್ರದ್ಧೆಯಿಂದ ಮಾಡುತ್ತಿದ್ದ ಪೂಜೆ ಪುರಸ್ಕಾರಗಳಿಂದ ಅತೃಪ್ತವಾದ ಪ್ರೇತ ಅವನು ಕೈಗೊಂಡ ಕಾರ್ಯಗಳಲ್ಲಿ ಸೋಲನ್ನುಂಟುಮಾಡಿ, ಪರಿಣಾಮವನ್ನು ವಿರುದ್ಧರೀತಿಯಲ್ಲಿ ಪರಿಸಮಾಪ್ತಿಗೊಳಿಸಿದ ಪ್ರಸಂಗಗಳೂ ಉಂಟು. ಇದರಿಂದಾಗಿ ನಿಂಗಣ್ಣ ತನ್ನಲ್ಲೇ ತಾನು ವಿಶ್ವಾಸ ಕಳೆದುಕೊಳ್ಳುವಂತಾಗಿತ್ತು.

ದೀರ್ಘವಾಗಿ ಯೋಚಿಸಿದ ನಿಂಗಣ್ಣನಿಗೆ, ಮುನಿಯಮ್ಮನನ್ನು ಒಲಿಸಿಕೊಳ್ಳುವುದು ಸುಲಭವೆಂದು ತೋರಲಿಲ್ಲ. ಆ ಕೆಲಸ ತಕ್ಷಣದಲ್ಲಾಗುವಂತಹದಲ್ಲವೆಂದು ಅವನ ಮನಸ್ಸಿಗೆ ಹೊಳೆಯಿತು. 'ಅಕ್ಕನ ತೋಪಿ'ನಲ್ಲಿ ಪ್ರೇತಕ್ಕೆ ಪೂಜೆ ಸಲ್ಲಿಸಿ ಬಂದನಂತರವೇ ಈ ಕೆಲಸಕ್ಕೆ ಪ್ರಯತ್ನಿಸುವುದು ಒಳ್ಳೆಯದೆಂದು ಅವನು ನಿರ್ಧರಿಸಿದ. ಆದರೆ ಕೆರಳಿದ ಕಾಮುನೆಯನ್ನು ಅದು

ವರೆಗೂ ತಡೆಯುವುದು ಹೇಗೆ ?

ಯೋಚನೆಯಲ್ಲಿ ವೈಮರೆತು ನಡೆಯುತ್ತಿದ್ದ ನಿಂಗಣ್ಣ ಭದ್ರಯ್ಯನ ಮನೆಯ ಬಾಗಿಲ ಬಳಿಗೆ ಬಂದಿದ್ದ. ಎರಡು ಕ್ಷಣ ಮೌನವಾಗಿ ನಿಂತು, ಅನಂತರ ಬಾಗಿಲು ತಟ್ಟಿದ. ನಾಲ್ಕಾರು ಬಾರಿ ಬಾಗಿಲು ಬಡಿದ ಮೇಲೆ 'ಯಾರದು ?' ಎಂದು ಮುನಿಯಮ್ಮ ಮಲಗಿದ್ದಲ್ಲಿಂದಲೇ ಕೇಳಿದಳು.

"ನಾನು...." ಎಂದ ನಿಂಗಣ್ಣ.

ಮುನಿಯಮ್ಮನಿಗೆ ಆ ಧ್ವನಿಯ ಪರಿಚಯ ಚೆನ್ನಾಗಿದ್ದದರಿಂದ, ಆಕೆ ಎದ್ದು ಬಂದು ಬಾಗಿಲು ತೆರೆದಳು. ನಿಂಗಣ್ಣ ಒಳಹೊಕ್ಕ. ಮುನಿಯಮ್ಮ ಅವನಿಗೆ ಅಂಗಳದಲ್ಲಿ ಚಾಪೆ ಹಾಸಿ, ತಲೆದಿಂಬು ಕೊಟ್ಟಳು. ಆದರೂ ಅನು ಮಾನಿಸುತ್ತಲೇ ನಿಂತಿದ್ದ ನಿಂಗಣ್ಣ.

"ದೀಪ ಇಂಗೇ ಇರ್ಲಿ ?"

ಮುನಿಯಮ್ಮ ಮೃದು ಧ್ವನಿಯಲ್ಲಿ ಕೇಳಿದಳು.

"ಆರಿಸ್‌ಬುಟ್ ಬಾ"

"ಆ್ಞ...."

"ಆರಿಸ್‌ಬುಟ್ ಬಾ ಅಂದೆ"

ಆ ಮಾತು ಕಿವಿಗೆ ಬಿದ್ದೊಡನೆ ಮುನಿಯಮ್ಮನ ಮಾರ್ದವತೆ ಮಾಯ ವಾಗಿ, ಕೆಣಕಿದ ಫಣಿಯಂತಾದಳು.

"ಇರು ಬಂದೆ....ಆಳಾದ್ದು ಪರಕೆ ಸಿಕ್ಲಿಲ್ಲ ಕೈಗೆ"

ಎನ್ನುತ್ತಾ ಮುನಿಯಮ್ಮ ಸುತ್ತಲೂ ದೃಷ್ಟಿ ಹರಿಸಿದಳು.

"ಅದ್ಯಾಕ್ ಅಂಗ್ ನೋಡ್ತೀ ?'

"ಇನ್ನೇನ್ ಮಾಡ್ಲಿ ?........ಮಿಂಡ್ರಾಂಗೆ ಮರ್‍ವಾದೆ ಮಾಡ್ ಬ್ಯಾಡ್ವಾ ?"

ಮುನಿಯಮ್ಮ ಮೂಲೆಯಲ್ಲಿದ್ದ ಪೊರಕೆಯೊಂದನ್ನು ಕೈಗೆತ್ತಿಕೊಂಡಳು. ಅಷ್ಟರಲ್ಲಿ ನಿಂಗಣ್ಣ ತಲೆಯ ತುಂಬ ಮುಸುಕುಹಾಕಿಕೊಂಡು ತೆಪ್ಪನೆ ಮಲ ಗಿದ. ಮುಂದೆ ಅವನ ಬಾಯಿಂದ ಒಂದು ಶಬ್ದ ಹೊರ ಬಂದಿದ್ದರೂ ಮುನಿ ಯಮ್ಮನ ಪೊರಕೆಯ ಪೆಟ್ಟು ತಪ್ಪುತ್ತಿರಲಿಲ್ಲ !

ದೀಪದ ಕಣ್ಣು ಸಣ್ಣದು ಮಾಡಿ, ಅಂಗಳದ ಗೋಡೆಗೇ ಅದನ್ನು ತಗುಲಿಸಿ, ಅಡಿಗೆ ಮನೆಯಲ್ಲಿ ಹಾಸಿಕೊಂಡಿದ್ದ ತನ್ನ ಹಾಸಿಗೆಯ ಮೇಲೆ

ಉರುಳಿಕೊಂಡಳು ಮುನಿಯಮ್ಮ. ನಿಂಗಣ್ಣನ ಮುಂದೆ ಅಷ್ಟು ದಿಟ್ಟತನ ತೋರಿಸಿದ್ದರೂ, ಹಾಸಿಗೆಯ ಮೇಲೆ ಉರುಳಿಕೊಂಡಾಗ, ಅವಳ ಎದೆ ನಡುಗ ತೊಡಗಿತ್ತು. ನಿಂಗಣ್ಣನ ದುಷ್ಟತನಕ್ಕಾಗಿ ಅವಳ ಮನಸ್ಸು ಸಿಡಿಮಿಡಿ ಗೊಂಡಿತ್ತು. ಒಂದಲ್ಲ ಒಂದುದಿನ – ಭೂತವಿದ್ಯೆ ಬಲ್ಲ ಆ ನಿಂಗಣ್ಣನಿಗೆ ತಾನು ಬಲಿಯಾಗಬಹುದು. ಆದರೆ ಹಾಗಾಗುವ ಮುನ್ನವೇ ತನಗೆ ಸಾವು ಬಂದರೆ ಲೇಸು – ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು ಮುನಿಯಮ್ಮ. ಅಂತಹ ದುಷ್ಟನ ಸ್ನೇಹ ಮಾಡಿದ ತನ್ನ ಗಂಡ ಭದ್ರಯ್ಯನ ಮೇಲೆಯೂ ಅವಳ ಕ್ರೋಧ ಕೆರಳಿತ್ತು. ಆದರೂ ಆ ರಾತ್ರಿ ಮನೆಗೆ ಬಾರದ ಗಂಡನ ವಿಷಯವಾಗಿ ಆಕೆ ಕಳವಳಗೊಂಡಿದ್ದಳು.

'ಈ ಚಂಡಾಲ ಅವರ್ನ ಎಲ್ ಬುಟ್‌ಬುಟ್ ಬಂದ್ನೋ ?'

ಎಂದು ಮೆಲ್ಲನಿಯಲ್ಲಿಯೇ ಹೇಳಿಕೊಳ್ಳುತ್ತಾ ಮಗ್ಗುಲು ಬದಲಿಸಿದಳು ಮುನಿಯಮ್ಮ.

ಅವಳ ಮನಸ್ಸು ಭದ್ರಯ್ಯನ ವಿಷಯವನ್ನೇ ಯೋಚಿಸತೊಡಗಿತು.

ಆದರೆ ಭದ್ರಯ್ಯನಿಗೇನು ಹೆಂಡತಿಯ ಚಿಂತೆಯೇ ?

ಶ್ಮಶಾನದ ಬಳಿಗೆ ಬಂದಿದ್ದ ಅವನ ಮನಸ್ಸೆಲ್ಲಾ 'ಭೂತವಶ' ಮಾಡಿ ಕೊಳ್ಳುವುದರಲ್ಲಿಯೇ ಮಗ್ನವಾಗಿತ್ತು. ನಿಂಗಣ್ಣ ಹೇಳಿದ್ದ ಮಾತುಗಳನ್ನೆಲ್ಲಾ ಆತ ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಿದ್ದ.

ಭದ್ರಯ್ಯ ಶ್ಮಶಾನದ ಆವರಣಕ್ಕೆ ಬಂದಾಗ, ಕಾವಲುಗಾರನ ಕಲ್ಲು ಮಂಟಪದ ಬಳಿ ಇದ್ದ ಎರಡು ನಾಯಿಗಳು ಸ್ವಲ್ಪ ಹೊತ್ತು ಬೊಗಳಿದವು. ಆದರೂ ಅವನು ಹಿಂಜರಿಯದೆ ಆವರಣದ ಒಳಹೊಕ್ಕ. ಕತ್ತಲು ದಟ್ಟ ವಾಗಿತ್ತು. ಸಾಲದುದಕ್ಕೆ ಎತ್ತರವಾಗಿ ಬೆಳೆದ ಮರಗಳು ಸುತ್ತಲೂ ತಮ್ಮ ಕೊಂಬೆಗಳನ್ನು ಚಾಚಿ, ಆಗಸಕ್ಕೂ – ಭೂಮಿಗೂ ನಡುವೆ ಕಾಳ್ಗಿರೆ ಹಿಡಿ ದಿದ್ದುವು. ಗುಂಡಿಗೆ ಒಡೆಯುವಂತಾಗುವ ಆ ಭಯಾನಕ ಇರುಳಿನಲ್ಲಿ ಭದ್ರಯ್ಯ ಹೆಜ್ಜೆಯಮೇಲೆ ಹೆಜ್ಜೆಯಿಡುತ್ತಾ ಸಮಾಧಿಗಳ ಬಳಿಯೇ ಎಚ್ಚರಿಕೆ ಯಿಂದ ನಡೆದು ಬರುತ್ತಿದ್ದ. ನೇರಿಳೆ ಮರವೊಂದರ ಬುಡದ ಬಳಿಗೆ ಬಂದಾಗ, ಎಡಗಡೆ ಏನೋ ಸರಸರನೆ ಶಬ್ದವಾಯಿತು. ಅತ್ತ ತಿರುಗಿ ನೋಡುವಷ್ಟರಲ್ಲಿ ಬಲಗಡೆ ಯಾರೋ ನಡೆದು ಬರುತ್ತಿರುವಂತೆ ಹೆಜ್ಜೆಯ ಸಪ್ಪುಳವಾಯಿತು. ತಟ್ಟನೆ ಭದ್ರಯ್ಯ ಬಲಗಡೆಗೆ ತಿರುಗಿದ. ಕಣ್ಣಲ್ಲಿ ಕಣ್ಣಿಟ್ಟು ನೋಡಿದ.

ಯಾರೂ ಕಾಣಿಸಲಿಲ್ಲ. ಅರೆಕ್ಷಣದ ಬಳಿಕ ಯಾರೋ ಹೆಂಗಸು ಕಿಲಕಿಲನೆ ನಕ್ಕಂತೆ ಶಬ್ದವಾಯಿತು. ಅದೇ ಸಮಯಕ್ಕೆ ನೇರಿಳೆ ಮರದಮೇಲೆ 'ಗೂ-ಗೂ' ಎಂದು ಗೂಬೆಯೊಂದು ಕೂಗಿತು. ಮರುಕ್ಷಣದಲ್ಲಿಯೇ 'ಧೊಪ್ಪನೆ' ಏನೋ ಕೆಳಗೆ ಬಿದ್ದಂತಾಯಿತು. ಇಷ್ಟಾದರೂ ಕಣ್ಣಿಗೆ ಏನೂ ಕಾಣಿಸುತ್ತಿಲ್ಲ!

ಮಹಾ ಎದೆಗಾರಿಕೆಯಿಂದ ಬಂದಿದ್ದ ಭದ್ರಯ್ಯ ಅಧೀರನಾದ. ಅವನ ಮೈನಡುಗಿತು. ಜಂಘಾಬಲವೇ ಉಡುಗಿ ಹೋದಂತಾಯಿತು. ಗಂಟಲೊಣಗಿತು. ಹಣೆಯ ಮೇಲೆ ಬೆವರು ಹನಿ ಮೂಡಿತು.

ಭದ್ರಯ್ಯ ನಿಂತಲ್ಲಿಯೇ ಸ್ವಲ್ಪ ಹೊತ್ತು ನಿಂತ. ಸುತ್ತಲಿನ ಕತ್ತಲೆ ಭೀಕರ ಮೌನವನ್ನು ತಾಳಿತು. ನಗುವಿನ ಸದ್ದೂ, ನಡಿಗೆಯ ಶಬ್ದವೂ, ಗೂಗೆಯ ಗುಟುರೂ ಆ ಇರುಳಿನಾಳದಲ್ಲಿ ಮುಳುಗಿ ಹೋದವು. ಮೃದುವಾಗಿ ಬೀಸಿದ ಗಾಳಿ ಭದ್ರಯ್ಯನ ಹಣೆಯ ಬೆವರನ್ನು ಒಣಗಿಸಿ, ಅವನನ್ನು ತುಸು ಚೇತನಗೊಳಿಸಿತು.

ನೇರಿಳೆಮರದ ಬುಡವನ್ನು ದಾಟಿ ಮುಂದೆ ಅಡಿಯಿಟ್ಟ ಭದ್ರಯ್ಯ. ಅವನ ಕಾಲಿನ ತುಳಿತದಿಂದ ಕೆಳಗಡೆ ಏನೋ ಗರಗರಸಿ ಸದ್ದಾಯಿತು. ಮೆಲ್ಲನೆ ಬಗ್ಗಿ ನೆಲವನ್ನು ನೋಡಿದ. ಅಲ್ಲೆಲ್ಲಾ ಚೆಲ್ಲಿದ ಪುರಿಯನ್ನು ಕಂಡು ಅವನ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಬಳಿಯಲ್ಲೇ -- ಅಂದು ಸಂಜೆ ತಾನೆ ಒಂದು ಹೆಣವನ್ನು ಹೂಳಿರಬೇಕೆಂದು ಅವನಿಗೆ ಖಚಿತವಾಯಿತು.

ಭದ್ರಯ್ಯ ಅಲ್ಲೇ ಕುಳಿತು, ಸುತ್ತಲೂ ಕೈಚಾಚಿ ತಡಕಾಡಿದ. ತುಸು ದೂರದಲ್ಲಿ ಹಸಿಯ ಮಣ್ಣು ಕೈಗೆ ಮೆತ್ತಿಕೊಂಡಿತು. ಕುಳಿತಹಾಗೆಯೇ ಮೆಲ್ಲನೆ ಅತ್ತ ಸರಿದ. ಮತ್ತೊಮ್ಮೆ ಆ ಹಸಿಯ ಮಣ್ಣಿನ ಮೇಲೆ ಕೈಯ್ಯಾಡಿಸಿ ಸವರಿ ನೋಡಿದ.

ಹೌದು! ಅದು ಸಮಾಧಿಯೇ ಹೌದು. ಹೆಣವನ್ನು ಹೂಳಿಟ್ಟು, ನೆಲದಿಂದ ಮೇಲೆ ಸುಮಾರು ಎರಡು ಅಡಿ ಎತ್ತರಕ್ಕೆ ಮಣ್ಣು ಹಾಕಿದ್ದಾರೆ. ಅದರಮೇಲೆ ಹಸಿರೆಲೆಯ ಕೈಕೊಂಬೆಗಳನ್ನು ಸಿಕ್ಕಿಸಲಾಗಿದೆ. ನಾಲ್ಕಾರು ಬಗೆಯ ಬಿಡಿಹೂಗಳು ಅಲ್ಲೆಲ್ಲಾ ಚೆಲ್ಲಲ್ಪಟ್ಟಿವೆ. ಸಮಾಧಿಯ ಅಕ್ಕಪಕ್ಕದಲ್ಲಿ ಒಂದೆರಡು ಬರಿದಾದ ಹಸಿಯ ಮಡಿಕೆಗಳಿವೆ. ಸಮಾಧಿಯ ಸುತ್ತಲೂ ಪುರಿಯನ್ನು ಚೆಲ್ಲಿದ್ದಾರೆ.

ಶ್ಮಶಾನದಲ್ಲಿ ತಿರುಗಾಡುತ್ತಿದ್ದ ಭದ್ರಯ್ಯ ಹುಡುಕುತ್ತಿದ್ದುದು ಇಂತಹ ಸಮಾಧಿಯನ್ನೇ. ಅವನ ಅದೃಷ್ಟಕ್ಕೆ ಅದು ಬೇಗನೆ ಸಿಕ್ಕಿತು. ನಿಂಗಣ್ಣ ಹೇಳಿದ್ದ ಎಲ್ಲ ಗುರುತುಗಳೂ ಅಲ್ಲಿದ್ದುವು. ಎಂದಮೇಲೆ ಅದು ಹೊಸ ಹೆಣವೆಂಬುದರಲ್ಲಿ ಲೇಶವೂ ಸಂಶಯವಿರಲಿಲ್ಲ.

'ಇನ್ನೇಕೆ ತಡ ?'

ಎಂದಿತು ಭದ್ರಯ್ಯನ ಮನಸ್ಸು.

ಅವನು ಕೂಡಲೇ ಗೋಣೀ ಚೀಲದಲ್ಲಿದ್ದ ಗುದ್ದಲಿಯನ್ನು ಹೊರ ತೆಗೆದ. ಇನ್ನೇನು ಅಗೆಯಲು ಆರಂಭಿಸಬೇಕು. ಆದರೆ ಮನಸ್ಸೇಕೋ ಹಿಂಜರಿಯಿತು. ಗುದ್ದಲಿ ಹಿಡಿದು ನಿಂತವನು ಮತ್ತೆ ಕುಳಿತುಬಿಟ್ಟ ಭದ್ರಯ್ಯ.

'ಯಾಕ್ ಸುಮ್ಕಾಗ್ ಬುಟ್ಟೇ ? ಎದರ್ಕೊಂಡ್ಬುಟ್ಟಾ ?'

ಇದ್ದಕ್ಕಿದ್ದಂತೆ ನಿಂಗಣ್ಣನ ಮಾತು ಅವನ ನೆನಪಿಗೆ ಬಂದಿತು.

ಆ ಪ್ರಶ್ನೆಗೆ ತಾನೇನು ಉತ್ತರ ಹೇಳಿದ್ದೆ........

ನೆನಪಿನ ಲೋಕಕ್ಕೆ ಓಡಿದ ಭದ್ರಯ್ಯ. ......

'ಇಲ್ಲ ಕಣಣ್ಣಾ, ಗುಂಡ್ಗೆ ಒಡ್ದೋದ್ರೂ ನಾನ್ ಎದರ್ಕೊಣೋಕಿಲ್ಲ!'

ಆ ಮಾತನ್ನು ತಾನು ನಿಜವಾಗಿಯೂ ಆಡಿದ್ದೆನೆ ? ಅಥವಾ ನಿಂಗಣ್ಣನನ್ನು ತೃಪ್ತಿಪಡಿಸಲು ಬರಿಯ ಒಣಜಂಭದಿಂದ ಹೇಳಿದ್ದೆನೆ ?

ಹಿಮ್ಮೆಟ್ಟಿದ್ದ ಅವನ ಮನಸ್ಸು ಮತ್ತೆ ದಿಟ್ಟತನದಿಂದ ಸೆಟೆದು ನಿಂತಿತು. ಕೂಡಲೇ ಭದ್ರಯ್ಯ ಗುದ್ದಲಿ ತೆಗೆದುಕೊಂಡು ಅಗೆಯತೊಡಗಿದ. ನೆಲದ ಮಟ್ಟಕ್ಕಿದ್ದ ಮಣ್ಣನ್ನೆಲ್ಲಾ ತೆಗೆದು ಬದಿಗೆ ಹಾಕಿದ್ದಾಯಿತು. ಇನ್ನು ನಿಧಾನವಾಗಿ ಕೈಯ್ಯಲ್ಲಿ ತೋಡಬೇಕು. ಗುದ್ದಲಿ ಉಪಯೋಗಿಸಿದರೆ ಹೆಣದ ಮೈಗೆ ಪೆಟ್ಟಾದೀತು ; ತಾನು ಮಾಡಬೇಕೆಂದಿರುವ ಕೆಲಸ ಕೆಟ್ಟೀತು– ಎಂದು ಭದ್ರಯ್ಯನಿಗೆ ಹೆದರಿಕೆ. ನಿಂಗಣ್ಣನೂ ಆ ಬಗ್ಗೆ ಎಚ್ಚರಿಕೆ ಕೊಟ್ಟಿದ್ದ. ಎಂತಲೇ ಭದ್ರಯ್ಯ ಶ್ರಮವಾದರೂ ಕೈಯ್ಯಲ್ಲೇ ಜಾಗರೂಕತೆಯಿಂದ ತೋಡ ತೊಡಗಿದ.

ಒಂದೇಕಡೆ ಹೆಚ್ಚಾಗಿ ಮಣ್ಣು ತೆಗೆದಾಗ, ಆ ಕತ್ತಲೆಯಲ್ಲಿ ಅವನ ಕೈಗೆ ಹೆಣದ ಮೈ ಸೋಕಿತು. ತಟ್ಟನೆ ಭದ್ರಯ್ಯನ ಮೈ ರೋಮಾಂಚ ವಾಯಿತು.

ಎರಡುಕ್ಷಣ ಸುಮ್ಮನಿದ್ದು, ಅನಂತರ ಸುತ್ತಲೂ ಮೆಲ್ಲಮೆಲ್ಲನೆ ಸರಿಯುತ್ತಾ ಮಣ್ಣನ್ನೆಲ್ಲಾ ಎತ್ತಿಹಾಕಿದ. ಆ ಕತ್ತಲೆಯಲ್ಲಿ ಹೆಣದ ಮೈ ಕಪ್ಪಗೆ – ಅಸ್ಪಷ್ಟವಾಗಿ – ಅವನಿಗೆ ಕಾಣಿಸಿತು. ಅದೇ ಸಮಯಕ್ಕೆ ಯಾರೋ ಬಲವಾಗಿ ಕೈಬೀಸಿ ಭದ್ರಯ್ಯನ ಬೆನ್ನಿಗೆ ಗುದ್ದಿದಂತಾಯಿತು. ಉಸಿರು ಕಟ್ಟಿದಷ್ಟು ಸಂಕಟವಾಗಿ, ಅಂಗೈಯಲ್ಲಿ ಬಿಗಿಯಾಗಿ ಎದೆಯನ್ನು ಹಿಡಿದು ಕೊಂಡು ಕುಸಿದುಬಿದ್ದ ಭದ್ರಯ್ಯ. ಆ ಪೆಟ್ಟಿನಿಂದ ಚೇತರಿಸಿಕೊಳ್ಳುವ ವೇಳೆಗೆ, ಮೊದಲಿನಹಾಗೆಯೇ ಇನ್ನೊಂದು ಪೆಟ್ಟು ಬಿದ್ದಿತು. ಭದ್ರಯ್ಯ ಕಂಗಾಲಾದ. ಅವನ ಮನಸ್ಸಿಗೆ ಮದಡು ಮುಚ್ಚಿತು. ಕಣ್ಣುಗಳು ಕಳೆಗುಂದಿ, ಅವು ಪಾತಾಳಕ್ಕಿಳಿದಂತೆ ಭಾಸವಾಯಿತು.

"ಏನೂ ಎದರ್‌ಕೋಣ್‌ಬೇಡ ಭದ್ರೂ ನಾ ಏಳ್‌ದಂಗೆ ಮಾಡು. ಎಲ್ಲಾ ಸರ್‌ಹೋಗ್ತದೆ"

– ನಿಂಗಣ್ಣನ ಮಾತಿನ ನೆನಪು ಭದ್ರಯ್ಯನನ್ನು ಹೊಡೆದೆಬ್ಬಿಸಿತು.

ಆದರೆ ಎದ್ದೊಡನೆ, ಮತ್ತೊಮ್ಮೆ ಎಲ್ಲಿ ಪೆಟ್ಟು ಬೀಳುವುದೋ ಎಂದು ಅಂಜಿಕೆ. ಹಾಗೆಯೇ ಅಂಜಿ ಕುಳಿತುಕೊಂಡರೆ ಬಂದ ಕಾರ್ಯ ಸಾಧಿಸಿದಂ ತಾಯಿತೇ ?

ಭದ್ರಯ್ಯ ಕುಳಿತಹಾಗೆಯೇ ಮೆಲ್ಲಮೆಲ್ಲನೆ ಹೆಣದ ತಲೆಯಕಡೆಗೆ ಸರಿದ. ಅನಂತರ ಅದರ ಕೈಗಳನ್ನು ಹುಡುಕಿ ಹಿಡಿದುಕೊಂಡ. ಅವನ ಕೈ ಕಂಪಿಸಿತು. ತುಟಿ ಅದುರಿತು. ಹಲ್ಲುಗಳು 'ಗಡಗಡ'ನೆ ನಡುಗಿದವು.

ಅಷ್ಟರಲ್ಲಿ ಕಾವಲು ಮಂಟಪದ ಬಳಿಯ ನಾಯಿಗಳು ಬೊಗಳಲು ಆರಂಭಿಸಿದವು. ಒಂದು ನಾಯಂತೂ ಬೊಗಳುತ್ತಾ ಸ್ಮಶಾನದ ಆವರಣವನ್ನು ಪ್ರವೇಶಿಸಿತು. ಇನ್ನೊಂದು ನಾಯಿ ಮಂಟಪದಬಳಿಯೇ ನಿಂತು ಬಡಿದು ಕೊಳ್ಳುತ್ತಿತ್ತು.

ಸ್ಮಶಾನದೊಳಕ್ಕೆ ಬಂದ ನಾಯಿ ನೆಲವನ್ನು ಮೂಸುತ್ತ ಮೂಸುತ್ತ ಭದ್ರಯ್ಯನ ಬಳಿಗೇ ಬಂದು ನಿಂತು ಬೊಗಳತೊಡಗಿತು. ಭದ್ರಯ್ಯ ತಾನು ಹಿಡಿದಿದ್ದ ಹೆಣದ ಕೈಗಳನ್ನು ಬಿಟ್ಟು, ದಿಕ್ಕು ತೋಚದವನಂತೆ ಕುಳಿತುಬಿಟ್ಟ.

ಎರಡು ನಿಮಿಷಗಳ ಬಳಿಕ ಕಾವಲು ಮಂಟಪದ ಬಳಿ ಯಾರೋ ಗಂಡಸರು ಮಾತನಾಡುತ್ತಿರುವುದು ಕೇಳಿಸಿತು. ಭದ್ರಯ್ಯ ಕಿವಿಗೊಟ್ಟು ಆಲಿಸಿದ. –

"ಯಾಕೋ ನಾಯ್ಗೋಳು ಸ್ಯಾನೆ ಬೊಗಳ್ತವಣ್ಣ"

"ದೆವ್ವ – ಗಿವ್ವ ಕಾಣಿಸ್‌ಕೊಣ್ತೇನೋ !"

"ದೆವ್ವ ಕಣ್ಣಿಗ್ ಕಾಣಿಸ್‌ಕೊಣ್‌ತೈತೇನಣ್ಣ ?"

"ಮನುಸ್ರ ಕಣ್ಣಿಗೆ ಕಾಣ್ಸೋಕಿಲ್ಲ........ಪ್ರಾಣಿಗಳ್‌ಗೆ ಕಾಣಿಸ್ತವೆ"

"ನಿಜಾನಾ ?"

"ಹ್ಞಂ"

"ನಿನಗೆ ಎದರ್ಕೆ ಆಗೋಕಿಲ್ಲೇನಣ್ಣ ?"

"ಎದರ್ಕೆ !........ನನ್ಗೇನ್ ಎದರ್ಕೆ ? ನಾನೇ ಒಂದ್ ದೊಡ್‌ದೆವ್ವಾ ! ಇಪ್ಪತ್ ವರಸ್‌ನಿಂದ ಈ ಮಶಾಣಾನ – ದೆವ್ವಗಳ್ನಾ ಕಾಯ್ಕಂಡ್ ಬಿದ್ದಿಲ್ವಾ ?"

ಮಾತು ನಿಂತಿತು.

ನಾಯಿಗಳು ಮಾತ್ರ ಬೊಗಳುತ್ತಲೇ ಇದ್ದವು.

ಭದ್ರಯ್ಯ ಮತ್ತೊಮ್ಮೆ ಹೆಣದ ಕೈಗಳನ್ನು ಹಿಡಿದು ಮೇಲಕ್ಕೆಳೆಯಲು ಪ್ರಯತ್ನಿಸಿದ. ಬೊಗಳುತ್ತಿದ್ದ ನಾಯಿ ಅದಕ್ಕೆ ಅವಕಾಶ ಕೊಡದಂತೆ ಅವನ ಸುತ್ತಮುತ್ತ ತಿರುಗಾಡಿತು.

ಅಷ್ಟರಲ್ಲಿ ಕಾವಲು ಮಂಟಪದ ಬಳಿ –

"ಯಾಕೋ ಸ್ಯಾನೆ ಬೊಗಳ್ತವೆ ಕಾಣ್ಲಾ ನಾಯ್ಗೋಳು. ಒಸಿ ನೋಡ್ಕಂಡ್ ಬತ್ತೀನಿ"

"ಒಬ್ನೇ ಓಯ್ತಿಯೇನಣ್ಣ ?"

"ನನ್ಗೇನ್ ಭಯ್ವಾ ?"

– ಎಂಬ ಮಾತುಗಳು ಭದ್ರಯ್ಯನ ಕಿವಿಗೆ ಬಿದ್ದವು. ಒಂದೆರಡು ನಿಮಿಷಗಳಲ್ಲಿಯೇ ಕಾವಲು ಮಂಟಪದಿಂದ ಕೈದೀಪ ಹಿಡಿದುಕೊಂಡು ಕಾವಲುಗಾರ ಶ್ಮಶಾನದ ಕಡೆಗೆ ಬರುತ್ತಿದ್ದುದು ಕಾಣಿಸಿತು.

ಆ ಕ್ಷಣದಲ್ಲಿ 'ತಾನೆಂತಹ ಇಕ್ಕಟ್ಟಿನ ಪರಿಸ್ಥಿತಿಗೆ ಸಿಕ್ಕಿಕೊಂಡಿದ್ದೇನೆ' ಎಂಬುದು ಭದ್ರಯ್ಯನಿಗೆ ಅರಿವಾಗದಿರಲಿಲ್ಲ. ಆದರೆ ಪಾರಾಗುವುದು ಹೇಗೆ ?

ಕೈದೀಪ ಹಿಡಿದ ಕಾವಲುಗಾರ ಶ್ಮಶಾನದೊಳಕ್ಕೆ ಪ್ರವೇಶಿಸಿದ. ಇನ್ನು ತಡಮಾಡಿದರೆ ತನ್ನ ಸಮಾಧಿಯೂ ಅಲ್ಲೇ ಆಗುವದೆಂದು ಭದ್ರಯ್ಯನಿಗೆ ಖಚಿತವಾಯಿತು. ಅವನು ಕೂಡಲೇ ಅಂಚಿಗೆ ಓಡಿ, ಪ್ರಯಾಸದಿಂದ

ಆವರಣದ ಕಲ್ಲನ್ನು ಹತ್ತಿ ಹೊರಗಡೆಗೆ ಧುಮುಕಿದ. ಆದರೆ ನಾಯಿಗಳು ಅವನನ್ನು ಅಷ್ಟಕ್ಕೆ ಬಿಡದೆ ಬೆನ್ನಟ್ಟಿದವು.

ಭದ್ರಯ್ಯ ಯಾವುದನ್ನೂ ಲೆಕ್ಕಿಸದೆ ಒಂದೇ ಉಸಿರಿಗೆ ಓಡಿದ. ಓಡಿಓಡಿ ರಾಜಮಾರ್ಗಕ್ಕೆ ಬಂದುದಾಯಿತು. 'ಸದ್ಯ, ಇನ್ನು ತಪ್ಪಿಸಿಕೊಂಡೆ' ಎಂದು ಮನಸ್ಸಿನಲ್ಲಿಯೇ ಅಂದುಕೊಂಡ. ಹಾಗಂದುಕೊಂಡುದೇ ತಪ್ಪಾಯಿತು....

ಭದ್ರಯ್ಯ ರಾಜರಸ್ತೆಗೆ ಬರುವವೇಳೆಗೆ ಗಸ್ತು ತಿರುಗುವ ಪೊಲೀಸಿನವನು ಸೀಟಿ ಊದಿದ. ಆ ಧ್ವನಿಯನ್ನು ಹಿಂಬಾಲಿಸಿಕೊಂಡು ಬೇರೆಬೇರೆ ಕಡೆಯಿದ್ದ ಇನ್ನಿಬ್ಬರು ಪೋಲೀಸರು ಸೀಟಿ ಊದಿದರು. ಮುಂದೆ ಕೆಲವೇ ಕ್ಷಣಗಳಲ್ಲಿ ಭದ್ರಯ್ಯ ಪೋಲೀಸಿನವರ ವಜ್ರಮುಷ್ಟಿಯಲ್ಲಿ ಬಂಧಿತನಾಗಿದ್ದ.

ಹತ್ತಿರದ ರಾಜರಸ್ತೆಯಲ್ಲಿ ಪೋಲೀಸಿನವರ ಸೀಟಿಯ ಶಬ್ದವೂ, ತುಸು ಗದ್ದಲವೂ ಆದಾಗ ಕೈದೀವಿಗೆ ಹಿಡಿದ ಕಾವಲುಗಾರ ಶ್ಮಶಾನದಿಂದ ಹೊರ ಬಂದು ನೋಡಿದ. ಮೂರು – ನಾಲ್ಕುಮಂದಿ ರಸ್ತೆಯಲ್ಲಿ ನಿಂತಿದ್ದುದು ಸ್ಪಷ್ಟವಾಗಿ ಕಾಣಿಸುತ್ತಿದ್ದಿತು. ಬೇಗಬೇಗನೆ ಹೆಜ್ಜೆಹಾಕುತ್ತಾ ಅವನೂ ಅವರ ಬಳಿಗೆ ಬಂದು ಸೇರಿದ.

"ಕಳ್ಳಬಡ್ಡೀ, ತಪ್ಪಿಸ್ಕೊಂಡ್ ಹೋಗ್ತೀಯಾ ?"

– ಹಾಗೆಂದು ಹೇಳಿದ ಪೋಲೀಸಿನವನು ಭದ್ರಯ್ಯನ ಕುತ್ತಿಗೆ ಹಿಡಿದು ಅವನ ಬೆನ್ನಿನಮೇಲೆ ಗುದ್ದಿದ.

ಅಷ್ಟರಲ್ಲಿ ಅಲ್ಲಿಗೆ ಬಂದ ಕಾವಲುಗಾರ ತನ್ನ ಕೈದೀವಿಗೆಯನ್ನು ಭದ್ರಯ್ಯನ ಮುಖಕ್ಕೆ ಹಿಡಿದು –

"ಎತ್‌ಕಡಿಸಿಂದ ಬಂದ ಸೋಮಿ ಈ ಬಡ್ಡೀ ಆಳು ?"

"ನಿನ್ ಶ್ಮಶಾನದ ಕಡೆಯಿಂದ"

"ಎಲಾ ! ಇವನೇನ ಅತ್ ಬಂದಿದ್ದೋನು ! ನಾಯ್ಗೋಳು ಬೊಗಳ್ತಿದ್ದೊ. ಯಾಕೋ ಅಂತ ಸುಮ್ಕೇನೇ ಇದ್ದೆ. ಆಮೇಕಿಂದ ಇಗ್ ನೋಡ್ತೀನಿ...."

"ಶ್ಮಶಾನಕ್ಕೆ ಬಂದಿದ್ದನೋ ಇವನು ?"

ಪೋಲೀಸಿನವನು ಗಡಸು ಧ್ವನಿಯಲ್ಲಿ ಕೇಳಿದ.

"ಹ್ಞಂ ಬುದ್ಧಿ. ಗುದ್ಲಿ ಗಿದ್ಲಿ ಎಲ್ಲಾ ಮಡೀಕೊಂಡಿದ್ದ"

ಕಾವಲುಗಾರನಿಂದ ಬಂದ ಆ ಮಾತು ಕೇಳಿ ಪೋಲೀಸಿನವರು ಸ್ತಬ್ಧ

ರಾಗಿ ನಿಂತರು.

ಅರೆಕ್ಷಣದ ಬಳಿಕ ಒಬ್ಬ ಪೋಲೀಸಿನವನು ಭದ್ರಯ್ಯನ ಕೈಗಳನ್ನು ನೋಡಿ, ದೀಪದ ಬೆಳಕಿನಲ್ಲಿ ಜಾಗರೂಕತೆಯಿಂದ ಪರೀಕ್ಷಿಸಿದ. ಇನ್ನೊಬ್ಬ ಅವನ ಮುಖವನ್ನೂ ಕಾಲುಗಳನ್ನೂ ಗಮನಿಸಿದ. ಮತ್ತೊಬ್ಬ ಅವನ ಬಟ್ಟೆಗಳನ್ನೆಲ್ಲಾ ಎಚ್ಚರಿಕೆಯಿಂದ ನೋಡಿದ. ಎಲ್ಲಿಯೂ ಒಂದು ತೊಟ್ಟು ರಕ್ತದ ಕಲೆಯಿಲ್ಲ. ಗುದ್ದಲಿ ಹಿಡಿದು ಶ್ಮಶಾನಕ್ಕೆ ಹೋಗಿದ್ದನೆಂಬ ವಿಷಯ ತಿಳಿದಾಗ, ಭದ್ರಯ್ಯನು ಯಾರನ್ನೋ ಕೊಲೆಮಾಡಿ, ಶವವನ್ನು ಆ ಅಪರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಹೂಳಲು ಬಂದಿರಬೇಕೆಂದು ಪೋಲೀಸಿನವರಿಗೆ ಸಂಶಯವಾಯಿತು. ಆದರೆ ಅದನ್ನು ಕೂಡಲೇ ನಂಬಲು ಭದ್ರಯ್ಯನ ಬಳಿ ಯಾವ ಆಧಾರವೂ ಸಿಕ್ಕದಿದ್ದಾಗ ಅವರಿಗೆ ನಿರಾಶೆಯೇ ಆಯಿತು.

" ಯಾರ ಕತ್ತು ಹಿಸುಕಿ ಶ್ಮಶಾನಕ್ಕೆ ತಂದಿದ್ದಿಯೋ ?"

" ಇಲ್ಲಾ ಸ್ವಾಮಿ, ನಾನ್ ಅಂತಾ ಕೆಲ್ಸ ಮಾಡ್ನಿಲ್ಲಾ "

" ಇನ್ನೇನ್ ಮಾಡ್ದೆ ? ಇನ್ಯಾಕೆ ಬಂದೆ ಶ್ಮಶಾನಕ್ಕೆ ?"

ಭದ್ರಯ್ಯ ಉತ್ತರಿಸದೆ ಸುಮ್ಮನೆ ಹೆಜ್ಜೆ ಹಾಕುತ್ತಿದ್ದ.

" ತನ್ನನ್ನು ಕೊಲೆಗಾರನೆಂದು ಹೇಳಿ ಆಜೀವ ಪರ್ಯಂತ ಶಿಕ್ಷೆ ವಿಧಿಸಿದರೆ........?"

—ಭದ್ರಯ್ಯನ ಗುಂಡಿಗೆ ಒಡೆಯುವಂತೆ ಉದ್ಭವಿಸಿತ್ತು ಆ ಪ್ರಶ್ನೆ.

' ತನ್ನ ಆಸೆ ನಿರಾಸೆ—

' ತನ್ನ ಸಾಧನೆ ಬರಿಯ ವೇದನೆ—

' ತನ್ನ ಸಂಸಾರ ದಟ್ಟ ಕಾಂತಾರ—

' ತನ್ನ ಜೀವನ ಪಾಳು ವನ—'

—' ಭದ್ರಯ್ಯ ಕೊಲೆಗಾರ ! ಭದ್ರಯ್ಯ ಕೊಲೆಗಾರ !'

—'ಅಲ್ಲ, ಅಲ್ಲ....ಆ ಮಾತು ಸುಳ್ಳು....ಬರಿಯ ಸುಳ್ಳು !'

ಯಾರೋ ಹಾಗೆಂದು ಕೂಗಿಟ್ಟರು, ಮತ್ತೆ ಯಾರೋ ಅದಕ್ಕೆ ಉತ್ತರಿಸಿದರು.

—ಎಲ್ಲಾ ಮನಸ್ಸಿನ ಹೋರಾಟ, ಭಾವನೆಗಳ ತಾಕಲಾಟ ; ಬದುಕಿನ ಪೇಚಾಟ.

" ಏಯ್ ಮೂಸಂಡಿ, ಯಾಕೆ ತೆಪ್ಪಗಾದೆ ? ಬೊಗಳೋ "

....ಪೋಲೀಸಿನವನು ಬಲಾತ್ಕರಿಸಿದ.

ಭದ್ರಯ್ಯ ಅಂಜುತ್ತಂಜುತ್ತ ತಾನು ಬಂದ ಉದ್ದೇಶವನ್ನು ವಿವರಿಸಿದ.

ಎಲ್ಲರೂ ಮೌನವಾಗಿ, ಅವನು ಹೇಳುತ್ತಿದ್ದುದನ್ನು ಕೇಳುತ್ತಿದ್ದರು. ಕಾವಲುಗಾರನು ತಾನು ಶ್ಮಶಾನದಲ್ಲಿ ಕಂಡ ದೃಶ್ಯವನ್ನೂ ಭದ್ರಯ್ಯನ ಮಾತುಗಳನ್ನೂ ಮನಸ್ಸಿನಲ್ಲಿಯೇ ತಾಳೆ ಹಾಕುತ್ತಿದ್ದ.

ಮಾತು ಸಾಗಿದ್ದಂತೆ ಎಲ್ಲರೂ ಪೋಲೀಸ್ ಠಾಣೆಗೆ ಬಂದರು. ರಾತ್ರಿ ಪಾಳಿಯ ದಫೇದಾರರು ಎಫ್. ಐ. ಆರ್. ಪುಸ್ತಕದಲ್ಲಿ ಭದ್ರಯ್ಯನ ಹೇಳಿಕೆಯನ್ನು ಬರೆದುಕೊಂಡರು. ಕಾವಲುಗಾರನು ತಾನು ಕಂಡದ್ದೆಲ್ಲವನ್ನೂ ಮುಚ್ಚುಮರೆಯಿಲ್ಲದೆ ವರದಿ ಒಪ್ಪಿಸಿದ. ಅದರಿಂದ ಭದ್ರಯ್ಯನಿಗೆ ಅನುಕೂಲವಾಗುವಂತಿದ್ದುದರಿಂದ, ಅವನ ಅಂಜಿಕೆ ಸ್ವಲ್ಪ ಮಟ್ಟಿಗೆ ಕಡಿಮೆಯಾಯಿತು.

ಕಾವಲುಗಾರ ತನ್ನ ಮಂಟಪಕ್ಕೆ ಹಿಂತಿರುಗಿದ. ಅವನೊಡನೆ ಇಬ್ಬರು ಪೋಲೀಸರೂ ಹೋಗಿ ಭದ್ರಯ್ಯನ ಗೋಣಿಚೀಲವನ್ನೂ ಗುದ್ದಲಿಯನ್ನೂ ತಂದರು. ಆ ರಾತ್ರಿ ಪೋಲೀಸು ಠಾಣೆಯಲ್ಲೇ ಭದ್ರಯ್ಯನನ್ನು ಕೂಡಿ ಹಾಕಲಾಯಿತು.

ಮರುದಿನ ದಾಖಲೆ ಮಾಡಿಕೊಂಡ ಮೊಖದ್ದಮೆ ; ನ್ಯಾಯಾಲಯದಲ್ಲಿ ವಿಚಾರಣೆಯಾದಾಗ ' ಜನರಿಗೆ ಕೆಟ್ಟದನ್ನುಂಟು ಮಾಡುವಂತಹ ತಂತ್ರವಿದ್ಯೆಯನ್ನು ಕಲಿಯುವುದಕ್ಕಾಗಿ ಪಾಪಮಾರ್ಗವನ್ನು ಅನುಸರಿಸಲು ಪ್ರಯತ್ನಿಸಿದ' ಭದ್ರಯ್ಯನಿಗೆ ಮೂರು ತಿಂಗಳು ಕಠಿಣ ಶಿಕ್ಷೆಯನ್ನು ವಿಧಿಸಲಾಯಿತು. ಮುನಿಯಮ್ಮನೂ ಅವಳ ವೃದ್ಧ–ಕಿವುಡಿ ಅತ್ತೆಯೂ ಗೋಳಿಡುತ್ತಾ ಭದ್ರಯ್ಯನನ್ನು ಸೆರೆಮನೆಯಲ್ಲೇ ಬಿಟ್ಟುಬಂದರು. ಬರುವ ದಾರಿಯುದ್ದಕ್ಕೂ ನಿಂಗಣ್ಣನಿಗೆ ಹಿಡಿಹಿಡಿ ಶಾಪ ಹಾಕಿದರು.

ಸೆರೆಮನೆಯ ಬಳಿಗೆ ಬಂದ ನಿಂಗಣ್ಣ—

" ಇಂಗಾಯ್ತದೆ ಅಂತ ನಾನ್ ಅಂದ್ಕಂಡಿರ್ಲಿಲ್ಲ ಭದ್ರೂ " ಎಂದ.

" ಪರವಾಗಿಲ್ಲ ಬುಡಣ್ಣ "

" ಅಷ್ಟಕ್ಕೇ ನೀನ್ ಎದರ್ಕೊಂಡ್ ಬುಡ್ಬೇಡ ಭದ್ರೂ "

" ಇಲ್ಲ ಕಾಣಣ್ಣಾ "

" ಒಂದಿನ ಅಲ್ಲ ಒಂದಿನ–ನನ್ ಇದ್ಯಾವು ನಿಂಗ್ ಏಳ್ಕೊಟ್ಟೇ ಓಯ್ತಾನಿ "

"ಆಗ್ಲಿ ಕಣಣ್ಣ. ನನ್ನ ಮರೆತ್ಬುಡ್ ಬ್ಯಾಡ"

"ಉಂಟಾ ಭದ್ರೂ?"

"ಮೊದಲಿನ್ ಇಸ್ವಾಸಾನೇ ಮಡೀಕೋ ಬೇಕಣ್ಣ"

"ನೀನೆಲ್ಲಿದ್ರೂ ನಾನ್ ನಿನ್ ಮನೀಗೆ ಬಂದೂ–ಓಯ್ತಿರ್ತೀನಿ ಭದ್ರೂ"

"ನಿಂದು ಸ್ಯಾನೆ ದೊಡ್ ಮನ್ಸು ಕಾಣ್ ನಿಂಗಪ್ಪಣ್ಣ"

ನಿಂಗಣ್ಣ ಮೌನವಾಗಿ ನಕ್ಕ.

ಅಷ್ಟರಲ್ಲಿ ಪಹರೆಯುವನು ಅತ್ತ ಬಂದುದರಿಂದ—

"ನಾನಿನ್ ಓಯ್ತಾನಿ ಭದ್ರೂ"

ಎನ್ನುತ್ತಾ ನಿಂಗಣ್ಣ ಹೊರಹೊರಟ. ಭದ್ರಯ್ಯನ ಮನೆಗೆ ಹೋಗದೆ ನೇರವಾಗಿ ರಾಮಸಂದ್ರಕ್ಕೇ ಹೊರಟ. ಸಂಜೆಯ ವೇಳೆಗೆ ಮನೆ ಸೇರಿದ. ಆದರೆ ಮನಸ್ಸಿಗೇಕೋ ನೆಮ್ಮದಿಯಿರಲಿಲ್ಲ.

ಊಟಕ್ಕೆ ಎಬ್ಬಿಸಿದಾಗ ಮೌನವಾಗಿ ಹೋಗಿ ತಣಿಗೆಯ ಮುಂದೆ ಕುಳಿತ. ಬಡಿಸುತ್ತಿದ್ದ ತನ್ನ ಹೆಂಡತಿ ರಾಮಕ್ಕನನ್ನೂ ಭದ್ರಯ್ಯನ ಹೆಂಡತಿ ಮುನಿಯಮ್ಮನನ್ನೂ ಮನಸ್ಸಿನಲ್ಲೇ ಹೋಲಿಸಕೊಂಡ.

ಬೆಂಗಳೂರಿನಲ್ಲಿ ಅವನ ಕಣ್ಣು ಮುನಿಯಮ್ಮನ ಮೇಲೆ ಬಿದ್ದುದು ಒಂದು ಮುಸ್ಸಂಜೆಯಲ್ಲಿ. ಆದಿನ ನಿಂಗಣ್ಣ ನೇರವಾಗಿ ಅಡಿಗೆ ಮನೆಯನ್ನು ಹೊಕ್ಕಾಗ ಮುನಿಯಮ್ಮ ಒಲೆಯ ಮುಂದೆ ಕುಳಿತಿದ್ದಳು. ಉರಿಯಿಲ್ಲದ ಒಲೆಯಲ್ಲಿ ಉರಿದುಹೋದ ಕಟ್ಟಿಗೆಯ ಕೆಂಡಗಳು ಮಿಣಮಿಣನೆ ಹೊಳೆಯುತ್ತಿದ್ದವು. ಮಾಡಿನಲ್ಲಿದ್ದ ಪುಟ್ಟ ದೀಪದ ಬೆಳಕಿನಲ್ಲಿ ಮುನಿಯಮ್ಮ ತುಂಬಾ ಚೆಲುವೆಯಾಗಿ ಕಾಣಿಸುತ್ತಿದ್ದಳು. ಅವಳ ಉಬ್ಬಿದ ಕೆನ್ನೆ, ಸದಾ ನಗುತ್ತಿರುವಂತೆ ತೋರುವ ಬಾಯಿ, ಬುಗುಡಿಯ ಭಾರಕ್ಕೆ ಜೋಲುತ್ತಿದ್ದ ಕಿವಿ, ಆಕರ್ಷಕ ಕಪ್ಪು ಕಣ್ಣುಗಳು, ನಿಷ್ಕಪಟವಾದ ಮುಖ ಭಾವ – ಎಲ್ಲಕ್ಕಿಂತ ಮಿಗಿಲಾಗಿ ಮಾಟವಾಗಿ ತುಂಬಿಕೊಂಡ ಎದೆ: ನಿಂಗಣ್ಣನ ಮನಸ್ಸಿನಲ್ಲಿ ಅವಳ ಪಡಿಯಚ್ಚನ್ನು ಮುದ್ರಿಸಿದ್ದವು. ಆ ಕ್ಷಣದಿಂದ ಅವನ ಮನಸ್ಸು ಅತ್ತ ಹರಿದಿತ್ತು.

ಈ ಪ್ರಸಂಗಕ್ಕೆ ಮೊದಲು, ಕೈ ಹಿಡಿದ ಹೆಂಡತಿ ರಾಮಕ್ಕನೇ ಅವನ ಕಣ್ಣಿಗೆ ರತಿಯೂ – ರಂಭೆಯೂ ಆಗಿದ್ದಳು. ಅವಳು ನಕ್ಕಾಗ ಗುಳಿಬೀಳುವ ಕೆನ್ನೆಯೊಂದೇ ಸಾಕಾಗಿತ್ತು – ನಿಂಗಣ್ಣನನ್ನು ಮರುಳುಮಾಡಲು. ಅವಳ

ಚಂಚಲವಾದ ನಯನಗಳಲ್ಲಿ ಅವನು ಅಪೂರ್ವವಾದುದೇನನ್ನೋ ಕಂಡು ಆನಂದಿಸುತ್ತಿದ್ದ. ಮುನಿಸಿಕೊಂಡಾಗ ಇನ್ನಷ್ಟು ಚೆಲುವಾಗುತ್ತಿದ್ದ ಅವಳ ಆರಕ್ತವದನವನ್ನು ನೋಡುವಾಗಲಂತೂ ನಿಂಗಣ್ಣನಿಗೆ ದೊಡ್ಡ ನಿಧಿಯೇ ದೊರೆತಷ್ಟು ಸಂತೋಷವಾಗಿ ಅವನ ಮೈ ಪುಳಕಗೊಳ್ಳುತ್ತಿತ್ತು. ನಿಜಕ್ಕೂ ಇಷ್ಟೊಂದು ಲಾವಣ್ಯಮಯಿಯಾಗಿ, ಆಕರ್ಷಕವಾಗಿದ್ದ ರಾಮಕ್ಕ ಯಾವ ವಿಧದಲ್ಲಿಯೂ ಮುನಿಯಮ್ಮನಿಗಿಂತ ಕಡಿಮೆಯಾಗಿರಲಿಲ್ಲ.

ರಾಮಕ್ಕ ಲಾವಣ್ಯಮಯಿ – ಮುನಿಯಮ್ಮ ಸೌಂದರ್ಯವತಿ.

ಇವಳು ಕೈ ಹಿಡಿದ ಹೆಂಡತಿ – ಅವಳು ಪರಸ್ತ್ರೀ. ತನ್ನನ್ನೇ ದಾಸನನ್ನಾಗಿ ಮಾಡಿಕೊಳ್ಳಬಲ್ಲಳು!

ಇದು ಮನೆಯ ಅನ್ನ; ತನಗಾಗಿಯೇ ಸಿದ್ಧವಾಗಿರುವ ಮೃಷ್ಟಾನ್ನ – ಅದಾದರೆ ಪರರ ಎಂಜಲು; ಅದನ್ನು ಮುಟ್ಟುವುದಕ್ಕೂ ತನಗೆ ಅಧಿಕಾರವಿಲ್ಲ.

ಆದರೂ ಆ ಎಂಜಲಿನ ಕಡೆಗೇ ಮನಸ್ಸು ಎಳೆಯುತ್ತಿದೆ. ಮುನಿಯಮ್ಮನನ್ನು ತನ್ನ ಮನಸ್ಸು ಸೂರೆಗೊಂಡಿದೆ. ಆಕೆ ಮಾತ್ರ ತನ್ನ ಬಗ್ಗೆ ಇನ್ನೂ ಅಲಕ್ಷ್ಯದಿಂದಲೇ, ಉದಾಸೀನದಿಂದಲೇ, ಸಿಟ್ಟಿನಿಂದಲೇ ಇದ್ದಾಳೆ.

ಹಾಗೆಂದು ತಾನು ಅವಳ ಆಸೆಯನ್ನು ಬಿಡುವುದಕ್ಕಾಗುತ್ತದೆಯೆ?

ಛೆ, ತನ್ನಂತಹ ದಿಟ್ಟ ಗಂಡಸು, ಹತ್ತು ಜನರ ದೃಷ್ಟಿಯಲ್ಲಿ ಗಣ್ಯ, ಸುತ್ತ ಮುತ್ತಲ ಹಳ್ಳಿಗಳವರನ್ನು ಹದ್ದುಬಸ್ತಿನಲ್ಲಿಟ್ಟುಕೊಂಡಿರುವ ಕೆಚ್ಚೆದೆಗಾರ – ಕೇವಲ ಒಂದು ಅಲ್ಪ ಹೆಣ್ಣಿನ ವಿಷಯದಲ್ಲಿ ಹೇಡಿಯಂತೆ ವರ್ತಿಸುವುದೇ?

ಅಲ್ಪ ಹೆಣ್ಣು – ಮುನಿಯಮ್ಮ....

ತನಗೆ ಅವಮಾನಮಾಡಿದ ಮುನಿಯಮ್ಮ....

ಆ ರಾತ್ರಿ ಪೊರಕೆಯನ್ನು ಹಿಡಿದು ತನ್ನ ಸೊಲ್ಲನ್ನಡಗಿಸಿದ ಮುನಿಯಮ್ಮ..

ಅಯ್ಯೋ! ತನ್ನ ಮನಸ್ಸಿನ ತುಂಬಾ ತುಂಬಿಕೊಂಡು ಬಿಟ್ಟಿರುವ ಆ ಚೆಲುವಾದ ಹೆಣ್ಣು ಮುನಿಯಮ್ಮ....

ಮನಸ್ಸು ತಿರಸ್ಕಾರದಿಂದ ಕೂಗಿಟ್ಟಿತು; ಮತ್ತೆ ಕೆರಳಿತು, ಕೋಪಾವಿಷ್ಟವಾಯಿತು.

ಮರುಕ್ಷಣದಲ್ಲಿ ಅದೇ ಮನಸ್ಸು ಮರುಕಗೊಂಡಿತು; ಮೋಹದಿಂದ ಮುನಿಯಮ್ಮನನ್ನು ಕೂಡಲು ಹಾತೊರೆಯಿತು.

ದಿನವೂ ಮನಸಾರೆ ಮಾತನಾಡುತ್ತಾ, ಗೇಲಿಮಾಡುತ್ತಾ ಊಟ ಮಾಡುತ್ತಿದ್ದ ತನ್ನ ಗಂಡ ಇಂದೇಕೆ 'ಸಾಕು – ಬೇಕು' ಎಂದು ಹೇಳದೆ ಮೌನವಾಗಿ ಊಟ ಮಾಡುತ್ತಿದ್ದಾನೆ ಎಂದು ಮನಸ್ಸಿನಲ್ಲಿಯೇ ಅಂದು ಕೊಂಡಳು ರಾಮಕ್ಕ.

ನಿಂಗಣ್ಣ ಊಟ ಮುಗಿಸಿ, ಚಿಂತೆಯ ಸಂತೆಯಲ್ಲಿಯೇ ತಿರುಗಾಡುತ್ತಾ ಪಡಸಾಲೆಗೆ ಬಂದು ಕುಳಿತ.

ರಾಮಕ್ಕ ಕೊಟ್ಟಿಗೆಗೆ ಹೋಗಿ ಹಾಲು ಕರೆದು ತಂದಿಟ್ಟಳು. ಅನಂತರ ತಾನೂ ಊಟ ಮಾಡಿ ಮಡಕೆಗಳನ್ನು ತೊಳೆದಿಟ್ಟಳು. ಮತ್ತೊಮ್ಮೆ ಕೊಟ್ಟಿಗೆಗೆ ಹೋಗಿ ದನಕರುಗಳಿಗೆ ಹುಲ್ಲು ಹಾಕಿದಳು. ಪಡಸಾಲೆಯ ಮೂಲೆಯಲ್ಲಿ ಕಟ್ಟಿದ್ದ ನಾಲ್ಕು ಮೇಕೆಗಳಿಗೂ ಅದರ ಮರಿಗಳಿಗೂ ಸೊಪ್ಪು ಮುರಿದು ಹಾಕಿದಳು. ಮಿಕ್ಕಿದ್ದ ಅರ್ಧ ಮುದ್ದೆ ಹಿಟ್ಟನ್ನು ತೆಗೆದುಕೊಂಡು ಹೋಗಿ, ಸಣ್ಣ ಸಣ್ಣ ತುಂಡು ಮಾಡಿ, ಮಕ್ಕರಿಯ ಕೆಳಗೆ ಮುಚ್ಚಿಟ್ಟಿದ್ದ ಕೋಳಿಗಳಿಗೆ ಹಾಕಿ ಬಂದಳು. ಆಕೆ ಇಷ್ಟು ಕೆಲಸ ಮಾಡಿದರೂ ನಿಂಗಣ್ಣ ಮಾತ್ರ ಮದಡು ಮುಚ್ಚಿಕೊಂಡವನಂತೆ ಮೌನವಾಗಿ ಪಡಸಾಲೆಯಲ್ಲಿ ಕುಳಿತಿದ್ದ.

ಅವನ ಮನಸ್ಸು ಮುಂದಿನ ಕಾರ್ಯಕ್ರಮವನ್ನು ಸಿದ್ಧಗೊಳಿಸುತ್ತಿತ್ತು. ಅದರಿಂದ ದೊರಕುವ ಫಲವನ್ನೂ ಅವನು ಕನಸು ಕಟ್ಟುತ್ತಿದ್ದ. ಆದರೆ ಸರಿಯಾದ ಅವಕಾಶ ಇನ್ನೂ ಒದಗಿ ಬರಲಿಲ್ಲವಲ್ಲಾ ಎಂಬುದೊಂದೇ ಅವನ ಚಿಂತೆ–ಆತುರ.

ರಾಮಕ್ಕ ಹಾಸಿಗೆ ಹಾಸಿ ಮಲಗಿಕೊಂಡಳು. ಹೊತ್ತು ಮೀರುತ್ತಿದೆ ಯೆಂದು ಹೇಳುತ್ತಾ ಮಲಗಿಕೊಳ್ಳಲು ಗಂಡನನ್ನು ಎಚ್ಚರಿಸಿದಳು. ಎರಡು ಕ್ಷಣ ಸುಮ್ಮನಿದ್ದ ನಿಂಗಣ್ಣ, ಅನಂತರ ಎದ್ದು ಹೋಗಿ ಹೊರಬಾಗಿಲು ಭದ್ರಪಡಿಸಿ, ದೀಪವಾರಿಸಿ, ಹಾಸಿಗೆಯಮೇಲೆ ಉರುಳಿಕೊಂಡ.

ದಿನವೆಲ್ಲಾ ಅವಿಶ್ರಾಂತವಾಗಿ ದುಡಿದಿದ್ದ ರಾಮಕ್ಕನಿಗೆ ಬಹು ಬೇಗನೆ ನಿದ್ರೆ ಬಂದಿತು. ಎಂದಿನಂತೆ ಬೆಳಗಿನ ಝಾವದಲ್ಲಿ ಆಕೆಗೆ ಎಚ್ಚರವಾದಾಗ, ಪಕ್ಕದಲ್ಲಿ ಮಲಗಿದ್ದ ನಿಂಗಣ್ಣನಿರಲಿಲ್ಲ. ಸಾಮಾನ್ಯವಾಗಿ, ಸೂರ್ಯೋದಯ ವಾದರೂ ಏಳದೆ ಸೋಮಾರಿಯಂತೆ ಮಲಗಿರುತ್ತಿದ್ದ ತನ್ನ ಗಂಡ ಇಷ್ಟು ಬೇಗನೆ ಎದ್ದು ಎಲ್ಲಿಗೆ ಹೋದ ಎಂದು ರಾಮಕ್ಕನಿಗೆ ಚಿಂತೆಯಾಯಿತು.

ಅವನು 'ಅಕ್ಕನ ತೋಪಿ'ಗೆ ಹೋಗಿ ಪೂಜೆ ಸಲ್ಲಿಸಿ ಬರುವ ವಿಷಯವೂ ಅವಳಿಗೆ ತಿಳಿದಿತ್ತು. ಹಾಗೆ ಹೋಗಿದ್ದರೂ ಬೆಳಗಿನ ಝಾವದಲ್ಲೇ ಮನೆಗೆ ಹಿಂತಿರುಗಿ ಬಂದು ಮಲಗಿರಬೇಕಾಗಿತ್ತು. ಆದರೆ ಇಂದು ಹಾಗಾಗಿಲ್ಲ. ಅವನ ಹಾಸಿಗೆ ಬರಿದಾಗಿದೆ!

ರಾಮಕ್ಕನಿಗೆ ತುಂಬಾ ಯೋಚನೆಗಿಟ್ಟುಕೊಂಡಿತು. ಎಂದಿನಂತೆ ಮನೆಯ ಮುಂಗಡೆ ನೀರು ಚಿಮುಕಿಸುವುದಕ್ಕೂ ಅವಳಿಗೆ ಮನಸ್ಸಿಲ್ಲ. ಕೊಟ್ಟಿಗೆಯ ಸಗಣಿ ಬಳಿಯೋಣವೆಂದರೆ ಕೈಕಾಲು ಸುಸ್ತಾದಂತಿದೆ. ಮೈಯ್ಯ ಹುರುಡೆಲ್ಲಾ ಮಾಯವಾಗಿ ದಿಕ್ಕು ತೋಚದಂತಾಗಿದೆ.

ತಲೆಗೆ ಕೈಯ್ಯೂರಿ ಪಡಸಾಲೆಗೆ ಬಂದು ಕುಸಿದು ಕುಳಿತಳು ರಾಮಕ್ಕ. ಹೀಗೆಯೇ ಕುಳಿತು ಬಿಟ್ಟರೆ – ಗಂಡನ ಗತಿ ಏನಾಯಿತೆಂಬುದನ್ನು ನೋಡ ಬೇಡವೆ ?

ರಾಮಕ್ಕ ಪ್ರಯಾಸದಿಂದ ಎದ್ದು, ಹೊರಗಡೆಗೆ ಬಂದು, ಜಗುಲಿಯ ಕಂಭಕ್ಕೆ ಒರಗಿ ನಿಂತಳು. ಅಷ್ಟರಲ್ಲಿ ಅಲ್ಲಿಗೆ ಗಾಬರಿಯಿಂದ ಬಂದ ತೋಟದ ಮುನಿಸಾಮಿ ಮೇಲುಸಿರುಬಿಡುತ್ತಾ—

" ರಾಮಕ್ಕಾ ನಿಂಗಪ್ಪಣ್ಣ ಅಕ್ಕನೋರ ತೋಪನಾಗ ಬಿದ್‌ಬುಟ್ಟವ್ನೆ–ಗ್ಯಾನಪಾದ ಇಲ್ದಂಗೆ" ಎಂದು ತಡೆತಡೆದು ಹೇಳಿದ.

ಕಂಭಕ್ಕೆ ಒರಗಿ ನಿಂತಿದ್ದ ರಾಮಕ್ಕ ಮಾತಿಲ್ಲದೆ ಕುಸಿದು ಕುಳಿತಳು. ಅವಳ ಮುಖ ಕಪ್ಪಿಟ್ಟಿತು ; ಕಣ್ಣುಗಳು ಕಳೆಗುಂದಿದವು ; ಪ್ರಜ್ಞೆ ತಪ್ಪಿತ್ತು.

ಕೆಲವೇ ನಿಮಿಷಗಳಲ್ಲಿ ಸುದ್ದಿ ಊರಲ್ಲೆಲ್ಲಾ ಹಬ್ಬಿತು. ನಿಂಗಣ್ಣನ ಮನೆಯ ಮುಂದೆ ಜಾತ್ರೆಯಾಯಿತು. ಇನ್ನಷ್ಟು ಮಂದಿ 'ಅಕ್ಕನ ತೋಪಿ'ಗೆ ಓಡಿದರು.

ನೆರೆಹೊರೆಯ ಹೆಂಗಸರು ರಾಮಕ್ಕನಿಗೆ ಉಪಚಾರ ಮಾಡಿದರು. ಸುಮಾರು ಅರ್ಧಗಂಟೆಯ ಬಳಿಕ ಅವಳಿಗೆ ತಿಳಿವು ಬಂದಿತು. ಎಡಬಲದಲ್ಲಿ ಇಬ್ಬರು ಹೆಂಗಸರು ಅವಳನ್ನು ಹಿಡಿದುಕೊಂಡು 'ಅಕ್ಕನ ತೋಪಿ'ಗೆ ಕರೆತಂದರು.

'ಅಕ್ಕನ ತೋಪಿ'ನ ವಯಸ್ಸಾದ ಗೋಣೀಮರ ರಾಮಸಂದ್ರದ ಜನರಿಗೆ ನಾಲ್ಕಾರು ರೀತಿಯಲ್ಲಿ ಪ್ರಸಿದ್ಧವಾಗಿತ್ತು. ಆ ಮರದಡಿಯಲ್ಲೇ ಮೂರು ಅರೆ ಚಪ್ಪಡಿ ಕಲ್ಲುಗಳನ್ನು ನಿಲ್ಲಿಸಿ, ಚಾವಣಿಯಂತೆ ಮೇಲೊಂದು

ಕಲ್ಲು ಚಪ್ಪಡಿ ಹಾಸಿ ಪುಟ್ಟ ಗೂಡು ಕಟ್ಟಿದ್ದರು. ಅದರೊಳಗಡೆ ಮಣ್ಣಿನ 'ಪಿಳ್ಳಾರಿ' ಇಟ್ಟು ಅದರ ಅಕ್ಕಪಕ್ಕದಲ್ಲಿ ಎರಡೆರಡು ಲಗ್ಗೆಯ ಕಲ್ಲುಗಳನ್ನು ನೆಟ್ಟು, ಅದನ್ನು 'ಮುನೇಶ್ವರ'ನೆಂದು ಆ ಪುಟ್ಟ ಗೂಡನ್ನು 'ಮುನೇಶ್ವರನ ಗುಡಿ' ಎಂದೂ ಕರೆಯುತ್ತಿದ್ದರು.

ಊರಿನವರು ಆಗಾಗ ಹರಕೆ ಹೊತ್ತು, ಅಲ್ಲಿಗೆ ತಮ್ಮ ಸಂಸಾರ ಸಹಿತ ಬಂದು, ಪೂಜೆ ಸಲ್ಲಿಸಿ, ಕೋಳಿಯನ್ನು ಬಲಿಕೊಟ್ಟು, ಅಲ್ಲೇ ಅಡಿಗೆ ಮಾಡಿ-ಊಟಮಾಡಿ, ಮುಸ್ಸಂಜೆಯ ಹೊತ್ತಿಗೆ ಮನೆಗೆ ಹಿಂತಿರುಗುತ್ತಿದ್ದರು.

ಗೋಣಿಮರ 'ಮುನೇಶ್ವರ'ನಿಗೆ ಮಾತ್ರ ಪ್ರಸಿದ್ಧವಲ್ಲದೆ, ಪಿಶಾಚಿಗಳಿಗೂ, ಭಾರಿ ಸರ್ಪಗಳಿಗೂ ಪ್ರಸಿದ್ಧವಾಗಿತ್ತು. ಹಗಲುವೇಳೆಯೂ ಸಹ ಒಬ್ಬೊಬ್ಬರೇ 'ಅಕ್ಕನ ತೋಪಿ'ನ ಕಡೆ ಸುಳಿದಾಡಲು ಹೆದರುತ್ತಿದ್ದರು. ಕತ್ತಲೆಯಾದಮೇಲಂತೂ ತೋಪಿನ ಸುದ್ದಿ ಎತ್ತುವುದಕ್ಕೇ ಅಳುಕು. ರಾತ್ರಿಯ ವೇಳೆ ತೋಪಿನ ಪಕ್ಕದಲ್ಲೇ ಇರುವ ನೆರೆ ಹಳ್ಳಿಯ ದಾರಿಯಲ್ಲಿ ನಡೆಯಬೇಕಾದಾಗಲೂ ಸಹ ಜನರು ಗೋಣೀ ಮರವನ್ನು ನೋಡುವ ಧೈರ್ಯ ವಹಿಸುತ್ತಿರಲಿಲ್ಲ.

ಆದರೆ ಸಿಂಗಣ್ಣನ ವಿಷಯವೇ ಬೇರೆ. ಅವನಿಗೆ 'ಅಕ್ಕನ ತೋಪಾ'ಗಲಿ, ಗೋಣೀ ಮರವಾಗಲಿ ಅತಿಶಯವಾಗಿರಲಿಲ್ಲ. ಆ ಸ್ಥಳವೂ ಒಂದೇ — ತನ್ನ ಮನೆಯೂ ಒಂದೇ ಎಂಬುದು ಅವನ ಭಾವನೆ. ಎಂತಲೇ ಆತ ಅಪರಾತ್ರಿಯೂ ನಿರ್ಭಯವಾಗಿ 'ಅಕ್ಕನ ತೋಪಿ'ಗೆ ಹೋಗಿ, ಪೂಜೆ ಸಲ್ಲಿಸಿ, ಆಹುತಿಕೊಟ್ಟು, ಪ್ರೇತ ಪ್ರಸನ್ನಮಾಡಿ ಹಿಂತಿರುಗುತ್ತಿದ್ದ.

ಹಾಗೆಯೇ ಹಿಂದಿನ ರಾತ್ರಿಯೂ ಹೋಗಿದ್ದ; ಆದರೆ ಹಿಂತಿರುಗಿರಲಿಲ್ಲ!

ಹಿಂದಿನ ರಾತ್ರಿ ರಾಮಕ್ಕನಿಗೆ ಚೆನ್ನಾಗಿ ನಿದ್ರೆ ಬಂದಮೇಲೆ, ಸದ್ದು ಮಾಡದೆ ಹಾಸಿಗೆ ಬಿಟ್ಟೆದ್ದ ಸಿಂಗಣ್ಣ ಪಡಸಾಲೆಗೆ ಹೋಗಿ, ಮೂಲೆಯಲ್ಲಿದ್ದ ಒಂದು ಮೇಕೆಯ ಮರಿಯನ್ನು ಬಲವಾಗಿ ಹಿಡಿದುಕೊಂಡು, ಅದು ಅರಚಿಕೊಳ್ಳಲು ಅವಕಾಶ ಕೊಡದಂತೆ ಬಟ್ಟೆಯಲ್ಲಿ ಬಲವಾಗಿ ಸುತ್ತಿದ. ಅನಂತರ ಅರಿಶಿಣ, ಕುಂಕುಮ, ಗಂಧಕಡ್ಡಿ, ಚೂರಿ, ಪಂಚಲೋಹದ ತಗಡು, ರಾಮಕ್ಕನ ಸಂಚಿಯಲ್ಲಿದ್ದ ವೀಳೆಯದೆಲೆ — ಅಡಿಕೆ, ಸದಾ ಮನೆಯಲ್ಲಿಟ್ಟಿರುತ್ತಿದ್ದ 'ಜಟಾಮಾಂಸಿ' ಎಂಬ ಗಂಧಿಗೆ ಸಾಮಾನಿನ ಚೂರು — ಇಷ್ಟನ್ನೂ ತೆಗೆದುಕೊಂಡು 'ಅಕ್ಕನ ತೋಪು' ಸೇರಿದ.

ಗೋಣೀಮರದ ಬಳಿಗೆ ಬಂದು, ಅದನ್ನು ಮೂರು ಸುತ್ತು ಸುತ್ತಿದ್ದಾಯಿತು. ಅನಂತರ ಪೂಜೆ ಆರಂಭವಾಯಿತು. ಮರದ ಬುಡಕ್ಕೆ ಅರಿಶಿನ–ಕುಂಕುಮ ಲೇಪಿಸಿ, ಹೊಲೆಯ ಲಚುಮಯ್ಯ ಉಪದೇಶಿಸಿದ್ದ 'ಪ್ರೇತ ಪ್ರಸನ್ನ ಮೂಲಮಂತ್ರ'ವನ್ನು ನೂರೆಂಟುಸಾರಿ ಜಪಿಸಿದ ಬಳಿಕ, ಆಡಿನ ಮರಿಯನ್ನು ಒಂದೇ ಏಟಿಗೆ ಚೂರಿಯಿಂದ ಇರಿದು, ಅದರ ರಕ್ತವನ್ನು ಮರದ ಬುಡಕ್ಕೆ ಸಿಂಪಡಿಸಿದ್ದಾಯಿತು. ನಿಂಗಣ್ಣ ನಿರೀಕ್ಷಿಸಿದಂತೆ ಮರದ ಬುಡವೇ ನಡುಗಿದ ಶಬ್ದವಾಯಿತು. ಇದ್ದಕ್ಕಿದ್ದಂತೆ ಮರದೆಲೆಗಳು 'ರವರವ'ನೆ ತೀಡಿದವು. ಆ ಕೂಡಲೇ ನಿಂಗಣ್ಣ ಎಲೆ — ಅಡಕೆಯನ್ನು ಬುಡದಲ್ಲಿದ್ದ ಸಣ್ಣ ಪೊಟರೆಗೆ ಎಸೆದು, ಪಂಚ ಲೋಹದ ತಗಡಿನಲ್ಲಿ ಏನನ್ನೋ ಬರೆದು ಅದರಲ್ಲಿ 'ಜಟಾಮಾಂಸಿ' ಯನ್ನು ಸುತ್ತಿ, ತನ್ನ ತೋಳಿಗೆ ಕಟ್ಟಿಕೊಂಡ. ಅನಂತರ ದೀರ್ಘದಂಡ ನಮಸ್ಕಾರ ಮಾಡಲು ಬೋರಲಾಗಿ ಮಲಗಿದ. ಮಲಗಿದವನು ಮತ್ತೆ ಏಳಲಿಲ್ಲ.

ಮರುದಿನ 'ಅಕ್ಕನ ತೋಪಿ'ನಲ್ಲಿ ನೆರೆದ ಜನಸಂದಣಿ —
'ಗೋಣೀಮರ ನಿಂಗಪ್ಪಣ್ಣನ್ನ ಆವ್ತಿ ತಕ್ಕಂಡ್‌ಬುಡ್ತು'
— ಎಂದು ಕೂಗಿಟ್ಟಿತು.

ರಾಮಕ್ಕ ನಿಧಾನವಾಗಿ ಹೆಜ್ಜೆಯಿಡುತ್ತಾ ಬೋರಲಾಗಿ ಬಿದ್ದಿದ್ದ ತನ್ನ ಗಂಡನ ಬಳಿಗೆ ಬಂದು ನೋಡಿದಳು. ಅವನ ಬಾಯಿಂದ ಹರಿದು ಬಂದಿದ್ದ ರಕ್ತ ನೆಲದಮೇಲೆಲ್ಲಾ ಹೆಪ್ಪುಗಟ್ಟಿ ನಿಂತಿತ್ತು. ಕಣ್ಣು ಮೂಗುಗಳಿಂದಲೂ ರಕ್ತ ಸೋರಿದ್ದುದು ಸ್ಪಷ್ಟವಾಗಿ ಕಾಣುತ್ತಿತ್ತು. ಶ್ವಾಸ ಆಡುತ್ತಿರಲಿಲ್ಲವಾದ್ದರಿಂದ ಅವನು ಸತ್ತಿದ್ದಾನೆಂಬುದು ಅವಳಿಗೆ ಖಚಿತವಾಯಿತು.

ಯಾರ ಮಾತಿಗೂ ಸಮಾಧಾನಗೊಳ್ಳದೆ ರಾಮಕ್ಕ ಒಂದೇ ಸಮನಾಗಿ ಗೋಳಿಡುತ್ತಾ, ಗಂಡನ ಬೆನ್ನಿನ ಮೇಲೆ ತಲೆಯಿಟ್ಟು ಹೊರಳಾಡಿದಳು. ರಾಮಸಂದ್ರದ ಜನರಿಗೆ ಮುಂದೇನು ಮಾಡಬೇಕೆಂಬುದು ತೋಚದಾಗಿತ್ತು.

ಸುದ್ದಿ ತಾಲ್ಲೋಕಿಗೆ ತಿಳಿದು, ಪೋಲೀಸರು ಬಂದು ಮಹಜರುಕ್ರಮ ನಡೆಸಿದರು.

ಅಷ್ಟರಲ್ಲಿ ಅಲ್ಲಿಗೆ ಓಡೋಡಿ ಬಂದಳು ಮುನಿಯಮ್ಮ! ಭದ್ರಯ್ಯನ ಹೆಂಡತಿ ಮುನಿಯಮ್ಮ!

'ಯಾರೀಕೆ? ಏಕಿಷ್ಟು ಅವಸರದಿಂದ ಓಡಿಬರುತ್ತಿದ್ದಾಳೆ?'

—ಎಂದು ರಾಮಸಂದ್ರದ ಜನರಿಗೆಲ್ಲಾ ಆಶ್ಚರ್ಯ.

ಬೆಂಗಳೂರಿನಲ್ಲಿ— ತನ್ನ ಮನೆಯಲ್ಲಿ ಮಲಗಿ ನಿದ್ರಿಸುತ್ತಿದ್ದ ಮುನಿಯಮ್ಮ ತಟ್ಟನೆ ಎಚ್ಚೆತ್ತು, ಕೂದಲನ್ನು ಸರಿಪಡಿಸಿಕೊಳ್ಳದೆ, ಉಟ್ಟ ಸೀರೆಯಲ್ಲಿಯೇ ಮನೆಬಿಟ್ಟು ಓಡಿ ಬಂದಿದ್ದಳು. ಅವಳಿಗರಿವಿಲ್ಲದೆಯೇ ಅವಳ ಕಾಲುಗಳು ಯಾವುದೋ ದಾರಿಯಲ್ಲಿ ತಾವಾಗಿಯೇ ಓಡಿದವು. ಹಾಗೆ ಓಡಿ ಓಡಿ, ಎಂಟು ಮೈಲಿ ದೂರದಲ್ಲಿದ್ದ ರಾಮಸಂದ್ರಕ್ಕೆ ಬಂದಿದ್ದಳು. ನಿಂಗಣ್ಣನ ಮನೆಗೆ ಹೋಗದೆ ನೇರವಾಗಿ 'ಅಕ್ಕನ ತೋಪಿ'ಗೇ ಬಂದಿದ್ದಳು. ಆ ವೇಳೆಗೆ ಪೋಲಿಸರು ನಿಂಗಣ್ಣನ ಶವದ ಮಹಜರು ನಡೆಸಿ, ಹಿಂತಿರುಗಲನುವಾಗಿದ್ದರು. ಆದರೆ, ಅವರನ್ನು ತಡೆದು ನಿಲ್ಲಿಸಿ, ಅವರ ಕುತೂಹಲವನ್ನು ಕೆರಳಿಸಿದ್ದಳು ಮುನಿಯಮ್ಮ!

"ನಿಂಗಪ್ಪಣ್ಣಾ, ನಿಂಗಪ್ಪಣ್ಣಾ, ನಾ ಬಂದಿವ್ನಿ ಕಾಣ್ ನಿಂಗಪ್ಪಣ್ಣಾ"

ಎನ್ನುತ್ತಾ ಜನಸಂದಣಿಯಲ್ಲಿ ದಾರಿ ಮಾಡಿಕೊಂಡು ನುಗ್ಗಿದಳು ಮುನಿಯಮ್ಮ. ನೆರೆದಿದ್ದವರೆಲ್ಲಾ ಆಶ್ಚರ್ಯ-ಕುತೂಹಲಗಳಿಂದ ಅವಳನ್ನೇ ನೋಡಿದರು. ಗೋಳಿಡುತ್ತಿದ್ದ ರಾಮಕ್ಕನೂ ತನ್ನ ಹಲುಬಾಟವನ್ನು ನಿಲ್ಲಿಸಿ ಮುನಿಯಮ್ಮನನ್ನು ನಿಟ್ಟಿಸಿದಳು.

"ಇದ್ಯಾಕೆ ಇಲ್ಲಿ ಕುಂತಿದ್ದೀ. ನನ್ ನಿಂಗಪ್ಪಣ್ಣನ್ ತಾವ?"

ಮಾತ್ಸರ್ಯದಿಂದ ನುಡಿದ ಮುನಿಯಮ್ಮ ರಾಮಕ್ಕನ ರಟ್ಟೆ ಹಿಡಿದು ಎಳೆದಳು.

"ಬಂದ್‌ಬುಟ್ಲು ಸುಪನಾತಿ—ನನ್ ಗಂಡನ್ ತಾವ್ಕೆ!"

—ಎಂದು ಮುನಿಯಮ್ಮ ನುಡಿದಾಗ ರಾಮಕ್ಕನಿಗೆ ಗಾಬರಿಯಾಯಿತು.

'ಇದೇನು, ನಿಂಗಣ್ಣ ತನ್ನ ಗಂಡನೋ ಅಥವಾ 'ಆ ಹೆಂಗಸಿನ' ಗಂಡನೋ?' ಎಂದು ರಾಮಕ್ಕ ತನ್ನನ್ನೇ ತಾನೇ ಕೇಳಿಕೊಂಡಳು.

"ಏಟೊಂದ್ ಧೈರ್ಯ್ಯಾನೇ ನನ್ ಗಂಡನ್ ಮುಟ್‌ಕೊಣ್ಣೋಕೆ?"

ರಾಮಕ್ಕನ ಮೋರೆಗೆ ತಿವಿಯುತ್ತಾ, ಸಿಡಿಮಿಡಿಗೊಂಡ ಮುನಿಯಮ್ಮ ಗಡಸು ಕಂಠದಿಂದ ಕೇಳಿದಳು.

'ನಿಂಗಣ್ಣನ ಕೈಯಲ್ಲಿ ತಾನು 'ಕರಿಮಣಿ' ಕಟ್ಟಿಸಿಕೊಂಡದ್ದೇ ಸುಳ್ಳಾಗಿ ಹೋಯಿತೆ?'

ರಾಮಕ್ಕ ದಿಗ್ಭ್ರಮೆಗೊಂಡಳು.

ಅಷ್ಟರಲ್ಲಿ ಮುಂದೆ ಬಂದ ಪೋಲೀಸಿನವನು—

" ಯಾರಮ್ಮ ನೀನು ?"

ಎಂದು ಕೇಳಿದ.

" ನಾನಾ....?"

" ಹ್ಞಂ "

" ಮುನಿ ಕಾಣ್ಣಾ....ಮುನಿ....ಮುನಿ !"

" ಯಾಕೆ ಬಂದೆ ಇಲ್ಲಿ ?"

" ನನ್ ಗಂಡನ್ ತಾವ್ಕ ನಾನ್ ಬಂದೆ. ನೀನೇನ್ ಕೇಳೋದು ? ಇಂಗೆಲ್ಲಾ ಕೇಳ್‌ಬೌದಾ ? ಸರೋಯ್ತಾ ?"

—ರಾಮಕ್ಕನನ್ನು ಬಿಟ್ಟು ಪೋಲೀಸಿನವನನ್ನು ಆಮರಿಸಿಕೊಂಡಳು ಮುನಿಯಮ್ಮ.

" ನೋಡು ಸರಿಯಾಗಿ—ನಾನು ಯಾರೂಂತ "

" ಯಾರಾದ್ರೇನು ? ನನ್‌ಗಂಡನ್ ತಾವ್ಕ ನಾನ್ ಬಂದ್ರೆ, ' ಯಾಕೆ ?' ಅಂತ ನೀನ್ ಕೇಳ್‌ಬೌದಾ ಅಂದೆ ?

" ನಾನು ಪೋಲೀಸಿನವನು........"

" ಪೋಲೀಸ್‌ನೋನಾದ್ರೆ, ನಿನ್ ರೂಲೀಸ್‌ನಾಗ ' ಇಂಗ್ ಕೇಳು ' ಅಂತ ಬರದೈತಾ ? ಎಲ್ಲಿ ತೆಗೀ ನೋಡಾವ "

ಮುನಿದ ಮಾರಿ ಮುನಿಯಮ್ಮನನ್ನು ಎದುರಿಸುವುದು ಸುಲಭವಾಗಿರಲಿಲ್ಲ. ಪೋಲೀಸಿನವರು ಅವಳನ್ನು ಹಿಡಿದುಕೊಂಡು ಠಾಣೆಗೆ ಒಯ್ಯಲು ನಿಶ್ಚಯಿಸಿದರು. ಆದರೆ ಅಷ್ಟರಲ್ಲಿ ಸುದ್ದಿ ತಿಳಿದ ಬೈಲುಹಳ್ಳಿಯ ಹೊಲೆಯರ ಲಚುಮಯ್ಯ – ನೆರೆಯ ಹಳ್ಳಿಗೆ ಬಂದಿದ್ದವನು – ' ಅಕ್ಕನ ತೋಪಿ 'ಗೆ ಧಾವಿಸಿ ಬಂದ. ಅವನ ಪರಿಚಯವಿದ್ದ ರಾಮಸಂದ್ರದ ಜನರು ಅವನಿಗೆ ದಾರಿ ಮಾಡಿಕೊಟ್ಟರು. ಆತ ಮುನಿಯಮ್ಮನ ಬಳಿಗೆ ಬಂದು ನಿಂತು, ಅಲ್ಲಿ ನಡೆದಿರುವುದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದ. ಪಂಚಾಯತಿಯ ಮುಖ್ಯಸ್ಥ ಚಿಕ್ಕೇಗೌಡ, ನಡೆದ ಸಂಗತಿಯನ್ನೆಲ್ಲಾ ಲಚುಮಯ್ಯನಿಗೆ ವರದಿ ಒಪ್ಪಿಸಿದ.

ಲಚುಮಯ್ಯನಿಗೂ ಆ ದೃಶ್ಯವನ್ನು ಕಂಡು ' ಅಯ್ಯೋ ' ಎನಿಸಿತು.

" ನಿಂಗಣ್ಣನಿಗೆ ಇಂಥಾ ಸಾವು ಬತ್ತದೆ ಅಂತ ನಾನು ಕನಸು-ಮನಸಿನಾಗೂ ಅಂದ್ಕೊಂಡಿರಲಿಲ್ಲ. "

ಲಚುಮಯ್ಯನ ಬಾಯಿಂದ ಬಂದ ಆ ಮಾತು ಅವನ ಸುತ್ತು ಮುತ್ತುಲಿದ್ದವರಿಗೆ ಕೇಳಿಸದಿರಲಿಲ್ಲ.

" ಈಗೇನ್ ಮಾಡ್ತೀರಿ ಬುದ್ಧಿ ನೀವು ?"

ಲಚುಮಯ್ಯ ಪೋಲೀಸ್ ಅಧಿಕಾರಿಗಳನ್ನು ಕೇಳಿದ.

" ಈ ಹೆಂಗಸನ್ನ ಸ್ಟೇಷನ್ನಿಗೆ ಕರೆದುಕೊಂಡು ಹೋಗುತ್ತೇವೆ. ಡಾಕ್ಟರ್ ಪರೀಕ್ಷೆಯಾದ ಮೇಲೆ ಹೆಣ ದರ್ಫ ಮಾಡಿಸಬಹುದು. "

" ಡಾಕ್ಟರ್ ಪರೀಕ್ಸೆ ಯಾಕ್ ಬುದ್ಧಿ ? ಅವನು ಸಕ್ತೀಗೆ ಆವ್ ತಿಯಾಗವ್ನೆ....ವಿಷ ಗಿಷ ಕೊಟ್ಟು ಯಾರೂ ಅವನ್ನ ಸಾಯಿಸ್ಲಿಲ್ಲ "

" ಅದೆಲ್ಲಾ ಕಟ್ಕೊಂಡು ನಮ್ಗೇನು ? ಡಾಕ್ಟರ್ ಪರೀಕ್ಷೆ ಆಗಲೇ ಬೇಕು. ಅದು ರೂಲ್ಸು "

" ಅಂಗಾದ್ರೆ ಈ ಹೆಂಗಸು ?"

" ಪೋಲೀಸ್ ಸ್ಟೇಷರ್ನಗೆ "

" ಎಲ್ಲಿ ನೋಡಾನ, ಎಂಗ್ ಕರ್ಕಂಡ್ ಓಯ್ತಾರೆಯೋ ನೋಡ್ತೀನಿ !"

—ಎನ್ನುತ್ತಾ ಮುನಿಯಮ್ಮ ಬಿರುಬಿರುನೆ ನಡೆದು, ಪೋಲೀಸು ಅಧಿಕಾರಿಯ ಬಳಿಗೆ ಬಂದು ನಿಂತಳು. ಲಚುಮಯ್ಯ ಅವಳನ್ನು ತಡೆದು—

"ಒಸಿ ಇರಮ್ಮ, ನಾನೊಂದ್ ಮಾತ್ ಏಳ್ತೀನಿ "

ಎನ್ನುತ್ತಾ, ಪೋಲೀಸಿನವರ ಕಡೆಗೆ ತಿರುಗಿ—

" ಬುದ್ಧಿ, ನನ್ ಮಾತ್ ಒಸಿ ಕೇಳಿ....ನಿಂಗಣ್ಣ 'ವಸೀಕರಣ' ಮಾಡ್ಕೊಂಡ್ ಯಂತ್ರ ಕಟ್ ಕೊಂಡವ್ನೆ. ಅವನ್ ಮೈಮೇಗ ಆ ಯಂತ್ರ ಎಲ್ಲದೋ ಉಡುಕಿ, ತೆಗೆದು ಬುಟ್ಟರೆ ಎಲ್ಲಾ ಸರಿ ಓಯ್ತದೆ....ಆಮೇಕಿಂದ ನಿಮ್ಮಿಷ್ಟ ಬಂದಂಗೆ ಮಾಡಿ" ಎಂದ.

ಪೋಲೀಸು ಅಧಿಕಾರಿಗಳು ಸ್ವಲ್ಪ ಹೊತ್ತು ಯೋಚಿಸಿದರು. ಕೊನೆಗೆ ಲಚುಮಯ್ಯನ ಮಾತಿಗೆ ಬೆಲೆ ಕೊಡಲು ಒಪ್ಪಿಕೊಂಡರು.

ಇನ್ನು ಯಂತ್ರವನ್ನು ಹುಡುಕಿ, ಅದನ್ನು ಬಿಚ್ಚಿ, ಹೊರಗೆ ತೆಗೆಯಬೇಕು. ಆ ಕೆಲಸಕ್ಕೆ ಯಾರು ಮುಂದಾಗುವರು ?

ರಾಮಕ್ಕ, ತಾನೇ ಆ ಕೆಲಸ ಮಾಡುತ್ತೇನೆಂದಳು. ಆದರೆ ಅದಕ್ಕೆ

ಮುನಿಯಮ್ಮ ಒಪ್ಪುವಳೇ ? ಅವಳು ರಾಮಕ್ಕನನ್ನು ನಿಂಗಣ್ಣನ ಬಳಿಗೇ ಬರಲಿಸಲೊಲ್ಲಳು !

ಮುನಿಯಮ್ಮನಿಗೇ ಹೇಳೋಣವೆಂದರೆ, ಅವಳು ಸೆರಗು ಬಿಗಿದು, ಕದನಕ್ಕೇ ನಿಂತಿದ್ದಾಳೆ. ಒಂದು ಮಾತಾಡಿದರೆ ಹೆಚ್ಚು – ಒಂದು ಮಾತಾಡಿದರೆ ಕಮ್ಮಿ – ಎಂದ ಮೇಲೆ ಅವಳಿಗೆ ಹೇಗೆ ಹೇಳುವುದು ?

ಚಂಡಿ ಉಪಾಸಕನಾದ ಲಚುಮಯ್ಯನಂತೂ ಹೆಣವನ್ನು ಮುಟ್ಟು ವಂತಿರಲಿಲ್ಲ. ಅದು ಮೈಲಿಗೆಯಂತೆ !

ಸ್ವಲ್ಪ ಹೊತ್ತು ಎಲ್ಲರೂ ಮೌನವಾಗಿದ್ದರು.

ಅನಂತರ ಪೋಲೀಸಿನವನೊಬ್ಬ ಮುಂದೆ ಬಂದು ಶವದ ಅಂಗಿಯೊಳಗೆ ಕೈಯ್ಯಿಟ್ಟು, ಕುತ್ತಿಗೆ ಮತ್ತು ತೋಳಿನ ಭಾಗಗಳನ್ನು ನೋಡಿದ. ಎಡದ ತೋಳಿಗೆ ಕಟ್ಟಿದ ಪಂಚಲೋಹದ ತಗಡಿನ ಯಂತ್ರ ಅವನ ಕೈಗೆ ಸಿಕ್ಕಿತು. ಬಿಚ್ಚಲಾಗದಂತೆ ಗಂಟು ಹಾಕಿದ್ದುದರಿಂದ, ದಾರವನ್ನು ಕತ್ತರಿಸಬೇಕಾ ಯಿತು. ನಿಂಗಣ್ಣನ ಮೈಯ್ಯಿಂದ ಯಂತ್ರವನ್ನು ತೆಗೆದೊಡನೆ ಮುನಿಯಮ್ಮ ತಲೆ ತಿರುಗಿದವಳಂತೆ 'ಧೊಪ್ಪನೆ' ಕೆಳಗೆ ಬಿದ್ದಳು. ನೆರೆದಿದ್ದವರಿಗೆಲ್ಲಾ ಆ ದೃಶ್ಯವನ್ನು ಕಂಡು ಇನ್ನಷ್ಟು ಗಾಬರಿಯಾಯಿತು.

ಪೋಲೀಸಿನವನು ತೆಗೆದುಕೊಟ್ಟ ಯಂತ್ರವನ್ನು ಲಚುಮಯ್ಯನೇ ಬಿಚ್ಚಿದ. ಅದರೊಳಗಡೆ ಇದ್ದ 'ಮಯೂರಶಿಖಿ ಜಟಾಮಾಂಸಿ' ಯನ್ನೂ, ತಗಡಿನಮೇಲೆ 'ಸ್ತ್ರೀವಶ್ಯಯಂತ್ರ' ಎಂದೂ, ಅಡ್ಡ – ಉದ್ದಕ್ಕೆ ನಾಲ್ಕು – ನಾಲ್ಕು ಮನೆಗಳಿದ್ದು, ಒಟ್ಟು ಹದಿನಾರು ಮನೆಗಳುಳ್ಳ ಚದುರವೂ ಆ ಮನೆ ಗಳಲ್ಲಿ 'ಹ್ರೆಂ–ಹ್ರಿಂ–ಹ್ರೆಂ–ಹ್ರಂ' ಎಂಬ ಬೀಜಾಕ್ಷರಗಳೂ, ಕೆಳಭಾಗದಲ್ಲಿ 'ಮುನಿಯಮ್ಮ' ಎಂಬ ಹೆಸರೂ ಬರೆದಿದ್ದುದನ್ನು ಎಲ್ಲರೂ ನೋಡಿದರು.

"ನೋಡಿ ಬುದ್ಧಿ, ಈ ಯಂತ್ರದಾಗ ತನಗೆ ಬೇಕಾದ ಹೆಣ್ಣಿನ ಹೆಸರು ಬರೆದು ಗಂಡು ಕಟ್ಟಿಕೊಂಡರೆ, ಎಂತಾವಳಾದರೂ ಸರಿಯೇ – ಆ ಹೆಂಗಸು ವಶ ಆಗಿ ಗಂಡಿನ ಕಾಲು ಕೆಳಗೆ ಬಂದು ಬೀಳ್ತಾಳೆ. ಅಂಗೇನೇ ತನಗೆ ಬೇಕಾದ ಗಂಡಿನ ಹೆಸರು ಬರೆದು ಹೆಣ್ಣು ಕಟ್ಟಿಕೊಂಡರೆ, ಗಂಡಸೂ ವಶ ಆಗ್ತಾನೆ"

ಲಚುಮಯ್ಯ ಆ ಯಂತ್ರದ ಬಗ್ಗೆ ವಿವರಣೆಯಿತ್ತ. ಅವನ ಮಾತು ಸತ್ಯವೆಂದು ಸಾರಲು ಮುನಿಯಮ್ಮನ ಪ್ರಸಂಗವೇ ಸಾಕಾಗಿತ್ತು. ಪೋಲೀಸಿ

ನವರೂ ದಿಗ್ಭ್ರಮೆಗೊಂಡಿದ್ದರು.

ಮೂರ್ಛಿತಳಾಗಿದ್ದ ಮುನಿಯಮ್ಮ ಹಾಗೆಯೇ ಬಿದ್ದಿದ್ದಳು. ಅವಳನ್ನು ನೋಡಿ ತುಂಬಾ ಕಳವಳಗೊಂಡಿದ್ದವರೊಬ್ಬರು ತೋಪಿನ ಪಕ್ಕದಲ್ಲಿದ್ದ ಬಾವಿಯಲ್ಲಿ ಬಟ್ಟೆ ನೆನಸಿಕೊಂಡು ಬಂದು ಅವಳ ಹಣೆಯಮೇಲೆ ಹಿತವಾಗಿ ಉಜ್ಜಿದರು. ಕೆಲವು ನಿಮಿಷಗಳ ಬಳಿಕ ಮುನಿಯಮ್ಮ ನಿಧಾನವಾಗಿ ಕಣ್ಣು ತೆರೆದಳು. ಸುತ್ತಲೂ ನೆರೆದಿದ್ದ ಜನರನ್ನು ಕಂಡು 'ತಾನೆಲ್ಲಿದ್ದೇನೆ?' ಎಂದು ತನ್ನನ್ನು ತಾನೇ ಕೇಳಿಕೊಂಡಳು. ಸ್ವಲ್ಪಹೊತ್ತಿಗೆ ಮುಂಚೆ 'ವಶೀಕರಣ'ದ ಪ್ರಭಾವದಿಂದ ಸ್ಮೃತಿ ಪರಿವರ್ತನೆಗೊಂಡಿದ್ದ ಆಕೆ ಇದೀಗ ಅದರಿಂದ ಸಂಪೂರ್ಣ ವಿಮುಕ್ತಳಾಗಿದ್ದಳು.

ಎಚ್ಚರಗೊಂಡ ಮುನಿಯಮ್ಮ ಎದ್ದು ನಿಂತಳು; ಸುತ್ತಲೂ ನೋಡಿದಳು........

ಹೌದು, ಎಲ್ಲರೂ ಅಪರಿಚಿತರೇ! ಆದರೆ ಬೆಂಗಳೂರಿನಲ್ಲಿ ತನ್ನನ್ನು ಕೆಣಕಿದ ನಿಂಗಣ್ಣ ಇದೇಕೆ ಹೀಗೆ ಬಿದ್ದಿದ್ದಾನೆ? ತಾನಾದರೂ ಇಲ್ಲಿಗೆ ಹೇಗೆ ಬಂದೆ? ಏಕೆ ಬಂದೆ?

ಮುನಿಯಮ್ಮನ ಮನಸ್ಸು ಉತ್ತರಕ್ಕಾಗಿ ಹಾತೊರೆಯಿತು. ಅವಳ ಸ್ಥಿತಿಯನ್ನರಿತ ಲಚುಮಯ್ಯ ಸಂಗತಿಯನ್ನೆಲ್ಲಾ ಅವಳಿಗೆ ವಿವರಿಸಿ ಹೇಳಿದ. ಮುನಿಯಮ್ಮ ಕಳವಳಗೊಂಡಳು.

'ತಾನು ಗಂಡನ ಮನೆಯಿಂದ ಇಲ್ಲಿಗೆ ಓಡಿ ಬಂದೆನೆ? ಈ ಸಂಗತಿ ಮನೆಯವರಿಗೂ, ಗಂಡನಿಗೂ, ಕುಲದವರಿಗೂ ತಿಳಿದರೆ ತನ್ನನ್ನು ಸುಮ್ಮನೆ ಬಿಡುವರೆ?'

ಭಯದಿಂದ ಮುನಿಯಮ್ಮನ ಹೃದಯ ನಡುಗಿತು.

'ನಿಂಗಣ್ಣನನ್ನು ಕಂಡರೆ ಕಿಡಿ ಕಾರುತ್ತಿದ್ದ, ಅವನ ಹೆಡೆಮುರಿ ಕಟ್ಟಲು ನಿಶ್ಚಯಿಸಿದ್ದ ತಾನೇ ಈಗ ನಿಂಗಣ್ಣನನ್ನು ಹುಡುಕಿಕೊಂಡು ಓಡೋಡಿ ಬಂದೆನೆ?'

ಬಗೆಹರಿಯದ ನಿಜಸಂಗತಿಗಾಗಿ ಆಕೆ ಆಶ್ಚರ್ಯಪಟ್ಟಳು.

'ಹೆಣ್ಣೆಂದರೆ ಆಟದ ಗೊಂಬೆಯೆಂದು ತಿಳಿದುಕೊಂಡ ಇಂತಹ ಕಾಮಾಂಧ ತಂತ್ರಿಗಳು ಖಂಡಿತವಾಗಿಯೂ ಬದುಕಿರಬಾರದು. ಅವರು ಸಾಯಲೇಬೇಕು. ನಿಂಗಣ್ಣನಂತಹವರು ನೂರುಮಂದಿ ಸತ್ತರೂ ನಷ್ಟವಿಲ್ಲ...

ಸಾಯಲೇಬೇಕು....

ಕೋಪೋದ್ರಿಕ್ತವಾದ ಅವಳ ಮನ ಕಠಿಣವಾಗಿ ಶಪಿಸಿತು.

" ಇದ್ಯಾಕ್ ಸುಮ್ನೆ ನಿಂತ್‌ಬುಟ್ಟೆವ್ವಾ ?"

ತನ್ನ ತಂಗಿಯನ್ನು ಮಾತನಾಡಿಸುವಂತೆ ಲಚುಮಯ್ಯ ಮೃದುವಾಗಿ ಮುನಿಯಮ್ಮನನ್ನು ಕೇಳಿದ.

ಮುನಿಯಮ್ಮನಿಗೇಕೋ ಅಳು ಬರುವಂತಾಯಿತು.

" ಯಾಕವ್ವಾ ಕಣ್ಣಾಗ ನೀರು ?"

" ನಾನ್ ಮನೇಕೆಂಗೋಗ್ಲಣ್ಣಾ ?"

" ನಿನ್ ಮನೆ ಎಲ್ಲಿದೆ ಏಳವ್ವಾ. ನಾವು ಕರ್‍ಕೊಂಡ್ ಓಗಿ ಬಿಡ್ತೀವಿ "

ಹೇಳಲೋ – ಬೇಡವೋ ಎಂದು ಸ್ವಲ್ಪ ಹೊತ್ತು ಅನುಮಾನಿಸಿದ ಮುನಿಯಮ್ಮ ಕೊನೆಗೆ ತನ್ನ ಸಂಗತಿಯನ್ನೆಲ್ಲಾ ಮುಚ್ಚು ಮರೆಯಿಲ್ಲದೆ ಹೇಳಿದಳು. ಸಿಂಗಣ್ಣನು ತನ್ನನ್ನು ಕೆಣಕಲು ಬಂದುದನ್ನೂ, ಎರಡು ದಿನ ಗಳ ಹಿಂದೆ ತನ್ನ ಗಂಡ ಭದ್ರಯ್ಯ ಭೂತವಿದ್ಯೆ ಕಲಿಯಲು ಪ್ರಯತ್ನಿಸಿ, ಪೋಲೀಸರ ಕೈಗೆ ಸಿಕ್ಕಿ ಸೆರೆಮನೆಗೆ ಹೋದುದನ್ನೂ ಮುನಿಯಮ್ಮನ ಬಾಯಿಂದಲೇ ಕೇಳಿದಾಗ ರಾಮಕ್ಕನಿಗೂ ದುಃಖವಾಯಿತು. ನೆರೆದಿದ್ದ ವರೆಲ್ಲಾ ಮರುಕ ಸೂಚಿಸಿದರು. ಪೋಲೀಸಿನವರಿಗೂ ' ಅಯ್ಯೋ ಪಾಪ ' ಎನಿಸುವಂತಾಯಿತು.

" ಸಿಂಗಪ್ಪಣ್ಣಂಗೆ ಹೆಂಡ್ರು – ಮಕ್ಕಳು ಇಲ್ವಾ ಅಣ್ಣ ?"

ಮುನಿಯಮ್ಮ ಲಚುಮಯ್ಯನನ್ನು ಕೇಳಿದಳು.

" ಮಕ್ಕಳಿಲ್ಲಾ ಕಾಣವ್ವ. ಅದೋ ಆಯಮ್ಮನೇ ಅವನ ಹೆಂಡ್ರು "

ಲಚುಮಯ್ಯ ರಾಮಕ್ಕನ ಕಡೆಗೆ ಕೈ ತೋರಿಸಿದ. ಮುನಿಯಮ್ಮ ಎರಡು ಕ್ಷಣ ಅವಳನ್ನೇ ಸಿಟ್ಟೆಸಿ ನೋಡಿದಳು. ಅನಂತರ ಅವಳ ಬಳಿಗೋಡಿ, ರಾಮಕ್ಕನನ್ನು ತಬ್ಬಿಕೊಂಡಳು.

ರಾಮಕ್ಕನಿಗೂ ದುಃಖ ಉಕ್ಕಿ ಬಂದಿತ್ತು. ಸತ್ತ ತನ್ನ ಗಂಡನಿಗಾಗಿ ಮಾತ್ರವಲ್ಲದೆ, ಅಪರಿಚಿತ ಹೆಣ್ಣುಜೀವ ಮುನಿಯಮ್ಮನ ಅಸಹಾಯಕ ಪರಿಸ್ಥಿತಿಗಾಗಿಯೂ ಅವಳು ಕಣ್ಣೀರಿಟ್ಟಳು.

ಆಲಿಂಗನವನ್ನು ಸಡಲಿಸಿ ಮುನಿಯಮ್ಮ ತನ್ನ ಸೆರಗಿನ ತುದಿಯಿಂದ ರಾಮಕ್ಕನ ಕಣ್ಣೀರನ್ನೊರೆಸುತ್ತಾ—

" ಅಳಬ್ಯಾಡ ಸುಬ್ಬಿರಕ್ಕ. ಸಿವನಿಚ್ಛೆ ಇದ್ದಂಗಾಯ್ತು....ನಾವೇನ್ ಮಾಡಾಕಾಯ್ತದೆ – ಮನುಸ್ರು " ಎಂದಳು.

ಪೋಲೀಸಿನವರು ಪಂಚಾಯತಿಯ ಮುಖ್ಯಸ್ಥರಿಗೆ ಹೇಳಿ, ಅಲ್ಲಿಂದ ಹೊರಟರು.

ಲಚುಮಯ್ಯ ಚಿಕ್ಕೇಗೌಡನಿಗೆ ಹೇಳಿ ಬಂದು ಗಾಡಿ ಕಟ್ಟಿಸಿದ.

" ನಾನಿನ್ ಓಯ್ತಾನಿ ಕಣಕ್ಕಾ "

ಎಂದಳು ಮುನಿಯಮ್ಮ. ರಾಮಕ್ಕನಿಗೇಕೋ ಆ ಸರಳ ಹೃದಯ ವನ್ನು ಅಗಲಲು ಮನಸ್ಸಾಗಲಿಲ್ಲ. ಆಕೆ ಮೌನವಾಗಿದ್ದುದನ್ನು ಕಂಡು ಮತ್ತೆ ಮುನಿಯಮ್ಮನೇ ಹೇಳಿದಳು —

" ಓಗ್‌ಬುಟ್ ಬರ್ಲಾ ಅಕ್ಕಾ ನಾನು ? "

" ಒಂಟೋಯ್ತೀಯೇನವ್ವಾ ? "

ರಾಮಕ್ಕ ಅಳುತ್ತಳುತ್ತ ಕೇಳಿದಳು.

" ಅಳ್‌ಬ್ಯಾಡಕ್ಕ. ನಾನ್ ಬದುಕಿದ್ರೆ ಇನ್ನೊಂದ್ ಸಲಿ ಬಂದ್ ನಿನ್ ಮುಖಾ ನೋಡ್ತೀನಿ "

—ಎನ್ನುತ್ತಾ ಮುನಿಯಮ್ಮ ಲಚುಮಯ್ಯನ ಸೂಚನೆಯಂತೆ ಗಾಡಿ ಹತ್ತಿದಳು. ರಾಮಸಂದ್ರದ ' ಅಕ್ಕನ ತೋಪಿ 'ನಿಂದ ಬೆಂಗಳೂರಿನ ಕಡೆಗೆ ಹೊರಟಿತು ಗಾಡಿ. ಲಚುಮಯ್ಯನೂ ಚಿಕ್ಕೇಗೌಡನೂ ಗಾಡಿಯನ್ನು ಹಿಂಬಾಲಿಸಿದರು.

ಮಧ್ಯಾಹ್ನದ ಮೂರುಗಂಟೆಯ ವೇಳೆಗೆ ಗಾಡಿ ಬೆಂಗಳೂರು ತಲಪಿ, ಭದ್ರಯ್ಯನ ಮನೆಯ ಮುಂದೆ ನಿಂತಿತು. ಮುನಿಯಮ್ಮ ಕೆಳಗಿಳಿದು ಮನೆಯನ್ನು ಹೊಕ್ಕಳು. ಅವಳ ಹಿಂದೆ ಲಚುಮಯ್ಯನೂ, ಚಿಕ್ಕೇಗೌಡನೂ ಒಳಗೆ ನಡೆದರು.

ನಾಲ್ಕು ದಿನಗಳಿಂದಲೂ ಅನಾರೋಗ್ಯದಿಂದಾಗಿ ಹಾಸಿಗೆ ಹಿಡಿದಿದ್ದ ಕಿವುಡಿಯಾದ ಭದ್ರಯ್ಯನ ಮುದಿತಾಯಿ—

" ಎತ್ತೋಗಿದ್ಯೇ ವತ್ತಾರಿಂದ – ರಂಕು ಮುಂಡೆ ?"

ಎಂದು ಸಿಡಿಮಿಡಿಗೊಂಡು ಕೇಳಿದಳು. ಮುನಿಯಮ್ಮ ಉತ್ತರಿಸಲಿಲ್ಲ.

" ಅನ್ನ, ನೀರಿಲ್ದೆ ಸಾಯ್ತಾ ಬಿದ್ದಿವ್ನಿ – ಕೇಳೋರು ದಿಕ್ಕಿಲ್ದೆ.... ಮನೇಗ ಗಂಡಸಿಲ್ಲಾಂತ, ನಿನಗೆ ಆಡಿದ್ದೇ ಆಟ ಆಯ್ತೇನೆ ಮಿಲ್ಟೇರಿ ?"

ಮುನಿಯಮ್ಮನಿಗೆ ಅತ್ತೆಯ ಮಾತುಗಳನ್ನು ಸಹಿಸಲಾಗಲಿಲ್ಲ. ಆಕೆ ಸಿಡಿಮಿಡಿಗೊಂಡು, ಅತ್ತೆಯ ಬಳಿಗೆ ಬಂದು—

"ಸುಮ್ನೆ ಬಿದ್ಕೊಹೋಕಾಗಾಕಿಲ್ವಾ? ಸ್ಯಾನೆ ಬಾಯ್ ಮಾಡ್ ಬ್ಯಾಡ"

ಎಂದಳು. ಅಷ್ಟರಲ್ಲಿ ಲಚುಮಯ್ಯ—

"ಯಾಸೆಟ್ಕೋ ಬುಡವ್ವ, ಮುದುಕಿ ಮಾತು ಕಟ್ಕೊಂಡ್ ಏನು?"

ಎಂದ. ಪ್ರಯಾಸದಿಂದ ಹಾಸಿಗೆಯಮೇಲೆ ಎದ್ದು ಕುಳಿತಳು ಮುದುಕಿ. ಚಿಕ್ಕೇಗೌಡನೂ ಲಚುಮಯ್ಯನೂ ಅವಳ ಕಣ್ಣಿಗೆ ಕಾಣಿಸಿದರು. ಬೆಳಗಿನಿಂದ ಮನೆಯಲ್ಲಿರದಿದ್ದ ಸೊಸೆಯ ಮೇಲೆ ಸಂದೇಹಿಸಿದ್ದ ಆಕೆ, ಆ ಇಬ್ಬರು ಅಪರಿಚಿತ ಗಂಡಸರನ್ನು ಕಂಡಾಗ, ತನ್ನ ಊಹೆ ನೂರಕ್ಕೆ ನೂರು ಪಾಲು ನಿಜ ಎಂದುಕೊಂಡಳು.

"ಲೇ ಮುನೀ, ಇದನ್ನೇನ್ ಸೂಳೆಮನೆ ಮಾಡ್‌ಬುಟ್ಟೇನೇ ಗರತೀ? ಯಾರೇ ಈ ಗಂಡಸ್ರೂ – ನಿನ್ ಉಡೀಕ್ಕೊಂಡ್ ಬಂದಿರೋರು?"

ಮುದುಕಿಯ ಮಾತು ಕೇಳಿದಾಗ ಚಿಕ್ಕೇಗೌಡನಿಗೂ – ಲಚುಮಯ್ಯನಿಗೂ ಗಾಬರಿಯಾಯಿತು. ಇಲ್ಲದ ಅಪರಾಧಕ್ಕೆ ಅನ್ಯಾಯವಾಗಿ ಮುನಿಯಮ್ಮ ಗುರಿಯಾಗುತ್ತಿದ್ದಾಳಲ್ಲಾ ಎಂದು ಇಬ್ಬರಿಗೂ ತುಂಬಾ ವ್ಯಥೆಯಾಯಿತು. ಆದರೆ ನಿಜಸಂಗತಿಯನ್ನು ವಿವರಿಸಿ, ಮುದುಕಿಯನ್ನು ಸಮಾಧಾನ ಪಡಿಸುವುದು ಹೇಗೆ?

ದೃಢ ಮನಸ್ಸಿನಿಂದ ಲಚುಮಯ್ಯನೇ ಆ ಕೆಲಸಕ್ಕೆ ಮುಂದಾದ.

"ಅವ್ವಾ, ನಮ್ಮದು ರಾಮಸಂದ್ರ"

"ಆ .... ಏನಂದೆ?"

—ಎಂದು ಕೇಳಿದಳು ಮುದುಕಿ.

"ಅವಳು ಕಿವುಡಿ. ಕಿವಿ ಕೇಳ್ಸಾಕಿಲ್ಲ. ಒಸಿ ಜೋರಾಗಿ ಹೇಳಿದ್ರೇನೇ.."

—ಎಂದಳು ಮುನಿಯಮ್ಮ. ಲಚುಮಯ್ಯ ಗಟ್ಟಿಯಾಗಿ ಮಾತನಾಡಲುಪಕ್ರಮಿಸಿದ. ತಾನು ರಾಮಸಂದ್ರದವನೆಂದೂ, ಭದ್ರಯ್ಯನ ಸ್ನೇಹಿತನಾದ ನಿಂಗಣ್ಣ ಆ ದಿನ ತೀರಿಕೊಂಡನೆಂದೂ ಮಾತು ಆರಂಭಿಸಿದ. ಅನಂತರ ಮುನಿಯಮ್ಮನ ವಿಷಯವನ್ನೂ, ನಿಂಗಣ್ಣನ 'ವಶೀಕರಣ'ದ ಮಹತ್ವವನ್ನೂ ವಿವರಿಸಿದ. ಈ ಪ್ರಸಂಗದಲ್ಲಿ ಮುನಿಯಮ್ಮನದೇನೂ ತಪ್ಪಿಲ್ಲ

ವೆಂಬುದನ್ನು ಮುದುಕಿಗೆ ಮನದಟ್ಟು ಮಾಡಿದ. ಆದರೂ ಆ ಅತ್ತೆ ಅದನ್ನು ನಂಬಲಿಲ್ಲ.

"ಗಂಡಸು ಮನೇಲಿಲ್ದಿದ್ರೆ ಏನೇನ್ ಮಾಡ್ತಾರಪ್ಪಾ ಈ ಎಂಗುಸ್ರು !"

—ಎಂದಳು ಮುದುಕಿ. ಸೊಸೆಯ ಮೇಲಿನ ಸಂದೇಹ ಇನ್ನೂ ನಿವೃತ್ತಿಯಾಗಿಲ್ಲವೆಂಬುದು ಅವಳ ಮಾತಿನಿಂದಲೇ ವ್ಯಕ್ತವಾಗುತ್ತಿತ್ತು.

ಆದರೆ ಮುನಿಯಮ್ಮ ತನ್ನ ಅತ್ತೆಯ ಮಾತಿಗೆ ಸೊಪ್ಪುಹಾಕದೆ, ಒಲೆ ಹೊತ್ತಿಸಿ ಬೇಗ ಬೇಗನೆ ಅಡಿಗೆ ಮಾಡಿದಳು. ಬೇಡವೆಂದರೂ ಬಲವಂತ ಮಾಡಿ, ಚಿಕ್ಕೇಗೌಡನಿಗೂ ಲಚುಮಯ್ಯನಿಗೂ ಊಟ ಮಾಡಿಸಿದಳು. ಅನಂತರ ಎಲೆ - ಅಡಿಕೆ ತಂದುಕೊಟ್ಟು—

"ಯಜಮಾನ್ರು ಬಂದಮೇಕ್ಕೆ, ನೀವು ಒಂದ್‌ಸಲಿ ಇತ್ತಾಗೆ ಬನ್ರಣ್ಣ"

—ಎಂದು ಹೇಳಿ ಅವರಿಬ್ಬರನ್ನೂ ಕಳುಹಿಸಿ ಕೊಟ್ಟಳು. ಅವಳ ಮಾತಿನ ಹಿಂದೆ ಅವರ ಸಹಾಯವನ್ನು ಕೋರುವ ಆಸೆ ಅಡಗಿತ್ತು. ಆ ದಿನ ನಡೆದ ಸಂಗತಿಯನ್ನೆಲ್ಲಾ ಅವರೇ ಭದ್ರಯ್ಯನಿಗೆ ಹೇಳಿದರೆ, ಆತ ತನ್ನ ಮೇಲೆ ಯಾವ ಸಂದೇಹವನ್ನೂ ಇಟ್ಟುಕೊಳ್ಳದೆ, ಮೊದಲಿನಂತೆಯೇ ವರ್ತಿಸುತ್ತಾನೆಂಬುದು ಅವಳ ನಂಬಿಕೆ.

ಆದರೆ ಆ ನಂಬಿಕೆ ಸುಳ್ಳಾಯಿತು........

ಮೂರು ತಿಂಗಳ ಸೆರೆಮನೆ ವಾಸವನ್ನು ಅನುಭವಿಸಿ ಹಿಂತಿರುಗಿದ ಭದ್ರಯ್ಯನಿಗೆ, ಅವನ ತಾಯಿ ಸೊಸೆಯ ವಿಷಯವಾಗಿ ಇಲ್ಲದ ಸಂಗತಿಗಳನ್ನೆಲ್ಲಾ ಹೇಳಿ ·ದೂರು ಕೊಟ್ಟಳು. ಮುನಿಯಮ್ಮ ನಿಜವಾಗಿಯೂ ಹದಿನಾರಾಣೆ ಹಾದರಗಿತ್ತಿ ಎಂದು ಆಕೆ ಹೇಳಿದಾಗ ಭದ್ರಯ್ಯನ ಮನಸ್ಸು ಪಿಡಿಮಿಡಿಗೊಂಡಿತು. ಆ ಕ್ಷಣದಲ್ಲಿ ಹೆಂಡತಿಯ ಕತ್ತು ಹಿಸುಕಿ ಹಾಳು ಬಾವಿಯಲ್ಲಿ ಹಾಕಿ ಬಿಡಬೇಕೆಂಬಷ್ಟು ರೋಷದಿಂದ 'ಕಟಕಟ'ನೆ ಹಲ್ಲು ಕಡಿದ ಭದ್ರಯ್ಯ. ಆದರೆ ಸೆರೆಮನೆಯ ವಾಸದಿಂದ ಜಿಗುಪ್ಸೆಗೊಂಡಿದ್ದ ಅವನ ಮನಸ್ಸು ಆ ಹೊಲೆ ಗೆಲಸಕ್ಕೆ ಮುನ್ನುಗ್ಗಲು ಹಿಂಜರಿಯಿತು.

ಆ ರಾತ್ರಿ ಮಲಗಿದ್ದ ಭದ್ರಯ್ಯನ ಕಾಲಡಿಯಲ್ಲಿ ಕುಳಿತು ಮುನಿಯಮ್ಮ ನಿಜ ಸಂಗತಿಯನ್ನು ವಿವರಿಸಿ ಹೇಳಿದಳು. ತನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ, ರಾಮಸಂದ್ರದ ಜನರನ್ನೇ ಕೇಳಿ ತಿಳಿದುಕೊಳ್ಳಬಹುದೆಂದು ಆಕೆ ಹೇಳಿದಾಗ ಭದ್ರಯ್ಯನ ಮನಸ್ಸು ಉಯ್ಯಾಲೆಯಾಡಿತು.

ಅವನ ಮನಸ್ಸಿನ ಮೇಲೆ ಹಲವಾರು ಯೋಚನೆಗಳು ಧಾಳಿ ನಡೆಸಿದ್ದವು........

ಮುನಿಯಮ್ಮ ತನ್ನ ತಾಯಿಯ ದೃಷ್ಟಿಯಲ್ಲಿ 'ಹದಿನಾರಾಣೆ ಹಾದರ ಗಿತ್ತಿ.' ಅಂತಹವಳೊಡನೆ ಇನ್ನು ಮುಂದೆಯೂ ಸಂಸಾರ ಮಾಡಿ ಕೊಂಡಿರುವುದೇ ಅಥವಾ ತಾಯಿಯ ಮಾತಿನಂತೆ ಅವಳನ್ನು ಬಿಟ್ಟುಬಿಡು ವುದೇ ?

ಈಗಾಗಲೇ ಈ ಸುದ್ದಿ ತನ್ನ ಬಂಧುವರ್ಗದವರಿಗೂ, ಕುಲಸ್ಥರಿಗೂ ತಿಳಿದುಹೋಗಿದೆ. ಅವರೆಲ್ಲಾ ತನ್ನ ಬಗ್ಗೆ ಅಸಮಾಧಾನಗೊಂಡಿದ್ದಾರೆ. ನನ್ನನ್ನು ಜಾತಿಯಿಂದ ಹೊರಗೆಹಾಕುತ್ತಾರೆಂಬ ವದಂತಿಯೂ ಹುಟ್ಟಿದೆ.

ತನಗೆ ತಿಳಿದಂತೆ ಮುನಿಯಮ್ಮ ಒಳ್ಳೆಯ ಹೆಣ್ಣು. ಆಕೆಯ ಮನಸ್ಸು ದೊಡ್ಡದು; ಗುಣ ಒಳ್ಳೆಯದು. ಹೇಳಿಕೆಯ ಮಾತಿಗೆ ಕಿವಿಗೊಟ್ಟು ಅವಳನ್ನು ಬಿಡುವುದು ಸರಿಯಲ್ಲ.

ಆದರೆ ಕಟ್ಟಿಕೊಳ್ಳಲು ತಾಯಿ, ಬಂಧುಗಳು, ಕುಲಸ್ಥರು, ಜಾತಿ ಎಲ್ಲರೂ ವಿರೋಧವಾಗಿದ್ದಾರೆ.

ಮುನಿಯಮ್ಮನ ಸಮಸ್ಯೆ ಭದ್ರಯ್ಯನಿಗೆ ಬಗೆಹರಿಯಲಿಲ್ಲ.

ನಿಂಗಣ್ಣನ ನೆನಪಾದಾಗ, ಅವನ ವಿಷಯವಾಗಿ ಭದ್ರಯ್ಯ ಏನೊಂದೂ ಯೋಚಿಸಲಾರದಾದ.

ಅವನು ತನ್ನ ಹೆಂಡತಿಯ ಮೇಲೆ ಕಣ್ಣಿಟ್ಟ ವಂಚಕ—ಶತ್ರು; ಆದರೆ 'ಭೂತವಿದ್ಯೆ' ಹೇಳಿಕೊಟ್ಟ ನೆಚ್ಚಿನ ಮಿತ್ರ — ಗುರು,

ನಿಂಗಣ್ಣ ತನಗೆ ಶತ್ರುವೂ ಹೌದು; ಮಿತ್ರನೂ ಹೌದು.

ಶತ್ರುತ್ವದ ನೆನಪುಳಿಯಲು ಮುನಿಯಮ್ಮ ಕಣ್ಣೆದುರಿಗೇ ಇದ್ದಾಳೆ. ಆದರೆ ಮಿತ್ರತ್ವದ ಜ್ಞಾಪಕಕ್ಕೆ 'ಭೂತವಿದ್ಯೆ' ಇನ್ನೂ ತನ್ನ ಕರಗತವಾಗಿಲ್ಲ.

ಭೂತವಿದ್ಯೆ........

ಒಂದು ಸಾರಿ ಕಲಿಯಲು ಹೋಗಿ ಮೂರು ತಿಂಗಳ ಸೆರೆಮನೆವಾಸ ಲಾಭವಾಯಿತು.

ಅಷ್ಟಕ್ಕೇ ಅದನ್ನು ಬಿಟ್ಟುಬಿಡುವುದೇ ?

ಅದನ್ನು ಬಿಡುವ ಬದಲು ತನ್ನ ಜೀವವನ್ನೇ ಬಿಡುವುದು ಮೇಲು !

ಆದರೆ ಅದನ್ನು ಸಾಧಿಸುವುದು ಹೇಗೆ ?

ಹೆಣ ಬೇಕು — ಆಗತಾನೆ ಸತ್ತ ಹೆಣ! ಅದು ಸಿಕ್ಕುವವರೆಗೂ ಸಾಧನೆ ಮಾಡಲಾಗದು ; ಸಾಧನೆ ಇಲ್ಲದೆ ಸಿದ್ಧಿ ಇಲ್ಲ.

ಆದರೆ ಹೆಣ ಸಿಕ್ಕುವುದೇ ಕಷ್ಟವಾಗಿದೆ! ಸುಡುಗಾಡಿನಲ್ಲಿ ಸಿಕ್ಕುವ ಅವರಿವರ ಹೆಣಗಳ ಮೇಲೆ ಪ್ರಯೋಗ ಮಾಡಲು ತನಗೆ ಅಧಿಕಾರವಿಲ್ಲ. ಹಾಗೆ ಮಾಡಲು ಪ್ರಯತ್ನಿಸಿದರೆ ಸೆರೆಮನೆವಾಸ ಕಟ್ಟಿಟ್ಟ ಬುತ್ತಿ !

ಪರಿಸ್ಥಿತಿ ಹೀಗಿರುವಾಗ ಹೆಣ ಸಿಕ್ಕುವುದು ಸುಲಭವೇ ?

ತನ್ನ ತಾಯಿಯೋ ಅಥವಾ ತನ್ನ ಹೆಂಡತಿಯೋ ಸಾಯಬೇಕು. ಆಗಮಾತ್ರ ನನ್ನದೆಂಬ ಒಂದು ಹೆಣ ಸಿಗುತ್ತದೆ. ಅದರ ಮೇಲೆ ಪ್ರಯೋಗ ಮಾಡಿದರೆ ಯಾರೂ ಅಡ್ಡಿ ಬರಲಾರರು ; ಸೆರೆಮನೆಯ ಭಯವೂ ಇಲ್ಲ.

ಆದರೆ ತನ್ನ ಆತುರಕ್ಕೆ ತಾಯಿ ಸಾಯುತ್ತಾಳೆಯೋ ? ಅಥವಾ ಇನ್ನೂ ವಯಸ್ಸಾಗದ ಹೆಂಡತಿ ಸಾಯುತ್ತಾಳೆಯೆ ?

ತಾಯಿ........

ತನ್ನನ್ನು ಹೆತ್ತಾಕೆ. ಅವಳ ಬಸಿರಿಂದ ಬಂದು ಅವಳನ್ನೇ ಕೊಲ್ಲುವುದೇ?

ಹೆಂಡತಿ........

ಮದುವೆಯಾದಮೇಲೆಯೇ ತನಗೂ-ಅವಳಿಗೂ ಸಂಬಂಧ ಬೆಳೆದದು. ಅದಕ್ಕೆ ಮೊದಲು ಅವಳು ಯಾರೋ — ತಾನು ಯಾರೋ ! ಅಲ್ಲದೆ ಈಗ ಆಕೆಗೆ ' ಹದಿನಾರಾಣೆ ಹಾದರಗಿತ್ತಿ 'ಯ ಪಟ್ಟ ದೊರೆತಿದೆ. ಅದರಿಂದ ತನ್ನ ಹಾಗೂ ತನ್ನ ಮನೆಯ ಗೌರವ ನಾಶವಾಗಿದೆ.

ಒಂದು ಕಾಲದಲ್ಲಿ ಒಲಿದು ಬಂದ ನಾರಿ ಈಗ ಮಲಿತ ಮಾರಿಯಾಗಿದ್ದಾಳೆ. ಅವಳು ಇರುವುದಕ್ಕೆ ಬದಲು ಸಾಯುವುದೇ ಸರಿ. ಅವಳು ಸತ್ತರೆ ತನ್ನ ತಾಯಿ ಸಂತೋಷಪಡುತ್ತಾಳೆ. ಬಂಧುಗಳೂ ಕುಲಸ್ಥರೂ ಸಮಾಧಾನ ಪಡುತ್ತಾರೆ. ಜಾತಿ ಉಳಿಯುತ್ತದೆ. ತನಗೊಂದು ' ಹೆಣ ' ಸಿಕ್ಕಿದಂತಾಗುತ್ತದೆ. ಅದರಿಂದ ' ಭೂತವಿದ್ಯೆ ' ಕರಗತವಾಗುತ್ತದೆ !

ಆಹ್ ! ಎಷ್ಟೊಂದು ಉಪಯೋಗ ಅವಳ ಸಾವಿನಿಂದ ! !

ಆದರೆ ಅವಳು ಸಾಯುವುದು ಹೇಗೆ ?

ತಾನೇ ಸಾಯಿಸಿಬಿಡಲೇ ? ಅಥವಾ ಅವಳಾಗಿ ಅವಳೇ ಸಾಯುವಂತೆ ಮಾಡಲೆ ?

ಭದ್ರಯ್ಯನ ಯೋಚನೆ ಕೊನೆಮುಟ್ಟಲಿಲ್ಲ.

ಮನೆಯಲ್ಲಿ ಒಬ್ಬರಿಗೊಬ್ಬರಿಗೆ ಮಾತಿಲ್ಲದೆ ಮೂರು ದಿನ ಕಳೆಯಿತು.

ಆ ನಾಲ್ಕನೆಯ ದಿನ........

ಅದು ಮುನಿಯಮ್ಮನ ದುರ್ದಿನ.

ಆ ದಿನ ಭದ್ರಯ್ಯನನ್ನು ಹುಡುಕಿಕೊಂಡು ಯಾರೋ ಅಪರಿಚಿತ ನೊಬ್ಬನು ಮನೆಗೆ ಬಂದನು. ಸೆರೆ ಮನೆಯಲ್ಲಿ ಅವನಿಗೆ ಭದ್ರಯ್ಯನ ಪರಿಚಯ ವಾಗಿತ್ತಂತೆ. ಆ ಪರಿಚಯ ಪರಸ್ಪರ ಗಾಢ ಸ್ನೇಹವನ್ನು ಬೆಸೆದಿತ್ತೆಂದೂ ಆತನೇ ಹೇಳಿದ.

ಭದ್ರಯ್ಯ ಮನೆಯಲ್ಲಿರಲಿಲ್ಲವಾದ್ದರಿಂದ ಮುನಿಯಮ್ಮ ಆ ಅಪರಿ ಚಿತನಿಗೆ ಸ್ವಲ್ಪ ಹೊತ್ತು ಕುಳಿತು ಕಾಯಲು ಹೇಳಿದಳು. ಆತ ಅವಳ ಮಾತಿನಂತೆ ಅಂಗಳದಲ್ಲಿ ಹಾಸಿದ್ದ ಚಾಪೆಯ ಮೇಲೆ ಕುಳಿತುಕೊಂಡ. ಕಿವುಡಿಯಾದ ಭದ್ರಯ್ಯನ ತಾಯಿ ಇದನ್ನೆಲ್ಲಿ ನೋಡಿದಳು. ಅವಳಿಗೆ ಅಪರಿಚಿತನ ವಿಷಯವೇನೂ ತಿಳಿದಿರಲಿಲ್ಲ.

ಮೊದಲೇ ಸೊಸೆಯನ್ನು ಶಂಕಿಸುತ್ತಿದ್ದ ಆಕೆ, ಅಪರಿಚಿತನೊಬ್ಬನನ್ನು ತನ್ನ ಮನೆಯಲ್ಲಿ ಕಂಡಾಗ, ಇಲ್ಲದ ಅರ್ಥ ಕಲ್ಪಿಸಿಕೊಳ್ಳಲು ಅನುಕೂಲ ವಾಯಿತು. ವಿಷಯವರಿಯದ ಆಕೆಗೆ, ತನ್ನ ಸೊಸೆ 'ಹದಿನಾರಾಣೆ ಹಾದರಗಿತ್ತಿ' ಎಂಬುದರಲ್ಲಿ ಸಂದೇಹ ಉಳಿಯಲಿಲ್ಲ. ಆಕೆ ಅವಾಚ್ಯ ಶಬ್ದಗಳನ್ನು ಗೊಣಗುತ್ತಾ ಅಡಿಗೆಯ ಕೋಣೆಯಲ್ಲಿ ಕುಳಿತಳು.

ಎಷ್ಟು ಹೊತ್ತಾದರೂ ಭದ್ರಯ್ಯ ಬರಲಿಲ್ಲ. ಕಾದು ಕುಳಿತಿದ್ದ ಅಪರಿಚಿತನಿಗೆ ತುಂಬಾ ಬೇಸರವಾಯಿತು. ತಾನು ಅದೇ ದಿನ ತನ್ನ ಸ್ವಂತ ಊರಿಗೆ ಹೋಗುವುದಾಗಿಯೂ, ಇನ್ನಾವಾಗಲಾದರೂ ಒಮ್ಮೆ ಬೆಂಗಳೂರಿಗೆ ಬಂದಾಗ ಭದ್ರಯ್ಯನನ್ನು ಕಾಣುವುದಾಗಿಯೂ ಹೇಳಿ, ಆತ ಅಲ್ಲಿಂದ ಹೊರಟುಬಿಟ್ಟ.

ಎರಡುಕ್ಷಣ ಬಾಗಿಲಿನಲ್ಲಿಯೇ ನಿಂತಿದ್ದಳು ಮುನಿಯಮ್ಮ. 'ಯಾರು ಬಂದಿದ್ದರು ಅಂತ ಹೇಳಲಿ?' ಎಂದು ಆ ಅಪರಿಚಿತನನ್ನು ಕೇಳಿ ಅವನ ಹೆಸರನ್ನು ತಿಳಿಯಬೇಕೆಂದಿದ್ದಳು. ಆದರೆ ಹಾಗೆ ಕೇಳುವದನ್ನೇ ಮರೆತಿದ್ದಳು! ಅವನು ಹೊರಟುಹೋದನಂತರ ಮತ್ತೆ ಆ ಸಂಗತಿ ನೆನಪಾಗಿತ್ತು. ಎಂತಲೇ ಆಕೆ ಬಾಗಿಲಿನ ಬಳಿ ನಿಂತು ಎರಡುಕ್ಷಣ ಯೋಚಿ ಸಿದಳು. ಅಷ್ಟರಲ್ಲಿ ತನ್ನ ಅತ್ತೆ ಸಿಟ್ಟಿನಿಂದ ಕೂಗಿದುದರಿಂದ ಒಳಗೆ ಹೋಗ

ಬೇಕಾಯಿತು.

ಭದ್ರಯ್ಯ ಮನೆಗೆ ಹಿಂತಿರುಗಿದಾಗ ಸಂಜೆಯಾಗಿತ್ತು. ಆಗತಾನೆ ಸೂರ್ಯನು ಮುಳುಗಿ, ಕತ್ತಲೆ ಮೆಲ್ಲನೆ ಅಡಿಯಿಡುತ್ತಿತ್ತು. ಮುನಿಯಮ್ಮ ಇನ್ನೂ ದೀಪ ಹಚ್ಚಿರಲಿಲ್ಲ. ಆಕೆ, ತನ್ನ ಅತ್ತೆ ಆಡಿದ ಕೆಟ್ಟ ಮಾತುಗಳಿಗೆ ನೊಂದು, ಏನೋ ಕಾರಣವಾಗಿ ಮಾಡಿದ ಭರ್ತ್ಸನೆಯನ್ನು ಸಹಿಸಲಾರದೆ, ಕತ್ತಲೆ ತುಂಬಿದ ಮೂಲೆಯಲ್ಲಿ ಮೊಣಕಾಲಿನ ಮೇಲೆ ತಲೆಯಿಟ್ಟು ರೋದಿಸುತ್ತಿದ್ದಳು.

ಭದ್ರಯ್ಯ ಮನೆಯೊಳಗೆ ಬಂದೊಡನೆ, ಆ ಕತ್ತಲೆಯಲ್ಲಿ ಮುನಿಯಮ್ಮ ಅವನ ಕಣ್ಣಿಗೆ ಕಾಣಿಸಲಿಲ್ಲ. ಅವನು ನೇರವಾಗಿ ಅಡಿಗೆ ಮನೆಗೆ ಹೋಗಿ, ಒಲೆಯ ಮುಂದೆ ಕುಳಿತಿದ್ದ ತನ್ನ ತಾಯಿಯನ್ನು—

" ಮುನಿ ಎತ್ತ್ಹೋದ್ಲವ್ವ ?"

ಎಂದು ಕೇಳಿದ. ಸೊಸೆಯ ಮೇಲೆ ಕ್ರೋಧಕೊಂಡಿದ್ದ ಅತ್ತೆ, ಆ ಅವಕಾಶವನ್ನು ಉಪಯೋಗಿಸಿಕೊಳ್ಳದೆ ಬಿಡಲಿಲ್ಲ.

" ಎತ್ತ್ಹೋದ್ಲೋ ಹಾದರಗಿತ್ತಿ–ಅವಳ್ಕ ಏಳೋರ್ಯಾರು, ಕೇಳೋರ್ಯಾರು. ನೀನ್ ಮನೇಗ ಇಲ್ದಿದ್ರೆ ಅವಳೂ ಇರೋಕಿಲ್ಲಾ ಕಾಣ್ ಮಗಾ....ಹತ್ತು ಮನೆ ಚೀಲಿ ಆಗ್ಬುಟ್ಟವ್ಳೆ ಚಿನಾಲಿ...."

ತಾಯಿಯ ಮಾತು ಕೇಳಿದ ಭದ್ರಯ್ಯ ಮೌನವಾಗಿಯೇ ಇದ್ದ. ಆಕೆ ಅವನ ಬಳಿಗೆ ಬಂದು ಮುಂದುವರಿಸಿದಳು—

" ಇದೇನ್ ಸೂಳೆಮನೆ ಕೆಟ್ಹೋಯ್ತಾ ಭದ್ರಾ. ಯಾರ್ಯಾರೋ ಉಡೀಕೊಂಡು ಬತ್ತಾರೆ ಕಾಣ್ಲಾ ಅವಳ್ನ. ಇವತ್ತು ಯಾವನೋ ಬಂದು, ಅದೋ–ಆ ಪಡಸಾಲೇಲೀ ಗಂಟೇ ಟೇಮು ಕುಂತಿದ್ದ—ಅವಳೊಂದಿಗೇ ಮಾತಾಡ್ತಾ. ನಾನಿಲ್ಲೇ ಕುಂತಿದ್ದೆ....ಇಬ್ಬರೂ ಏನ್ ಮಾಡ್ಕಂಡ್ರೋ ಏನೋ—ನಾ ಕಾಣ್‌ನಪ್ಪ...."

ತಾಯಿಯ ಬಾಯಿಂದಲೇ ಇಂತಹ ಮಾತುಗಳನ್ನು ಕೇಳುತ್ತಿದ್ದ ಭದ್ರಯ್ಯನಿಗೆ ಕೋಪವೇರಿತು. ಬೆಳಗಿನಿಂದಲೂ ಊಟವಿಲ್ಲದೆ ಹಸಿದು ಮನೆಗೆ ಬಂದ ಈ ಹೊತ್ತಿನಲ್ಲಿ, ಅಹಿತವಾದ, ಆತ್ಮಗೌರವಕ್ಕೇ ಧಕ್ಕೆ ತರುವಂತಹ, ಅವಮಾನಕರ ಸುದ್ದಿ ಕಿವಿಗೆ ಮುಟ್ಟಿದೆ. ಸ್ವತಃ ತನ್ನ ತಾಯಿಯೇ ಹೇಳಿದ ಮಾತುಗಳನ್ನು ನಂಬದಿರುವುದಕ್ಕಾಗುತ್ತದೆಯೇ ? ನಂಬಿಯೂ

ಸಹಿಸಬಹುದೆ? ಛೆ, ಇಂತಹ ಹೆಂಡತಿ ಇದ್ದರೇನು—ಸತ್ತರೇನು?

ಕ್ಷಣಮಾತ್ರದಲ್ಲಿ ಭದ್ರಯ್ಯನ ಯೋಚನೆ ಗುರಿಯತ್ತ ಹಾರಿದಾಗ, ಮೂಲೆಯಲ್ಲಿ ರೋದಿಸುತ್ತಿದ್ದ ಮುನಿಯಮ್ಮ ಮೆಲ್ಲನೆದ್ದು, ದೀಪ ಹಚ್ಚಲೆಂದು ಬೆಂಕಿಯ ಪೊಟ್ಟಣಕ್ಕಾಗಿ ಹುಡುಕಾಡಿದಳು. ಅಂಗಳದಲ್ಲಿ ಹೆಜ್ಜೆಯ ಸದ್ದಾದುದನ್ನು ಕೇಳಿ ಭದ್ರಯ್ಯ ಅಡಿಗೆ ಮನೆಯಿಂದ ಹೊರಬಂದ. ಮುನಿಯಮ್ಮ ಕಾಣಿಸಿಕೊಂಡಳು. ಕೂಡಲೇ ಭದ್ರಯ್ಯ ಅವಳತ್ತ ಧಾವಿಸಿದ. ಅವಳ ಮುಂದಲೆಯನ್ನು ತನ್ನ ಮುಷ್ಟಿಯಲ್ಲಿ ಬಲವಾಗಿ ಹಿಡಿದು, ಉಸಿರು ಕಟ್ಟುವಂತೆ ಬೆನ್ನಿನ ಮೇಲೆ ಗುದ್ದಿದ. ತಾನೂ ಸಹ ಒಂದು ಮಾತೂ ಆಡದೆ, ಅವಳು ಮಾತನಾಡಲೂ ಅವಕಾಶ ಕೊಡದೆ ಒಂದೇ ಸಮನೆ ಹೊಡೆದು ಚಚ್ಚಿದ. ಹೊಡೆತವನ್ನು ಸಹಿಸಲಾರದೆ, ನೋವನ್ನು ತಾಳಲಾರದೆ ಮುನಿಯಮ್ಮ ಕೆಳಗುರುಳಿದಳು. ಅಷ್ಟಕ್ಕೇ ಬಿಡದೆ, ಭದ್ರಯ್ಯ ಅವಳನ್ನು 'ದರದರ'ನೆ ಎಳೆದುಕೊಂಡು ಹೋಗಿ ಅಂಗಳದ ಬದಿಗಿದ್ದ ಸಣ್ಣ ಕೋಣೆಗೆ ನೂಕಿದ. ಅನಂತರ ಬಾಗಿಲನ್ನು ಮುಂದೆಳೆದುಕೊಂಡು, ಚಿಲಕವಿಟ್ಟು ಬೀಗವನ್ನು ತಗುಲಿಸಿದ.

ಆ ದೃಶ್ಯವನ್ನು ಕಂಡು ಸಮಾಧಾನಗೊಂಡ ಭದ್ರಯ್ಯನ ತಾಯಿ, ತನ್ನ ಮಗನ ಶೌರ್ಯವನ್ನು ಮೆಚ್ಚಿ ಸಂತೋಷಪಟ್ಟುಕೊಂಡಳು.

ಆ ರಾತ್ರಿ ಮುನಿಯಮ್ಮನಿಗೆ ಅನ್ನವನ್ನಾಗಲಿ, ನೀರನ್ನಾಗಲಿ ಕೊಡಲಿಲ್ಲ.

ಮರುದಿನವೂ ಯಾರೂ ಅವಳನ್ನು ವಿಚಾರಿಸಲಿಲ್ಲ. ಮುನಿಯಮ್ಮನೂ ಕೇಳಲಿಲ್ಲ.

ಮೂರನೆಯ ದಿನ ಭದ್ರಯ್ಯನ ಮನಸ್ಸು ಮೆತ್ತಗಾಗಿತ್ತು.

"ಅವ್ವಾ, ಅವಳಿಗೊಂದಿಷ್ಟ್ ಹಿಟ್ ಹಾಕವ್ವಾ ಇವತ್ತು"

ಎಂದು ತಾಯಿಗೆ ಹೇಳಿದಾಗ, ಆಕೆ ತಿರಸ್ಕಾರದಿಂದ ಮಗನ ಮುಖ ನೋಡಿದಳು.

"ಅವ್ವಾ, ಇಂಗೇ ಬುಟ್‌ಬುಟ್ರೆ ಅವಳು ಸತ್ತೋಯ್ತಾಳೆ ಕಾಣವ್ವ"

ಸದ್ಯ, ಮಗನು ಈಗ ಅಂದಹಾಗೆ, ಅವಳು ಸತ್ತರೆ ಸಾಕು ಎಂಬುದು ಅವನ ತಾಯಿಯ ಆಸೆ. ಭದ್ರಯ್ಯನಿಗೂ ಆ ಆಸೆ ಇದ್ದಿತು. ಆದರೆ ಅದನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲು ಅವನ ಮನಸ್ಸು ಹಿಂಜರಿಯುತ್ತಿತ್ತು. ಎಷ್ಟೇ

ಪ್ರತಿಭಟನೆ ಇದ್ದರೂ ಮಾನವೀಯತೆ ತನ್ನ ಕರ್ತವ್ಯದಂತೆ ಅವನನ್ನು ಎಚ್ಚರಿಸುತ್ತಲೇ ಇತ್ತು.

ಭದ್ರಯ್ಯ ಬೀಗವನ್ನು ತೆಗೆದು, ಬಾಗಿಲು ತೆರೆದ. ಮುನಿಯಮ್ಮ ಪ್ರಜ್ಞೆ ಇಲ್ಲದೆ ನೆಲದ ಮೇಲೆ ಬಿದ್ದಿದ್ದಳು. ಅವಳ ಸ್ಥಿತಿಯನ್ನು ಕಂಡು ಅವನ ಹೃದಯ ವಿಹ್ವಲವಾಯಿತು. ಹಾಗೆಯೇ ಬಿಟ್ಟರೆ ಅವಳು ಸಾಯುವುದು ಖಂಡಿತವೆಂಬುದು ಅವನಿಗೆ ಹೊಳೆಯದಿರಲಿಲ್ಲ. ಆದರೆ ನೆರೆಹೊರೆಯವರು 'ಹೆಂಡತಿಯನ್ನು ಹೊಡೆದು ಕೊಂದ'ನೆಂದು ಆಡಿಕೊಂಡು, ಪೋಲೀಸರಿಗೆ ತಿಳಿಸಿದರೆ ತನ್ನ ಗತಿಯೇನು ? ಕೊಲೆಗಾರನೆಂದು ಜೀವಾವಧಿ ಶಿಕ್ಷೆ ವಿಧಿಸಿದ ಮೇಲೆ ಆಜೀವ ಪರ್ಯಂತ ಸೆರೆಮನೆಯಲ್ಲಿ ಕೊಳೆಯಬೇಕೆ ತಾನು ?

ಛೆ, ಇಂತಹ ಅಪವಾದ ಬರದ ಹಾಗೆ ಈಗಲೇ ಎಚ್ಚರಿಕೆ ವಹಿಸಬೇಕು.

ಮುನಿಯಮ್ಮ ಸತ್ತರೆ ಸಾಯಲಿ, ಆದರೆ ತನಗೆ ಅಪವಾದ ಬರಬಾರದು.

ಕೂಡಲೇ ಅಂಗಳದಲ್ಲಿ ಗೋಡೆಯ ಬದಿಗೆ ಹಾಸಿಗೆ ಹಾಸಿದ. ಪ್ರಜ್ಞೆಯಿಲ್ಲದ ಮುನಿಯಮ್ಮನನ್ನು ಎತ್ತಿಕೊಂಡು ಬಂದು ಅದರ ಮೇಲೆ ಮಲಗಿಸಿದ. ಉಸಿರಾಡುತ್ತಿತ್ತು ; ಅವಳಿನ್ನೂ ಸತ್ತಿರಲಿಲ್ಲ.

ಭದ್ರಯ್ಯ ಸೀಸೆಯೊಡನೆ ಆಸ್ಪತ್ರೆ ಸೇರಿದ. ತನ್ನ ಹೆಂಡತಿಗೆ ಯಾವುದೋ ಕಾಯಿಲೆಯೆಂದು ಹೇಳಿ ಔಷಧಿ ಪಡೆದುಕೊಂಡು ಮನೆಗೆ ಹಿಂತಿರುಗಿದ ನಂತರ, ಔಷಧಿ ಸೀಸೆಯನ್ನು ಅವಳ ಹಾಸಿಗೆಯ ಬಳಿ ಅಲಂಕಾರವಾಗಿ ಇಟ್ಟ. ಅದನ್ನು ಕುಡಿಯಲು ಮಾತ್ರ ಮುನಿಯಮ್ಮನಿಗೆ ಕೊಡಲಿಲ್ಲ.

ಮನೆಗೆ ಬಂದು ಹೋಗುವ ನೆರೆಹೊರೆಯ ಹೆಂಗಸರು ಮುನಿಯಮ್ಮನ ಕಾಯಿಲೆಯ ವಿಷಯವಾಗಿ ಅವಳ ಅತ್ತೆಯನ್ನು ವಿಚಾರಿಸಿದರು. ಆಕೆ ಇಲ್ಲದ ಕಥೆ ಕಟ್ಟಿ, ತನ್ನ ಮಗ ಹೆಂಡತಿಗಾಗಿ ನಿತ್ಯವೂ ಔಷಧಿ ತಂದು ಕೊಡುವುದನ್ನು ಬಣ್ಣಿಸಿ, ಅವರನ್ನು ಸಮಾಧಾನಪಡಿಸಿದಳು.

ಭದ್ರಯ್ಯ ಸೀಸೆಯಲ್ಲಿರುತ್ತಿದ್ದ ಔಷಧಿಯನ್ನೆಲ್ಲಾ ಹೊರಗೆ ಚೆಲ್ಲಿ, ಅದನ್ನು ಚೆನ್ನಾಗಿ ತೊಳೆದುಕೊಂಡು, ಪ್ರತಿದಿನವೂ ಆಸ್ಪತ್ರೆಗೆ ಹೋಗಿ ಬರುತ್ತಿದ್ದ. ಈ ಸೋಗು ಹಾಕುವ ಶ್ರಮವೂ ಅವನಿಗೆ ಬಹುಬೇಗ ತಪ್ಪಿತು.

ಅಂಗಳದಲ್ಲಿ ಮಲಗಿದ್ದ ದಿನವೇ ಆಕೆಗೆ ಅಲ್ಪಸ್ವಲ್ಪ ಪ್ರಜ್ಞೆ ಬಂದಿದ್ದಿತು. ಆದರೆ ಮೂರು ದಿನಗಳಿಂದ ಅನ್ನ-ನೀರು ಕಾಣದೆ ಅವಳ ದೇಹ ನಿಶ್ಶಕ್ತ

ವಾಗಿತ್ತು. ಮಾತನಾಡಲೂ ತ್ರಾಣವಿರಲಿಲ್ಲ. ಮಾತ್ಸರ್ಯಮಯಿಯಾದ ಅತ್ತೆ ಅವಳಿಗೆ ಒಂದು ತುತ್ತು ಅನ್ನವನ್ನಾಗಲಿ, ಒಂದು ಗುಟುಕು ನೀರ ನ್ನಾಗಲಿ ನೀಡುವ ದಯೆ ತೋರಲಿಲ್ಲ.

ಹೀಗೆ ಆರು ದಿನಗಳು ಕಳೆದಾಗ ಮುನಿಯಮ್ಮನಿಗೆ ಬದುಕು ಸಾಕೆನಿ ಸಿತ್ತು. ಆದಷ್ಟು ಬೇಗ ಈ ಲೋಕವನ್ನು ಬಿಟ್ಟುಹೋಗಲು ಆಕೆ ಕಾತರಿಸಿ ದಳು. ಅವಳ ಆಸೆ ಕೈಗೂಡಿತು.

ಆ ಆರನೆಯ ದಿನ ರಾತ್ರಿ, ದೀಪ ಬೆಳಗಿದ ತುಸು ಹೊತ್ತಿಗೇ ಮುನಿ ಯಮ್ಮ ಕೊನೆಯುಸಿರೆಳೆದಳು. ಭದ್ರಯ್ಯ ಮನಸ್ಸಿನಲ್ಲಿಯೇ ಆನಂದಿಸಿದ. ಅವನ ತಾಯಿ ಸಮಾಧಾನದಿಂದ ಸಂತೋಷಪಟ್ಟಳು. ಆದರೂ ಇಬ್ಬರ ಕಣ್ಣಲ್ಲಿಯೂ ನೀರು! ಲೋಕದ ಕಣ್ಣಿಗೆ ಕಾಣುವ ದುಃಖದ ಕಣ್ಣೀರು!!

ನೆರೆಹೊರೆಯವರು ಬಂದು ಮುನಿಯಮ್ಮನ ಶವವನ್ನು ನೋಡಿಕೊಂಡು ಹೋದರು. ಅನ್ನ – ನೀರು ಕಾಣದೆ ಸೊರಗಿ ಸತ್ತಿದ್ದ ದೇಹ ಅವಳು ಕಾಯಿಲೆಯಿಂದಲೇ ಸತ್ತಳೆಂದು ಸಾರುತ್ತಿತ್ತು. ಅಬ್ಬಾ! ಅದೆಂತಹ ಕಾಯಿಲೆಯೋ ?

ಯಾವುದೋ ಒಂದು! ಅಂತೂ ಬಂದಿತು!! ಮುನಿಯಮ್ಮನನ್ನು ಕೊಂದಿತು!!

ಮುನಿಯಮ್ಮ ಜೀವವನ್ನು ಬಿಡಬೇಕಾಗಿತ್ತು ; ಬಿಟ್ಟಳು! ಶವವಾಗ ಬೇಕಾಗಿತ್ತು ; ಆದಳು!

ಶವ....ಮುನಿಯಮ್ಮನ ಶವ....

ಭಾಗ್ಯವನ್ನೇ ಬರಸೆಳೆಯುವ ನವಶವ....

ದುಃಖಿಸಬೇಕಾದ ಸಮಯದಲ್ಲಿ ಭದ್ರಯ್ಯನ ಮನಸ್ಸು ಉತ್ಸಾಹದಿಂದ ನಲಿಯಿತು.

ಸುಮಾರು ಹತ್ತು ಗಂಟೆಯವೇಳೆಗೆ ಒಂದು ಕೈ ಚೀಲವನ್ನೂ ದೊಡ್ಡ ಸೀಸೆಯನ್ನೂ ತೆಗೆದುಕೊಂಡು ಹೊರ ಹೊರಟ ಭದ್ರಯ್ಯ. ಸೀಸೆಯ ತುಂಬ ಹೆಂಡ ತುಂಬಿಸಿಕೊಂಡು, ಹಸಿಯ ಮಾಂಸವನ್ನು ಕೊಂಡುದಾಯಿತು. ಮನೆಗೆ ಹಿಂತಿರುಗುವ ವೇಳೆಗೆ ನೆರೆಹೊರೆಯ ಗಂಡಸರು ಅವನಿಗಾಗಿ ಕಾದು ನಿಂತಿದ್ದರು.

ಮೌನವಾಗಿ ಒಳಗೆ ನಡೆದ ಭದ್ರಯ್ಯ, ಎಷ್ಟು ಹೊತ್ತಾದರೂ ಹೊರಗೆ

ಬರುವ ಸೂಚನೆಯೇ ಕಾಣಲಿಲ್ಲ. ಶವವನ್ನು ಶ್ಮಶಾನಕ್ಕೆ ಸಾಗಿಸಲು, ನೆರವು ನೀಡಲು ಬಂದಿದ್ದ ನೆರೆಹೊರೆಯವರು, ಭದ್ರಯ್ಯನನ್ನು ಕೂಗಿ, ಹೊರಗೆ ಕರೆದು, ಸಂಗತಿಯನ್ನು ತಿಳಿಸಿದರು.

" ಇಷ್ಟೊತ್ತ್‌ನಾಗ ಬ್ಯಾಡ. ವತ್ತಾರೆ ಮಣ್ ಮಾಡಾವ. "

ಎಂದುಬಿಟ್ಟ ಭದ್ರಯ್ಯ. ಬಂದವರೆಲ್ಲಾ ಹಿಂತಿರುಗಿದರು.

" ಹೆಣ ಕಾಯ್ಕೊಂಡು ರಾತ್ರೀನೆಲ್ಲಾ ಕುಂತಿರ್‍ತೀಯಾ ಭದ್ರೂ ?"

" ಇಲ್ಲಕಾಣವ್ವ. ನಾ ಇತ್ತಾಗೆ ಮನೀಕ್ಕೊಣ್ತೀನಿ. ನೀನು ' ಮೂಲೇ ಮನೇ'ನಾಗ ಮನೀಕ್ಕೋ "

ಮಗನ ಮಾತಿನಂತೆ ತಾಯಿ ಅಡಿಗೆ ಮನೆಯಲ್ಲಿ ತನ್ನ ಹಾಸಿಗೆ ಹಾಸಿಕೊಂಡು ಮಲಗಿದಳು. ಭದ್ರಯ್ಯ ದೀಪವಾರಿಸಿದ. ಆದರೆ ಮಲಗಲಿಲ್ಲ. ಮುನಿಯಮ್ಮನ ಶವದ ಬಳಿಯೆ ಕುಳಿತು, ಅವಳ ಮುಖದಕಡೆಗೇ ನೋಡುತ್ತಿದ್ದ ಬಳಿಯಲ್ಲೇ ಹಸಿಯ ಮಾಂಸವೂ ಹೆಂಡದ ಸೀಸೆಯೂ ಇದ್ದವು.

ಮನೆಗೆ ಹತ್ತಿರದಲ್ಲಿಯೇ ಇದ್ದ ಪೋಲೀಸು ಠಾಣೆಯಲ್ಲಿ ಹನ್ನೊಂದು ಬಾರಿಸಿತು............ಹನ್ನೆರಡು ಬಾರಿಸಿತು............ಒಂದು ಗಂಟೆಯನ್ನೂ ಬಾರಿಸಿತು.

ಭದ್ರಯ್ಯನ ಮನಸ್ಸು ಏಕೋ ನಿರಾಸೆಗೊಳ್ಳುತ್ತಿತ್ತು.

' ಭೂತವಿದ್ಯೆ ' ಸಾಧಿಸುವ ವಿಷಯದಲ್ಲಿ ನಿಂಗಣ್ಣ ಏನೇನು ಹೇಳಿದ್ದ ?

' ಕಲ್ಲೂ — ನೀರೂ ಕರಗೋ ಒತ್ತು ಅನ್ನೆಲ್ಲು — ಅನ್ನೆಲ್ಲೂವರೆ ಗಂಟೆ ಒತ್ಗೆ ಬತ್ತೈತೆ ಭದ್ರೂ. ಆವಾಗ್ಲೇ ಹೆಣ ಇದ್‌ಕಿದ್ದಂಗೆ ಬಾಯ್ ತಗೀತಯ್ತೆ. ಆ ಸಂದರ್ಭ ನೋಡ್ಕಂಡು, ಅದರ ಬಾಯ್ಗೆ ಮಾಂಸ ಆಕ್‌ಬುಡು, ಅಂಗೇ ಎಂಡಾನೂ ಸುರಿದ್‌ಬುಡು. ಆಮೇಕ್ ಆ ಎಣದಾಗಿನ್ ಭೂತ ನಿನ್‌ವಸ ಆಯ್ತದೆ ? '

ನಿಂಗಣ್ಣ ಹೇಳಿದ ಮಾತು ಅಕ್ಷರಶಃ ನೆನಪಿದೆ. ಆದರೆ ಹಾಗೇನೂ ಆಗಲೇ ಇಲ್ಲವಲ್ಲ! ಬಹುಶಃ ನಿಂಗಣ್ಣ ಸುಳ್ಳು ಹೇಳಿರಬಹುದೆ ? ಛೆ, ತನ್ನ ಮೇಲೆ ಎಷ್ಟೊಂದು ನಂಬಿಕೆಯಿಟ್ಟು ವಿದ್ಯೆಯ ಗುಟ್ಟು ಹೇಳಿಕೊಟ್ಟಿದ್ದಾನೆ !

ಗಡಿಯಾರದಲ್ಲಿ ಎರಡು ಗಂಟೆ ಬಾರಿಸಿದ್ದೂ ಭದ್ರಯ್ಯನ ಕಿವಿಗೆ ಕೇಳಿಸಿತು.

ಹನ್ನೆರಡು—ಹನ್ನೆರಡೂವರೆ ಗಂಟೆ ಮೀರಿ ಎಷ್ಟೋ ಹೊತ್ತಾಗಿತ್ತು. ಆದರೂ ಭದ್ರಯ್ಯನಿಗೆ ಚಪಲ. ಬಹುಶಃ ಈಗಲೋ-ಇನ್ನೊಂದು ಕ್ಷಣಕ್ಕೋ ಆ ಹೆಣ ಬಾಯಿ ತೆಗೆಯುವುದೆಂದು ಅವನ ನಿರೀಕ್ಷೆ. ಕುತೂಹಲದಿಂದ ಆತ ಕಾಯುತ್ತಿದ್ದ.

ಮೂರು-ನಾಲ್ಕು-ಐದು ಗಂಟೆಗಳು ಬಾರಿಸಿದವು. ಬೆಳಗಾಯಿತೆಂದು ಕಾಗೆಗಳು ಕೂಗಿದವು. ಆದರೆ ಭದ್ರಯ್ಯ ಇನ್ನೂ ಕತ್ತಲೆಯಲ್ಲಿಯೇ ಇದ್ದ.

'ನೋಡೋಣ, ಕೊನೆಯ ಗಳಿಗೆಯಲ್ಲಾದರೂ ಹೆಣ ಬಾಯಿ ತೆಗೆದೀತೇನೋ' ಎಂಬುದು ಅವನ ಆಸೆ.

ಆದರೆ ಆ ಆಸೆ ನಿರಾಸೆಯಾಯಿತು ; ಸರ್ವಸ್ವವೂ ನಿರರ್ಥಕವಾಯಿತು.

ಮುದುಕಿ ಹಾಸಿಗೆ ಬಿಟ್ಟೆದ್ದು ಹೊರಗೆ ಬಂದಳು. ಹೆಣದ ಬಳಿ ತಲೆಯ ಮೇಲೆ ಕೈಹೊತ್ತು ಯೋಚನಾಪರನಾಗಿ ತನ್ನ ಮಗ ಕುಳಿತೇ ಇದ್ದಾನೆ. ಪಕ್ಕದಲ್ಲಿ ರಾತ್ರಿ ತಂದ ಮಾಂಸ ನಾರುತ್ತಿದೆ. ಹೆಂಡದ ವಾಸನೆಯಂತೂ ಗಬ್ಬಿಟ್ಟಿದೆ.

"ಮಗಾ, ಇಂಗೇ ಕುಂತಿದ್ದೀಯಾ ರಾತ್ರೀನಿಂಕ ?"

ತಾಯಿಯ ಮಾತು ಭದ್ರಯ್ಯನ ಕಿವಿಗೆ ಬಿತ್ತೋ ಇಲ್ಲವೋ ? ಅವನಂತೂ ನಿರಾಸೆ-ಬೇಸರಗಳಿಂದ ಕುಗ್ಗಿಹೋಗಿದ್ದ. 'ಪ್ರಪಂಚದಲ್ಲಿ ನಿನಗಿನ್ನೇನಿದೆ ?' ಎಂದು ಅವನ ಮನಸ್ಸು ಚುಚ್ಚಿ ಕೇಳುತ್ತಿತ್ತು.

'ಪ್ರೇತ ಪ್ರಸನ್ನ' ವಿದ್ಯೆಯನ್ನು ಧಾರೆಯೆರೆಯುತ್ತೇನೆಂದಿದ್ದ ನಿಂಗಣ್ಣ ಸತ್ತಿದ್ದ.

ತಂತ್ರಸಾಧನೆಯ ಪ್ರಯತ್ನ ವಿಫಲವಾಗಿ ಸೆರೆಮನೆಯ ವಾಸ ಅನುಭವಿಸಬೇಕಾಯಿತು.

ಸೆರೆಮನೆಯಿಂದ ಹಿಂತಿರುಗಿದ ಮೇಲೆ ಕಂಟ್ರಾಕ್ಟರ ಬಳಿ ಇದ್ದ ಕೆಲಸ ಕಳೆದುಹೋಗಿತ್ತು.

ಕೈಹಿಡಿದ ಮುದ್ದಾದ ಹೆಂಡತಿಯನ್ನು ಕೈಯಾರೆ ಕೊಂದುದಾಗಿತ್ತು.

ಅವಳ ಹೆಣದ ಮೇಲೆ ಮಾಡಬೇಕೆಂದಿದ್ದ ತಂತ್ರಪ್ರಯೋಗವೂ ನಿಷ್ಫಲವಾಯಿತು.

ಇನ್ನೇನುಳಿದಿದೆ ತನಗೆ ?

ಭದ್ರಯ್ಯ ಕಳೆದುಹೋದ ತನ್ನ ಸರ್ವಸ್ವವನ್ನೂ ನೆನಪಿನ ಹಂಜಿರದಲ್ಲಿ

ಹಿಂಜಿಹಿಂಜಿ ನೋಡಿದನು. ಬಾಳೇ ಬಗೆ ಹರಿಯದ ಒಗಟಾಗಿದ್ದುದು ಸ್ಪಷ್ಟವಾಗಿತ್ತು.

ತಾಯಿಯ ಬಲವಂತಕ್ಕೆ ಭದ್ರಯ್ಯ ಕುಳಿತಲ್ಲಿಂದ ಎದ್ದ. ನೇಸರು ಮೂಡಣ ದಿಬ್ಬವನ್ನೇರುವ ವೇಳೆಗೆ ಮುನಿಯಮ್ಮನ ಶ್ಮಶಾನಯಾತ್ರೆ ನೆರವೇರಿತು. ಮುದುಕಿಯೂ ಶವದ ಹಿಂದೆಯೇ ಹೋಗಿ ಹಳ್ಳದಲ್ಲಿ ಹಿಡಿಮಣ್ಣು ಹಾಕಿ ಹಿಂತಿರುಗಿದಳು.

ಅಂದಿನಿಂದ ಭದ್ರಯ್ಯನ ಮನಸ್ಸೇ ಅಸ್ತವ್ಯಸ್ತವಾಯಿತು. ಯಾವ ಕೆಲಸ ಮಾಡಲೂ ಉತ್ಸಾಹವೇ ಇಲ್ಲ. ಸದಾ ಆಲಸ್ಯ. ಮಂಕು ಮುಚ್ಚಿದವನಂತೆ ಸದಾ ಮನೆಯಲ್ಲಿಯೇ ಕುಳಿತಿರುತ್ತಿದ್ದ.

ಹೀಗೆಯೇ ಒಂದು ತಿಂಗಳು ಕಳೆಯಿತು.

ಒಂದು ದಿನ ಲಚುಮಯ್ಯನೂ ಚಿಕ್ಕೇಗೌಡನೂ ಭದ್ರಯ್ಯನ ಮನೆಗೆ ಬಂದರು. ಬಂದವರು ಭದ್ರಯ್ಯನನ್ನಾಗಲಿ, ಅವನ ತಾಯಿಯನ್ನಾಗಲಿ ಕೂಗದೆ, ತಮಗೆ ತುಂಬಾ ಪರಿಚಿತಳಾಗಿದ್ದ ಮುನಿಯಮ್ಮನನ್ನೇ ಕೂಗಿದಳು. ಆದರೆ ಅವರ ಕರೆಗೆ 'ಓ'ಗೊಡಲು ಮುನಿಯಮ್ಮನೆಲ್ಲಿದ್ದಾಳೆ ?

ಭದ್ರಯ್ಯನೇ ಹೊರಗಡೆ ಬಂದು ವಿಚಾರಿಸಿದ. ಬಂದವರು ನಿಂಗಣ್ಣನ ಮಿತ್ರನೆಂಬುದು ತಿಳಿಯಿತು. ಪರಸ್ಪರ ಪರಿಚಯವಾದ ಬಳಿಕ ಮುನಿಯಮ್ಮನ ಮಾತು ಬಂದಿತು. ಅವಳು ಸತ್ತ ಸುದ್ಧಿ ಭದ್ರಯ್ಯನ ಬಾಯಿಂದಲೇ ಬಂದಾಗ ಲಚುಮಯ್ಯನೂ ಚಿಕ್ಕೇಗೌಡನೂ ತಮ್ಮ ಕಿವಿಗಳನ್ನೇ ನಂಬದಾದರು.

" ಸೀತಮ್ಮನಂತಾ ಎಂಗ್ಸು ಮುನೆಮ್ಮ. ಕೈಯೆತ್ತಿ ಮೊಕ್ಕಬೇಕು ಆಯಮ್ಮಂಗೆ "

ಎಂದ ಲಚುಮಯ್ಯ. ಅಷ್ಟರಲ್ಲಿ ಅವರಿಬ್ಬರನ್ನೂ ನೋಡಿದ ಭದ್ರಯ್ಯನ ತಾಯಿ, ಮಗನನ್ನು ಬಳಿಗೆ ಕರೆದು, ಮೆಲ್ದನಿಯಲ್ಲಿ —

" ಇವರೇ ಕಾಣ್ ಮೊಗಾ ಅವತ್ತು ಬಂದಿದ್ದೋರು — ನಿನ್ ಹೆಂಡ್ರ ಮಿಂಡ್‌ಗಾರರು ! "

ಎಂದಳು. ಆದರೆ ಲಚುಮಯ್ಯನ ಮಾರ್ದವ ಮಾತಿನ ಧಾಟಿಯನ್ನು ಅಂದು ಪ್ರತ್ಯಕ್ಷವಾಗಿ ಕಂಡಿದ್ದ ಭದ್ರಯ್ಯನಿಗೆ ತಾಯಿಯ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಕೂಡಲೇ ಅವಳ ಕೆನ್ನೆಗೆ ಬಿಗಿಯಬೇಕೆಂದು ಅವನ ರೋಷದ

ಮನ ಹಾತೊರೆಯಿತು. ಆದರೆ ಅವಳು ತಾಯಿ — ತನ್ನನ್ನು ಹೆತ್ತವಳು. ಹೊಡೆಯಬಹುದೇ ?

ಭದ್ರಯ್ಯ ಮೆಲ್ಲನೆ ಹೆಜ್ಜೆಇಡುತ್ತಾ ಅಂಗಳಕ್ಕೆ ಬಂದು ಕುಳಿತ. ಲಚುಮಯ್ಯನೂ ಚಿಕ್ಕೇಗೌಡನೂ ಮೌನವಾಗಿ ಕುಳಿತಿದ್ದರು. ತಾನೂ ಮಾತನಾಡದೆ ಸುಮ್ಮನೆ ಕುಳಿತುಬಿಟ್ಟರೆ, ಅವರಿಬ್ಬರೂ ಇನ್ನಷ್ಟು ಬೇಸರ ಪಟ್ಟುಕೊಂಡಾರೆಂದು ಯೋಚಿಸಿದ ಭದ್ರಯ್ಯ ತಾನೇ ಮಾತಿಗಾರಂಭಿಸಿದ—

" ನೀವಿಬ್ಬರೂ ರಾಮುಸಂದ್ರದವರೇನು ? "

" ಅಲ್ಲ ಕಣಪ್ಪ, ನಾನು ಮಾತ್ರ ರಾಮುಸಂದ್ರದೋನು. ಇವರು ಬೈಲುಹಳ್ಳಿಯೋರು. ' ಬೈಲಳ್ಳಿ ಲಚುಮಯ್ಯ ' ಅಂತ ಹೆಸರು ಕೇಳಿಲ್ವಾ ನೀವು? ಅವರೇ ಇವರು. ನಮ್ಮ ಸುತ್ತಮುತ್ತ ಸ್ಯಾನೆ ಹೆಸರುವಾಸಿ. ' ಅಮ್ಮ 'ನ ದಯದಿಂದ ಮಾಯಾ, ಮಂತ್ರ, ಮಾಟ, ಮೋಡಿ — ಎಲ್ಲಾ ಕಲ್ತವರೆ. ನೋಡಿದ್ರಾ ಅವರ ಮುಖಾನ — ಇಂತಾ ವಿದ್ಯೆ ತಿಳಿದಯ್ತೆ ಅಂತ ಕಾಣ್ತದಾ ? ಆ ಮೊಕದಾಗ, ಮಾತ್ನಾಗ ಒಸೀನಾದ್ರೂ ಗರ್ವ ಕಾಣತ್ತೈತಾ ?"

ಚಿಕ್ಕೇಗೌಡನು ಲಚುಮಯ್ಯನ ವಿಷಯವನ್ನು ಹೇಳಿದಾಗ ಭದ್ರಯ್ಯ ಆಶ್ಚರ್ಯಚಕಿತನಾದ.

ಗೌಡ ಮುಂದುವರಿಸಿದ —

" ಇಷ್ಟಾದರೂ ಮನುಸ ಒಬ್ಬರಿಗೆ ಒಂದು ಕೆಟ್ಟದ್ದು ಮಾಡಾಕಿಲ್ಲ. ಚಿನ್ನದಂತಾ ಗುಣ. ' ಅಮ್ಮ 'ನ ದಯದಿಂದ ದೊಡ್ತನವೇ ಉಳೀಸ್ಕೊಂಡ್ ಬತ್ತವ್ರೆ. ಹಡಗು ಸಮುದ್ರದಾಗ ಓಗ್ದೆ ಬಚ್ಚಲ್ನಾಗ ಓಯ್ತದಾ ಭದ್ರಯ್ಯ ? "

" ಎಲ್ಲಾರ ಉಂಟೆ ! " ಎಂದ ಭದ್ರಯ್ಯ.

" ನಿಂಗಪ್ಪಣ್ಣಂಗೂ ವಿದ್ಯೆ ಕಲಿಸ್ದೋರು ಇವರೇ ಕಣಪ್ಪ "

" ನಿಜಾನ ? "

" ಅದ್ಯಾಕ್ ಹಂಗ್ ಕೇಳ್ತೀಯಾ ? "

" ಯಾಕಿಲ್ಲ, ಸುಮ್ನೆ........ನಾನೂ ನಿಂಗಪ್ಪಣ್ಣನ ತಾವ ಈ ಇದ್ಯಾ ಕಲೀಬೇಕಂತ ಸ್ಯಾನೆ ಪರಪಂಚಲು ಬಿದ್ದೆ. ಕೊನೆಗೂ ಆಗ್ದೇನೇ ಓಯ್ತು "

ಭದ್ರಯ್ಯನ ಮಾತು ಕೇಳಿದಾಗ ಲಚುಮಯ್ಯನ ಆಸಕ್ತಿ ಜಾಗೃತವಾಯಿತು.

" ಸಾಧ್ನೆ ಮಾಡ್ದೇನಪ್ಪ ನೀನೂವೆ ?"

" ಹ್ಞಂ " ಎಂದು ಹೇಳಿ ಭದ್ರಯ್ಯ ತಂತ್ರಸಾಧನೆಗಾಗಿ ತಾನು ಮಾಡಿದ ಸಾಹಸವನ್ನೆಲ್ಲಾ ಲಚುಮಯ್ಯನಿಗೆ ವಿವರಿಸಿದ. ಕೊನೆಗೆ—

" ನಿಂಗಪ್ಪಣ್ಣ ನಂಗೆ ಸುಳ್ಳೇಳ್ ಬುಟ್ಟಾ ಅಂತ ಕಾಣ್ತೈತೆ " ಎಂದ.

" ಇಲ್ಲ, ಅವನೇಳಿದ್ದು ಸರಿ. ನೀನು ಮಾಡಿದ್ದೇ ತಪ್ಪು ! "

" ಅವನ್ ಏಳ್ದಂಗೇ ನಾ ಮಾಡೀವ್ನಲ್ಲಾ............ "

" ಅಂಗಲ್ಲ ಭದ್ರಯ್ಯ. ಹೆಣಾನ ಮಶಾಣದಾಗ ಮಡೀಕ್ಕೊಂಡ್, ಕಾಯ್ಕೊಂಡ್ ಕುಂತ್ರೇನೇ ಕಲ್ಲೂ ನೀರೂ ಕರಗೋ ಒತ್ನಾಗ ಬಾಯಿ ತೆಗೀತ್ತೈತೆ. ಎಷ್ಟೋ ಸಂದರ್ಭಗಳಾಗ ಚಟ್ಟನೆ ಎದ್ದು ಕುಂತ್ಕೊಂಡ್ ಬಿಡೋದೂ ಅದೆ. ಅಂತ ಒತ್ನಾಗ ಮಾಂಸ – ಎಂಡ ಅದರ್ ಬಾಯ್ಗಾಕಿದ್ರೆ, ಪಿಸಾಚಿ ವಸ ಆಗ್ತೈತೆ. ಹೆಣಾನ ಮನೇಗೇ ಮಡೀಕ್ಕೊಂಡು, ಬಾಯಿ ತೆಗೀತ್ತೈತೇನೋ ಅಂತ ಕಾಯ್ಕೊಂಡ್ರೆ ಏನೂ ಆಗಾಕಿಲ್ಲ ಕಾಣಪ್ಪ. "

ಮಾತು ಮುಗಿಸಿದ ಲಚುಮಯ್ಯ ಭದ್ರಯ್ಯನ ಕಡೆಗೆ ನೋಡಿದ.

ಸ್ವಲ್ಪ ಹೊತ್ತು ಮೌನವಾಗಿತ್ತು ವಾತಾವರಣ.

ಅನಂತರ ಲಚುಮಯ್ಯನೇ ಕೇಳಿದ—

" ನಿಂಗಣ್ಣನ ಹಂಗೆ ನೀನೂ ಪಿಸಾಚಾ ವಸ ಮಾಡ್ಕೋಬೇಕೂಂತ ಆಸೆ ಮಡೀಕ್ಕೊಂಡಿದ್ದೀಯಾ ಭದ್ರಯ್ಯ ?"

" ಸ್ಯಾನೆ ಆಸೆ ಐತಣ್ಣ. ನಿಮ್ಮಂತಾ ಗುರುಗೋಳು ದಯ ಮಡಗಿದ್ರೆ..."

" ಜೀವಕ್ಕೇ ಬತ್ತಿ ಇಕ್ ಬುಡ್ತೈತೆ !....ಅಪಾಯ ಕಾಣಪ್ಪಾ."

ಲಚುಮಯ್ಯನ ಮಾತು ಅರ್ಥವಾಗದವನಂತೆ ಭದ್ರಯ್ಯ ಆಶ್ಚರ್ಯ ಚಕಿತನಾಗಿ ಅವನ ಕಡೆಗೇ ನೋಡಿದ. ಈ ವಿಷಯದಲ್ಲಿ ನಿಂಗಣ್ಣ 'ಅಪಾಯ' ಎಂಬ ಶಬ್ದವನ್ನು ಎಂದೂ ಉಪಯೋಗಿಸಿರಲಿಲ್ಲ.

ಲಚುಮಯ್ಯನೇ ಮುಂದುವರಿಸಿದ—

" ನೋಡು, ಈವಾಗ ನಿನಗೊಂದು ಪಿಸಾಚ ವಸ ಮಾಡ್ಕೊಟ್ಟೇ ಅಂದ್ಕೋ. ಅದ್ಕೆ ಇಷ್ಟೇ ವರ್ಸ ಅಂತ ಆಯುಸ್ಸು ನಿಗದಿ ಆಗಿರ್ತೈತೆ."

" ಅಂದ್ರೆ....?"

" ನಾಲ್ಕು ವರ್ಸ–ಐದು ವರ್ಸ–ಹತ್ತು ವರ್ಸ – ಇಂಗೇ ಒಂದೊಂದ್ ಪಿಸಾಚಕ್ಕೂ ಆಯುಸ್ಸು ಇರ್ತೈತೆ. ಆಯುಸ್ಸು ತೀರಿದ್ ಮ್ಯಾಕ್ಕೆ ಪಿಸಾಚ

ಈ ಭೂಮಿ ಬುಟ್ಟ್ ಒಂಟೋಯ್ತದೆ. ಓಗೋವಾಗ, ಅದನ್ನ ವಸಮಾಡ್ ಕೊಂಡಿರೋ ಮನುಸರ ಪ್ರಾಣಾನೂ ತಕೊಂಡ್ ಒಂಟೋಯ್ತದೆ....ಅಷ್ಟೇ ನಿಂಗಣ್ಣನ ಪ್ರಾಣಾನೂ ಒಂಟೋಯ್ತು ಕಣಪ್ಪ ”

ಭದ್ರಯ್ಯನಿಗೆ ನಿಜವಾದ ಕಾರಣ ಗೊತ್ತಾಯಿತು – ನಿಂಗಣ್ಣನ ಸಾವಿಗೆ.

“ ಅಂದ್ರೆ ಸತ್ತೋಯ್ತಾರಾ ?”

“ ಹ್ಞಂ ”

ಭದ್ರಯ್ಯ ಮೌನವಾದ. ಪಿಶಾಚಿಯನ್ನು ವಶಮಾಡಿಕೊಂಡು ಆಜೀವ ಪರ್ಯಂತ ಅದರ ಕೈಯಿಂದ ಅಮಾನುಷ ಕೃತ್ಯಗಳನ್ನು ಮಾಡಿಸಿಕೊಳ್ಳುತ್ತಾ, ಸುಖವಾಗಿ ಮೆರೆಯಬೇಕೆಂಬ ಅವನ ಆಸೆ ಗಾಳಿಗೆ ಸಿಕ್ಕ ದೀಪವಾಯಿತು. ಮನಸ್ಸು ಸ್ಥಿರವಾಗದೆ, ‘ ಬೇಕು—ಬೇಡ ’ಗಳ ಕಡೆಗೆ ಒಮ್ಮೊಮ್ಮೆ ತೂಗಾಡಿತು. ‘ ಪ್ರೇತಪ್ರಸನ್ನ ’ ಮಾಡಿಕೊಳ್ಳಬೇಕು ಎಂದು ಹಾತೊರೆಯುತ್ತಿದ್ದ ಮನಸ್ಸೇ ಒಮ್ಮೆ ‘ ಬೇಡ ’ ಎಂದಿತ್ತು. ‘ ಬೇಡ ’ ಎಂದ ಮನಸ್ಸೇ ಇನ್ನೊಮ್ಮೆ ‘ ಬೇಕು ’ ಎಂದಿತು. ಅಂತೂ ಗೊಂದಲದಲ್ಲಿ ಸಿಲುಕಿದ್ದ ಭದ್ರಯ್ಯ.

‘ ತನ್ನ ಸರ್ವಸ್ವವೂ ಈಗಾಗಲೇ ನಾಶವಾಗಿದೆಯಲ್ಲವೆ ?’

ಭದ್ರಯ್ಯನ ಮನಸ್ಸು ಚರ್ಚೆಗೆ ನಿಂತಿತು.

‘ ಹೌದು ’

‘ ಹಾಗೆಯೇ ತಾನೂ ಒಂದು ದಿನ ನಾಶವಾಗಬೇಕಲ್ಲವೆ ?’

‘ ಅದರಲ್ಲಿ ಸಂದೇಹವೇನು !’

‘ ನಾಶವಾಗುವವರೆಗೂ ಬದುಕಬೇಕಾದ್ದು ಅನಿವಾರ್ಯವಲ್ಲವೆ ?’

‘ ನಿಜ ’

‘ ಬದುಕಿರಬೇಕಾದುದೇ ನಿಜವಾದರೆ ಈ ಹಾಳು ಬಾಳನ್ನು ಏಕೆ ಬದುಕಬೇಕು ?’

‘ ಅಂದರೆ.... ?’

‘ ಬದುಕ್ಕಿದ್ದಷ್ಟು ದಿನ ಸುಖವಾಗಿ ಬಾಳಬೇಕು ’

‘ಸುಖದ ಬಾಳಿಗೆ ಆಶಿಸಿ, ಕ್ರೂರವಾದ ವಿನಾಶಕ್ಕೆ ಸಿದ್ಧನಾಗುವೆಯಾ?’

‘ ಅದಕ್ಕೇಕೆ ಯೋಚನೆ ? ಮೊದಲು ಸುಖದ ಬಾಳು ಸಿಕ್ಕಲಿ. ಅನಂತರ ನಾಶವಾಗಬೇಕಾದ್ದು ಇದ್ದೇ ಇದೆ. ಅದು ಕ್ರೂರವೋ – ಅಕ್ರೂ

ರವೋ ಏನಾದರೇನು ? ಹೇಗೂ ನಾಶಹೊಂದಬೇಕಾದುದು ಅನಿವಾರ್ಯ........ ನಾಶ ಹೊಂದುತ್ತೇನೆ........

'ಹಾಗಾದರೆ ಸುಖದ ಬಾಳನ್ನೇ ಅಪ್ಪಿಕೊಳ್ಳಲು ನಿಶ್ಚಯಿಸಿದೆಯಾ ?'

'ಹೌದು, ಹೌದು. ಇದೋ ಈಗಲೇ ಸುಖದ ಸುಪ್ಪತ್ತಿಗೆಯ ಮೇಲೆ ಮಲಗಲು ಸಿದ್ಧವಾಗುತ್ತೇನೆ'

ಉಯ್ಯಾಲೆಯಲ್ಲಿ ವಿಹರಿಸುತ್ತಿದ್ದ ಭದ್ರಯ್ಯ ತಟ್ಟನೆ ತಳಗಿಳಿದ.

"ಏನಾದರೂ ಪರವಾಕಿಲ್ಲಣ್ಣ. ನೀನು ಒಂದು ಪಿಸಾಚ ವಸ ಮಾಡಿ ಕೊಡ್ಲೇ ಬೇಕು"

ಲಚುಮಯ್ಯ ಸ್ವಲ್ಪ ಹೊತ್ತು ಯೋಚಿಸಿದ. ನಿಂಗಣ್ಣನ ಸಾವಿನ ದೃಶ್ಯ ಅವನ ಕಣ್ಮುಂದೆ ಕಟ್ಟಿತು. ತಾನು ಅವನಿಗೆ ಪ್ರೇತವಶ ಮಾಡಿ ಕೊಟ್ಟುದರಿಂದಲೇ ಅಲ್ಲವೆ ಅವನು ಸತ್ತಿದ್ದು ? ಅವನನ್ನು ಕೊಂದ ಪಾಪ ತನಗೇ ಸುತ್ತಿಕೊಳ್ಳದೆ ಬಿಡುವುದಿಲ್ಲ. ಹೀಗೆ ಎಷ್ಟು ಜನರನ್ನು ಕೊಂದು ತಾನು ಪಾಪ ಕಟ್ಟಿಕೊಳ್ಳಬೇಕು ? ಈಗ ಭದ್ರಯ್ಯನೂ ಕೇವಲ ಕೆಲವು ವರ್ಷಗಳ ಸುಖಕ್ಕಾಗಿ ತನ್ನನ್ನು ಪಾಪಕ್ಕೆ ಎಳೆಯುತ್ತಿದ್ದಾನೆ. ಮಾಡುವುದು ಕೆಟ್ಟ ಕೆಲಸವೆಂಬುದನ್ನು ತಿಳಿದೂ ತಿಳಿದೂ ಮತ್ತೆ ಅದನ್ನೇ ಮಾಡುವುದೇ ?

"ಇದೆಲ್ಲಾ ಬ್ಯಾಡ ಸುಮ್ಕಿರು ಭದ್ರಯ್ಯ. ಕಷ್ಟಾನೋ – ಸುಖಾನೋ ದುಡಿದು ಜೀವನ ಮಾಡ್ಕೊಂಡು, ಇರೋ ಅಷ್ಟುದಿನ 'ರಾಮ–ಕೃಷ್ಣ' ಅಂದ್ಕೊಂಡು ಸುಮ್ಕಿರೋದೇ ಚೆಂದ ಕಾಣಪ್ಪ."

"ಇಲ್ಲ ಕಾಣಣ್ಣ, ನನ್ ಪ್ರಾಣ ಓದ್ರೂ ಸರಿಯೆ — ಪಿಸಾಚಾನ ವಸ ಮಾಡ್ಕೊಣ್ಣೇಬೇಕು"

ಭದ್ರಯ್ಯನ ಮೊಂಡುತನವನ್ನು ಕಂಡು, ತಾನು ಒಳ್ಳೆಯ ಪೇಚಿಗೆ ಸಿಕ್ಕಿಕೊಂಡೆನಲ್ಲಾ ಎಂದು ಚಿಂತಿಸಿದ ಲಚುಮಯ್ಯ. ಸ್ವಲ್ಪ ಹೊತ್ತಿನ ಬಳಿಕ—

"ನೀನು ದಿನಾ ತಾನ ಮಾಡ್ತೀಯಾ ಭದ್ರಯ್ಯ"

"ಇಲ್ಲ ಕಾಣಣ್ಣ. ಎಂಟು ದಿನಕ್ಕೊಂದು ಸಲಿ ತಲೀಗೇ ನೀರು ಉಯ್ಕೊಣ್ತೀನಿ"

"ನಿತ್ಯ ನೀರು ಉಯ್ಕೊಂಡು ತಾನ ಮಾಡಬೇಕಪ್ಪ"

"ಆಗಲಿ ಕಾಣಣ್ಣಾ. ಇನ್ಮೇಗ ಮಾಡ್ತೀನಿ"

“ ನೋಡು, ನಿನಗೀಗ ಉಪದೇಸ ಮಾಡೋ ವಿದ್ಯೆ ಸ್ಯಾನೆ ದೊಡ್ಡದು. ಇದರ್ ನಿಂಕ ನಿನ್‌ಜೀವಕ್ಕ ಭಯವಿಲ್ಲ. ನಿಂಗಣ್ಣಂಗೂ ನಾನಿದನ್ನ ಕಲ್ಸಿ ಕೊಟ್ಟಿರಲಿಲ್ಲ. ಯಾಸೆಟ್ಕೋ ಅಂತ ನಿನಗೆ ಏಳ್‌ಕೊಡ್ತೀನಿ ”

“ ನಿನ್ ಮನ್ಸು ಸ್ಯಾನೆ ದೊಡ್ಡು ಕಾಣಣ್ಣ ”

“ ಅಂಟು–ಮುಟ್ಟು–ಮೈಲಿಗೆ ಆಗದಂಗೆ ನೋಡ್ಕೋಬೇಕು ಭದ್ರಯ್ಯ. ಅಂಗೇನಾದ್ರೂ ಆದ್ರೆ ‘ಅಮ್ಮ’ನು ನಿನ್ನ ಸುಮ್ಕೆ ಬಿಡೋಕಿಲ್ಲ ”

“ ಆಗ್ಲಿ ಕಾಣಣ್ಣ. ಉಸಾರಾಗಿರ್ತೀನಿ ”

“ ಅಂಗಾದ್ರೆ ನಾಳೆ ಅಮಾಸೆ. ಚಂಜೇ ಒತ್ಗೆ ನಮ್ಮೂರ್‌ತಾವ್ಕ ಬಾ. ಚೆಂದಾಗಿ ನೀರುಯ್ಕೊಂಡು ತಾನ ಮಾಡಿ, ಈಭೂತಿ ಮಡೀಕ್ಕೊಂಡು ಸುದ್ದವಾಗಿ ಬಾ ”

“ ಆಗ್ಲಿ ಕಾಣಣ್ಣ ” ಎಂದ ಭದ್ರಯ್ಯ.

“ ನಾವಿನ್ನ ಓಗೋನ ಚಿಕ್ಕೇಗೌಡ ”

ಎನ್ನುತ್ತಾ ಲಚುಮಯ್ಯ ಎದ್ದು ನಿಂತ.

“ ಉಂಡ್‌ಬುಟ್ ಓಗಾಕಿಲ್ವಾ ಅಣ್ಣಾ ?”

“ ಇಲ್ಲಪ್ಪಾ, ನಾವು ಓಯ್ತೀವಿ. ರಾಮಸಂದ್ರದಾಗ ಒಂದು ಒಸಗೆ ಊಟ ಕಾದಯ್ತೆ ”

ಎಂದು ನಗುತ್ತಾ ಲಚುಮಯ್ಯ ಚಿಕ್ಕೇಗೌಡನೊಡನೆ ಹೊರಹೊರಟ.

ಅವರನ್ನೇ ನೋಡುತ್ತಾ ತುಸು ಹೊತ್ತು ನಿಂತಿದ್ದ ಭದ್ರಯ್ಯ, ತನಗೆ ಅನಿರೀಕ್ಷಿತವಾಗಿ ದೊರೆತ ಗುರುವಿಗಾಗಿ, ಒದಗಿದ ಭಾಗ್ಯಕ್ಕಾಗಿ ಮನಸ್ಸಿನಲ್ಲಿಯೇ ಆನಂದಿಸಿದ.

ಮರುದಿನ ಭದ್ರಯ್ಯನ ಸಡಗರವೇ ಸಡಗರ. ನೀರು ಕಾಯಿಸಿ ಚೊಕ್ಕಟವಾಗಿ ಸ್ನಾನ ಮಾಡಿದ. ಲಕ್ಷಣವಾಗಿ ವಿಭೂತಿ ಧರಿಸಿದ. ಎಂದಿಗಿಂತ ಹೆಚ್ಚಾಗಿಯೇ ಊಟಮಾಡಿದ. ನಿತ್ಯದಂತೆ ಮಧ್ಯಾಹ್ನದ ನಿದ್ದೆಯನ್ನು ತಪ್ಪಿಸಿ, ಕೋಣೆಯಲ್ಲಿ ಕುಳಿತುಕೊಂಡು, ತನಗೆ ಬರುತ್ತಿದ್ದ ದೇವರನಾಮಗಳನ್ನೆಲ್ಲಾ ಹೇಳಿದ.

ಪೋಲೀಸು ಠಾಣೆಯಲ್ಲಿ ನಾಲ್ಕು ಗಂಟೆ ಬಾರಿಸಿ, ಸಂಜೆಯಾಗುತ್ತಿದೆಯೆಂದು ಎಚ್ಚರಿಸಿತು. ಭದ್ರಯ್ಯ ಕೂಡಲೇ ಎದ್ದು ಇನ್ನೊಂದು ಸಾರಿ ಸ್ನಾನ ಮಾಡಿದ. ಒಗೆದ ಬಟ್ಟೆಗಳನ್ನು ಹಾಕಿಕೊಂಡ. ವಿಭೂತಿ ಇಟ್ಟು

ಕೊಂಡ. ತಾಯಿಗೆ ಹೇಳಿ, ಬೈಲುಹಳ್ಳಿಯ ಕಡೆಗೆ ಹೊರಟ.

ಸುಮಾರು ಆರುಗಂಟೆಯ ನಸುಬೆಳಕಿನಲ್ಲಿ ಭದ್ರಯ್ಯ ಬೈಲುಹಳ್ಳಿಯನ್ನು ಸೇರಿದಾಗ, ಲಚುಮಯ್ಯ ಅವನ ನಿರೀಕ್ಷಣೆಯಲ್ಲಿಯೇ ಇದ್ದ. ಅನಂತರ ಇಬ್ಬರೂ ಮೌನವಾಗಿ ಊರಿನಿಂದ ಹೊರ ಹೊರಟರು. 'ತುಟಿ ಪಿಟಿಕ್' ಎನ್ನಬಾರದೆಂದು ಲಚುಮಯ್ಯ ಭದ್ರಯ್ಯನಿಗೆ ಆಜ್ಞೆ ಮಾಡಿದ್ದ.

ಸಂಪೂರ್ಣ ಕತ್ತಲೆಯಾದಮೇಲೆ, ಇಬ್ಬರೂ ಊರಿನ ಶ್ಮಶಾನದ ಬಳಿಗೆ ಬಂದರು. ಲಚುಮಯ್ಯ ಸ್ವಲ್ಪಹೊತ್ತು ಸ್ತಬ್ಧನಾಗಿ ನಿಂತು, ಒಂದು ಕ್ಷಣ ಆಕಾಶವನ್ನೂ, ಒಂದು ಕ್ಷಣ ಭೂಮಿಯನ್ನೂ ನೋಡಿ, ಬಾಯಲ್ಲಿ ಯಾವುದೋ ಮಂತ್ರವನ್ನು 'ಮಣಮಣ' ಗುಟ್ಟಿದ. ಅನಂತರ ಇಬ್ಬರೂ ಶ್ಮಶಾನದ ಸುತ್ತ ಮೂರು ಸಾರಿ ಪ್ರದಕ್ಷಿಣೆ ಮಾಡಿದರು.

ಕತ್ತಲೆ ಕ್ಷಣಕ್ಷಣಕ್ಕೂ ಕರಾಳವಾಗುತ್ತಿತ್ತು. ಮೋಡದ ದೆಸೆಯಿಂದಾಗಿ ಆಕಾಶದಲ್ಲಿ ನಕ್ಷತ್ರಗಳೂ ಕಾಣಿಸುತ್ತಿರಲಿಲ್ಲ. ಕೃಷ್ಣಪಕ್ಷದ ಕೊನೆಯ ದಿನವಾಗಿದ್ದರಿಂದ ಚಂದ್ರನೂ ಮೂಡಿರಲಿಲ್ಲ. ಪ್ರಕೃತಿಯ ಒಗೆಗೆ ಗಾಳಿಯೂ ಮುನಿಸಿಕೊಂಡಿತ್ತೇನೋ ! ಮರದೆಲೆಗಳ ಅಲುಗಾಟದ ರವವೂ ಕೇಳಿಸುತ್ತಿರಲಿಲ್ಲ. ಜೀರುಂಬೆಯ ಶಬ್ದವನ್ನು ಬಿಟ್ಟರೆ ಅದು ನೀರವರಾತ್ರಿಯೇ ಹೌದು ........ಅದೂ ರುದ್ರಭೀಕರ ಮೌನರಾತ್ರಿ.

ಲಚುಮಯ್ಯನೂ – ಭದ್ರಯ್ಯನೂ ಎದುರು – ಬದುರಾಗಿ ಶ್ಮಶಾನದಲ್ಲಿ ಕುಳಿತರು. ಲಚುಮಯ್ಯ ತನ್ನ ಸುತ್ತಮುತ್ತಲಿದ್ದ ಮರಳನ್ನು ಗುಡಿಸಿ, ತನ್ನ ಮತ್ತು ಭದ್ರಯ್ಯನ ನಡುವೆ ಎರಡು ಸಣ್ಣ ಗುಡ್ಡೆ ಮಾಡಿದ. ತನ್ನ ಜೇಬಿನಲ್ಲಿಟ್ಟುಕೊಂಡಿದ್ದ ಒಂದು ಹಳದಿಯ ಹೂವನ್ನು ತೆಗೆದು ಒಂದು ಗುಡ್ಡೆಯ ತುದಿಗೆ ಮಾತ್ರ ಸಿಕ್ಕಿಸಿದ. ಅನಂತರ ತನ್ನ ತೋರುಬೆರಳಿನಿಂದ ಗುಡ್ಡೆಗಳ ಸುತ್ತಲೂ ಆವರಣದ ಗೆರೆಯನ್ನೆಳೆದ.

ಇಬ್ಬರೂ ಮೌನವಾಗಿ ಕುಳಿತಿದ್ದರು—ಸಮಯದ ಪರಿವೆಯೇ ಇಲ್ಲದೆ. ಲಚುಮಯ್ಯನಂತೂ ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿದ್ದ. ಆತ ತನ್ನ ಗುರು ಉಪದೇಶಿಸಿದ 'ತ್ವರಿತಾಮಂತ್ರ'ವನ್ನೂ 'ಚಂಡೀ ಆವಾಹನೆಯ ಮೂಲ ಮಂತ್ರ'ವನ್ನೂ ಮನಸ್ಸಿನಲ್ಲಿಯೇ ಜಪಿಸುತ್ತಿದ್ದ.

ಎರಡು–ನೂರೆಂಟು ಸಾರಿಯ ಮಾನಸಿಕ ಜಪ ಮುಗಿದ ಬಳಿಕ ಕಣ್ಣು ತೆರೆದ ಲಚುಮಯ್ಯ ಎದ್ದುನಿಂತ. ಅವನನ್ನು ನೋಡಿ ಭದ್ರಯ್ಯನೂ ಎದ್ದು

ನಿಂತ. ಇಬ್ಬರೂ ಸನಿಯದಲ್ಲೇ ಇದ್ದ ಕಪಿಲೆಯ ಬಾವಿಗೆ ಬಂದರು. ಲಚು ಮಯ್ಯ ಸೊಂಟದ ಮಟ್ಟಕ್ಕೆ ನೀರಿಗಿಳಿದ. ಭದ್ರಯ್ಯನನ್ನೂ ಕೈಹಿಡಿದು ನೀರಿಗೆ ಕರೆದುಕೊಂಡು ತನ್ನ ಬಳಿಯೇ ನಿಲ್ಲಿಸಿಕೊಂಡ.

ಹಾಗೆಯೇ ಸುಮಾರು ಐದು ನಿಮಿಷಕಾಲ ನಿಂತ ಬಳಿಕ ಲಚುಮಯ್ಯ-

" ಓಂ ನಮೋ ಭಗವತೇ ಫಟು ಸ್ವಾಹಾ "

ಎಂದು ಒಂದೊಂದು ತೊಟ್ಟು ನೀರು ತೆಗೆದುಕೊಂಡು ಮೂರು ಬಾರಿ ಕುಡಿದ.

ಅದೇ ರೀತಿಯ ' ಪಾಮಾಚಮನ 'ವನ್ನು ಭದ್ರಯ್ಯನೂ ಮಾಡಿದ.

ನಂತರ ಇಬ್ಬರೂ ಮೂರು ಮೂರು ಬಾರಿ ನೀರಿನಲ್ಲಿ ಮುಳುಗಿದರು.

ಲಚುಮಯ್ಯ ಆಕಾಶವನ್ನೇ ನೋಡುತ್ತಾ ಹೇಳತೊಡಗಿದ—

" ಓಂ ನಮೋ ಭಗವತೇ ಆದಿಶಾಕಿನಿ । ಸರ್ವಾಂತರ್ಯಾಮಿ । ಬಹು ಮುಖಿ ಶಕ್ತಿ ಮಹಮ್ಮಾಯಿ ।

ಸರ್ವಗಾತ್ರಿಣಿ । ತ್ರಿಲೋಕ ಸಂಚಾರಿ । ತ್ರಿಲೋಕ ಸುಂದರಿ । ಘನ ಶಾಕಿನಿ । ಓಂ ಶಂಶಂಶಂ ।

ಜಂ ಹಂ ಮಂ । ಫಟು ಸ್ವಾಹಾ ।

ಓಂ ನಮೋ ಭಗವತೇ ಫಟು ಸ್ವಾಹಾ ।"

ಅವನು ಹೇಳಿದಂತೆಯೇ ಭದ್ರಯ್ಯನೂ ಹೇಳಿದ.

ಹೀಗೆ ನೂರೆಂಟು ಸಾರಿ ಹೇಳಿ, ನೂರೆಂಟು ಸಾರಿ ನೀರಿನಲ್ಲಿ ಮುಳುಗು ಹಾಕಿ, ಇಬ್ಬರೂ ಮೇಲೆ ಬಂದರು. ಉಟ್ಟ ತೇವದ ಬಟ್ಟೆಯಲ್ಲಿಯೇ ಮನೆಯನ್ನು ಸೇರಿದ್ದಾಯಿತು. ಲಚುಮಯ್ಯ ನೇರವಾಗಿ ತನ್ನ ಪೂಜಾಮಂದಿರಕ್ಕೆ ಬಂದ. ಭದ್ರಯ್ಯನೂ ಅವನನ್ನು ಹಿಂಬಾಲಿಸಿದ.

ಲಚುಮಯ್ಯನು ಹೊಲೆಯನಾದರೂ ಇತರ ಹೊಲೆಯರಂತೆ ಅವನ ಮನೆ ಅಶುಚಿಯಾಗಿರಲಿಲ್ಲ. ಮನೆಯೂ, ಮನವೂ, ವಸ್ತು—ವಸ್ತ್ರಗಳೂ ಸಾಕಷ್ಟು ನಿರ್ಮಲವಾಗಿಯೇ ಇದ್ದವು. ಲಚುಮಯ್ಯ ಎಲ್ಲಿದ್ದರೂ ಸರಿಯೇ ದಿನಕ್ಕೆರಡು ಬಾರಿ ಸ್ನಾನ ಮಾಡಿ, ಚಂಡೀಪೂಜೆಯನ್ನು ಮುಗಿಸದೆ ಊಟ ಮಾಡುತ್ತಿರಲಿಲ್ಲ. ಉಜ್ವಲ ತಾಮಸಿಕ ರೀತಿಯಿಂದ ಆತ ಚಂಡೀ ಉಪಾಸನೆ ಕೈಗೊಂಡಿದ್ದರೂ ಅವನ ನಡತೆಯಲ್ಲಾಗಲಿ, ನುಡಿಯಲ್ಲಾಗಲಿ ತಾಮಸಿಕ ಪ್ರವೃತ್ತಿ ಇರಲಿಲ್ಲ. ತಮಃಪ್ರಧಾನವಾದ ಭಕ್ತಿಯುಳ್ಳ ಆತನಲ್ಲಿ ಪ್ರಚಂಡ

ಶಕ್ತಿಯೂ ಪರಮ ಶ್ರದ್ಧೆಯೂ ಸಮ್ಮಿಳನವಾಗಿತ್ತು.

ಚಂಡೀಪೂಜಾಮಂದಿರವನ್ನು ಲಚುಮಯ್ಯ ಪ್ರತ್ಯೇಕವಾಗಿಯೇ ಕಟ್ಟಿಕೊಂಡಿದ್ದ. ಮನೆಯ ಬಲಗಡೆಯ ಒಪ್ಪಾರಿಗೆ ಆತುಕೊಂಡಂತೆ ಕಟ್ಟಿದ ಆ ಚಿಕ್ಕಕೋಣೆಗೆ ಪ್ರತ್ಯೇಕವಾಗಿಯೇ ಬಾಗಿಲಿದ್ದಿತು. ಒಳಗಡೆ ಹೋದೊಡನೆ ಕಣ್ಣುಕೋರೈಸುವಂತೆ ಕಾಣುತ್ತಿದ್ದುದು ಉತ್ತರದಿಕ್ಕಿಗಭಿಮುಖವಾಗಿದ್ದ ಹೊಳೆಯುವ ಪ್ರಭಾವಳಿ. ಅದರ ನಡುವೆ ಭೈರವನಾಟ್ಯಶೀಲೆಯಾದ ಚಂಡಿ ನಾಲಿಗೆ ನೀಡಿಕೊಂಡು ನಗ್ನಳಾಗಿ ನಿಂತಿದ್ದಾಳೆ. ಬಗೆಬಗೆ ಹೂಗಳಿಂದ ಆ 'ಅಮ್ಮ'ನ ವಿಗ್ರಹಕ್ಕೆ ಲಚುಮಯ್ಯ ಅಲಂಕಾರ ಮಾಡಿದ್ದಾನೆ. ಬಳಿಯಲ್ಲೇ ತೂಗುಹಾಕಿರುವ ಅಗಲವಾದ ಹಣತೆಯಲ್ಲಿ ಎರಡು ದೀಪದ ಕುಡಿಗಳು ಒಂದನ್ನೊಂದನ್ನು ಹೆಣೆದುಕೊಂಡು ಉಜ್ವಲವಾಗಿ ಉರಿಯುತ್ತಿವೆ.

ಪೂಜಾ ಸಮಯದಲ್ಲಿ ಲಚುಮಯ್ಯ ಅನುಸರಿಸುವ ಕ್ರಮ ತೀರಾ ವಿಚಿತ್ರ........

ಕೋಣೆಯ ಬಾಗಿಲು ಹಾಕಿ, ದೇವಿಯ ಮುಂಗಡೆ ಇರುವ ಹಣತೆಯ ದೀಪವನ್ನು ಆರಿಸಿಬಿಡುತ್ತಾನೆ. ಸುತ್ತಲೂ ಕತ್ತಲಾಗುತ್ತದೆ. ತಾನೂ ಮೈಮೇಲಿನ ಬಟ್ಟೆಗಳನ್ನೆಲ್ಲಾ ಕಿತ್ತೆಸೆದು, ನಗ್ನನಾಗಿ ನಿಲ್ಲುತ್ತಾನೆ. ಅನಂತರ ಶಿಖಿಯನ್ನು ಕಟ್ಟಿ, ಮೊಣಕಾಲನ್ನು ಹಿಂದಕ್ಕೆ ಊರಿ, ದೇವಿಯ ಸನ್ನಿಧಿಯಲ್ಲಿ ಕುಳಿತು ಪುಷ್ಪಾರ್ಚನೆ ಆರಂಭಿಸುತ್ತಾನೆ. ಅದಕ್ಕೂ ಕೆಂಪು ಹೂವೇ ಬೇಕು.

ಇದು ಸಾಮಾನ್ಯ ಪೂಜೆ.

ಆಗಾಗ 'ಅಮ್ಮ'ನಿಗೆ ಮಹಾಪೂಜೆ ಮಾಡುವುದುಂಟು. ಅಂತಹ ದಿನಗಳಲ್ಲಿ ಲಚುಮಯ್ಯನಿಗೆ ದೊಡ್ಡ ಹಬ್ಬ !

ಮಹಾಪೂಜೆಯ ದಿನ ಲಚುಮಯ್ಯನ ಹೆಂಡತಿ ಚನ್ನಮ್ಮನೂ ತಲೆಗೆ ಸ್ನಾನಮಾಡಿ, ಶುಚಿರ್ಭೂತಳಾಗಿ, ಮಡಿವಸ್ತ್ರಗಳನ್ನುಟ್ಟು, ಹಣೆಗೆ ಅಗಲವಾಗಿ ಕುಂಕುಮವಿಟ್ಟು ಗಂಡನೊಡನೆ ಪೂಜಾಮಂದಿರಕ್ಕೆ ಬರುತ್ತಾಳೆ. ಲಚುಮಯ್ಯ ಪದ್ಧತಿಯಂತೆ ಕೋಣೆಯ ಬಾಗಿಲು ಹಾಕಿ, ಹಣತೆಯ ದೀಪವಾರಿಸುತ್ತಾನೆ. ಹೆಂಡತಿಯನ್ನು ಅತ್ಯಂತ ಭಕ್ತಿಯಿಂದ ದೃಷ್ಟಿಸಿ ನೋಡಿದ ಬಳಿಕ ಅವನ ಹೇಳಿಕೆಯಂತೆ, ಮೈಮೇಲೆ ತುಣುಕು ಬಟ್ಟೆಯೂ ಇಲ್ಲದೆ, ನಗ್ನಳಾಗಿ ಆಕೆ ನಿಲ್ಲುತ್ತಾಳೆ. ಲಚುಮಯ್ಯನೂ ತನ್ನ ಮೈಮೇಲಿನ ಬಟ್ಟೆಗಳನ್ನು ತೆಗೆದಿಟ್ಟು ಬೆತ್ತಲೆಯಾಗುತ್ತಾನೆ. ಅನಂತರ ನಿಸ್ಸಂಕೋಚವಾಗಿ, ನಿರ್ವಿಕಾರ

ವಾಗಿ ಹೆಂಡತಿಯ ಕೈಹಿಡಿದುಕೊಂಡು ದೇವಿಯ ಸನ್ನಿಧಿಗೆ ಬರುತ್ತಾನೆ. ಚಂಡಿಯ ವಿಗ್ರಹ ಕಾಣದಂತೆ ಅವಳನ್ನು ಪ್ರಭಾವಳಿಯಲ್ಲಿ ಕೂಡಿಸುತ್ತಾನೆ. ಆ ದಿನ ಚೆನ್ನಮ್ಮ ಅವನ ಪಾಲಿಗೆ ಸಾಮಾನ್ಯ ಹೆಂಗಸಲ್ಲ; ಆಕೆ ಸಾಕ್ಷಾತ್ ಚಂಡಿಯ ಅವತಾರ!

ಲಚುಮಯ್ಯ ಚಿತ್ತ್ರಲಿಯಾಗಿ ನಿಂತು, ಚಿತ್ತ್ರಲಿಯಾಗಿ ಕುಳಿತ ಹೆಂಡತಿಗೆ ಚಂಡಿಯ ಅವತಾರಿಣಿಗೆ – ಪೂಜೆ ಸಲ್ಲಿಸಲಾರಂಭಿಸುತ್ತಾನೆ. ಮೊದಲು ಸ್ವಲ್ಪ ಹೊತ್ತು ಕಿವಿಗಳು ಮುಚ್ಚುವಂತೆ ತಮಟೆಯ ಶಬ್ದ ಮಾಡುತ್ತಾನೆ. ಅನಂತರ ಅರುಣ ಪುಷ್ಪಾರ್ಚನೆ. ಅದು ಮುಗಿದ ಬಳಿಕ, ಹರಿದ್ರಾಕುಂಕುಮಾರ್ಚನೆ ಆರಂಭವಾಗುತ್ತದೆ. ಆ ಸಮಯದಲ್ಲಿ ಅವನು ತನ್ನ ಮನಸ್ಸು ತೃಪ್ತಿಯಾಗುವಷ್ಟು ಅರಿಶಿನ – ಕುಂಕುಮವನ್ನು ತೆಗೆದುಕೊಂಡು ಆಕೆಯ ಹಣೆಗೂ, ಕೆನ್ನೆಗೂ, ಎದೆಗೂ, ಸೊಂಟಕ್ಕೂ, ಪಾದಗಳಿಗೂ ಬಳಿಯುತ್ತಾನೆ. ಇದಾದ ಬಳಿಕ ಹಾಲುಮಡ್ಡಿಯ ಧೂಪ ಸಮರ್ಪಣೆಯಾಗುತ್ತದೆ.

ಪೂಜೆಯ ಹೆಸರಿನಲ್ಲಿ ಇಷ್ಟು ಮುಗಿದ ಮೇಲೆ, ನೈವೇದ್ಯ ಪ್ರಾರಂಭವಾಗುತ್ತದೆ. ಮದ್ಯ-ಮಾಂಸಗಳು ಯಥೇಚ್ಛವಾಗಿ 'ಅಮ್ಮ'ನಿಗೆ ಅರ್ಪಣೆಯಾಗುತ್ತವೆ. ಲಚುಮಯ್ಯ ಚಂಡಿಯ ಅವತಾರವೆಂದು ಆ ದಿನದ ಮಟ್ಟಿಗೆ ಭಾವಿಸಿದ ಚನ್ನಮ್ಮನಿಗೆ, ತಾನೇ ಮಾಂಸವನ್ನು ತಿನ್ನಿಸಿ, ಮದ್ಯವನ್ನು ಕುಡಿಸುತ್ತಾನೆ. ತಾನೂ ಅವಳೊಡನೆ ಕುಳಿತು, ತಿಂದು – ಕುಡಿಯುತ್ತಾನೆ. ಆ ಸಮಯದಲ್ಲಿ ಪರಸ್ಪರ ಎಂಜಲೆಂದಾಗಲಿ, ಗಂಡು – ಹೆಣ್ಣೆಂದಾಗಲಿ, ಮೇಲು—ಕೀಳೆಂಬುದಾಗಲಿ ಭೇಧವಿಲ್ಲ.

ಪೂಜೆಯೂ ನೈವೇದ್ಯವೂ ಆದಮೇಲೆ ಆಕೆಯನ್ನು ಸಂಭೋಗಿಸುತ್ತಾನೆ ಲಚುಮಯ್ಯ. ಆಕೆ ತೃಪ್ತಿಯಿಂದ ಸಂತೋಷಗೊಂಡು 'ಕಿಲಕಿಲ'ನೆ ನಕ್ಕಾಗಲೇ ಅವನಿಗೆ ಸಮಾಧಾನ; ಪೂಜೆ ಕ್ರಮವಾಗಿ ಸಾಂಗವಾಗಿ ನಡೆಯಿತೆಂದು ತೃಪ್ತಿ.

ಇಂತು ತಾಮಸಿಕ ವಿಧಾನದ 'ಮಹಾಪೂಜೆ' ಮುಕ್ತಾಯವಾಗುತ್ತದೆ. ಇದರಿಂದ ಲಚುಮಯ್ಯನಿಗೆ ನವಶಕ್ತಿ—ನವಚೇತನ ಬಂದಂತಾಗುತ್ತದೆ. ಯಾಗವನ್ನು ಯಶಸ್ವಿಯಾಗಿ ಪೂರೈಸಿದ ರಾಜಾಧಿರಾಜನಂತೆ ಲಚುಮಯ್ಯ ಶಾಂತಮಯನೂ, ನಿಶ್ಚಿಂತನೂ, ಹರ್ಷಚಿತ್ತನೂ ಆಗುತ್ತಾನೆ. ಇಂತಹ 'ಮಹಾಪೂಜೆ'ಯನ್ನು ಅವನು ವರ್ಷಕ್ಕೆ ನಾಲ್ಕು ಬಾರಿಗಿಂತ ಹೆಚ್ಚಾಗಿ ಆಚರಿಸುವುದಿಲ್ಲ. ಅತಿ ಯಾವಾಗಲೂ ಕೆಡುಕು; ಸದಾ ಮಿತಿಯನ್ನು

ಆಚರಿಸುವುದೇ ಒಳ್ಳೆಯದೆಂಬುದು ಅವನ ತತ್ವ.

ಪೂಜಾಮಂದಿರಕ್ಕೆ ಬಂದ ಲಚುಮಯ್ಯ ಎಂದಿನಂತೆ ಕೋಣೆಯ ಬಾಗಿಲು ಹಾಕಿದ. ಆದರೆ ದೇವಿಯ ಮುಂಗಡೆ ಇದ್ದ ಹಣತೆಯ ದೀಪವನ್ನು ಆರಿಸಲಿಲ್ಲ; ಅಲ್ಲದೆ ತಾನು ಬಟ್ಟೆಗಳನ್ನು ಕಳಚಿ ನಗ್ನನಾಗಲೂ ಇಲ್ಲ. ಆ ದಿನ ಸಲ್ಲಿಸಬೇಕಾಗಿದ್ದ 'ನಿತ್ಯಪೂಜೆ'ಯನ್ನು ಆತ ಈಗಾಗಲೇ ಸಲ್ಲಿಸಿದ್ದರಿಂದ, ಮತ್ತೊಮ್ಮೆ ಕ್ರಮಾನುಸರಣೆಯ ಅಗತ್ಯವಿರಲಿಲ್ಲ.

ಲಚುಮಯ್ಯನೂ ಭದ್ರಯ್ಯನೂ ದೇವಿಯ ಬಳಿ ಎದುರು ಬದುರಾಗಿ ಮಣೆಗಳ ಮೇಲೆ ಕುಳಿತರು. ಪೂಜಾ ಸಾಮುಗ್ರಿಗಳನ್ನೆಲ್ಲಾ ಮೊದಲೇ ಸಿದ್ಧಪಡಿಸಿಟ್ಟದರಿಂದ ಲಚುಮಯ್ಯ ಭದ್ರಯ್ಯನ ಕೈಯ್ಯಲ್ಲಿ 'ಷೋಡಶೋಪಚಾರ ಪೂಜೆ'ಯನ್ನು ಸಾವಧಾನವಾಗಿ ಮಾಡಿಸಿದ. ಅನಂತರ ದೇವಿಗೆ ದೀರ್ಘದಂಡ ನಮಸ್ಕಾರ ಮಾಡಿ, ಇಬ್ಬರೂ ಹೊರಬಂದು, ಮನೆಸೇರಿ, ಬಟ್ಟೆ ಬದಲಿಸಿಕೊಂಡರು.

ಆ ಅವೇಳೆಯಲ್ಲಿ ಇನ್ನೂ ಎಚ್ಚರವಾಗಿದ್ದ ಚನ್ನಮ್ಮ ಇಬ್ಬರಿಗೂ ಊಟಕ್ಕೆ ಬಡಿಸಲು ತಣಿಗೆ ಹಾಕಿದಳು. ಹೊಲೆಯನಾದ ಲಚುಮಯ್ಯನ ಮನೆಯಲ್ಲಿ ಊಟಮಾಡಲು ಭದ್ರಯ್ಯ ಹಿಂದುಮುಂದು ನೋಡಿದ. ಅವನ ಅನುಮಾನವನ್ನು ಕಂಡು—

"ಜಾತಿ ಕೆಟ್ಹೋಯ್ತದೆ ಅಂತ ಚಿಂತೇನಾ ಭದ್ರಯ್ಯ? 'ಅಮ್ಮ'ನ ಕಣ್ಣಾಗ ನಾವೆಲ್ಲಾ ಒಂದೇ ಕಣಪ್ಪ. ಇಷ್ಟರಮೇಗೆ ನಿನಗೆ ಬಲವಂತವೇನೂ ನಾವು ಮಾಡಾಕಿಲ್ಲ. ಮನಸ್ಸಿದ್ದರೆ ಸಂತೋಸವಾಗಿ ಉಣ್ಣು; ಇಲ್ದಿದ್ರೆ ಬ್ಯಾಡ."

ಎಂದ ಲಚುಮಯ್ಯ. ಭದ್ರಯ್ಯ ತನ್ನ ನಡವಳಿಕೆಗಾಗಿ ನಾಚಿಕೆಪಟ್ಟು, ಲಚುಮಯ್ಯನ ಪಕ್ಕದಲ್ಲಿಯೇ ಕುಳಿತು ಊಟ ಮುಗಿಸಿದ. ಅನಂತರ ಇಬ್ಬರೂ ಹೊರ ಅಂಗಳದಲ್ಲಿ ಮಲಗಿ ನಿದ್ರಿಸಿದರು.

ಮರುದಿನ ಬೆಳಗ್ಗೆ ಹೊರಟು ನಿಂತ ಭದ್ರಯ್ಯ. ಪ್ರತಿದಿನವೂ ಸ್ನಾನ ಮಾಡಿ, ಶುಚಿರ್ಭೂತನಾಗಿ, ಹಿಂದಿನ ರಾತ್ರಿ ಹೇಳಿಕೊಟ್ಟ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕೆಂದೂ, ಹೀಗೆ ನಲವತ್ತೆಂಟು ದಿನಗಳಕಾಲ ತಪ್ಪದೆ ಮಾಡಿದರೆ, ದುರ್ಗಿಯ ಪರಿಚಾರಿಕೆಯಾದ 'ಶಾಕಿನಿ'ಯು ಒಲಿಯುತ್ತಾಳೆಂದೂ ಲಚುಮಯ್ಯ ವಿವರಿಸಿ ಹೇಳಿದ. ಅಪರರಾತ್ರಿಯಲ್ಲಿ ಮಾತ್ರ

ತೃಪ್ತಿಯಾಗುವಂತೆ ಏಕಾಂತ ಪೂಜೆಮಾಡಿ, 'ಶಾಕಿನಿ'ಯನ್ನು ಕರೆದು ಇಷ್ಟಾರ್ಥಗಳನ್ನು ಸಿದ್ಧಿಸಿಕೊಳ್ಳಬೇಕೆಂಬ ಸಂಗತಿಯನ್ನೂ ಆತ ಹೇಳದಿರಲಿಲ್ಲ.

ಲಚುಮಯ್ಯನ ಮಾತುಗಳನ್ನು ಮೆಲುಕು ಹಾಕುತ್ತಾ ಬೆಂಗಳೂರು ಸೇರಿದ. ಅಂದಿನಿಂದ ನಲವತ್ತೆಂಟು ದಿನಗಳ ಪೂಜೆಯನ್ನೂ, ಮಂತ್ರ ಜಪವನ್ನೂ ಶ್ರದ್ಧೆಯಿಂದ ಮಾಡಿದ. 'ಶಾಕಿನಿ' ಒಲಿದಳು. ಅವನ ಆಸೆ ನೆರವೇರಿತು. ಭದ್ರಯ್ಯ ಆನಂದದಿಂದ ಕುಣಿದಾಡಿದ.

ಮನೆಯ ಮುಂದೆ, 'ಶಕ್ತಿ ಪೂಜಾ ಮಂದಿರ' ಎಂದು ದಪ್ಪಕ್ಷರಗಳಲ್ಲಿಯೂ, ಅದರ ಕೆಳಗಡೆ 'ಇಲ್ಲಿ ಸರ್ವಸಿದ್ಧಿ ಯಂತ್ರ, ಇಷ್ಟಸಿದ್ಧಿಯಂತ್ರ ಸಿಕ್ಕುತ್ತದೆ. ಮದ್ದು ಮಾಟ ಇಳಿಸುತ್ತೇವೆ' ಎಂದು ದಪ್ಪಕ್ಷರಗಳಲ್ಲಿಯೂ ಬರೆದಿದ್ದ ಹಲಗೆಯನ್ನು ತೂಗುಹಾಕಿದ ಮೇಲೆ ಭದ್ರಯ್ಯನ ಅದೃಷ್ಟವೇ ಬದಲಾಯಿತು. ಅವನ ಮನೆಯಲ್ಲಿ ಧನ – ಧಾನ್ಯಗಳ ವೃಷ್ಟಿಯೇ ಸುರಿಯಿತು.

ಮಗನ ಉತ್ಕರ್ಷವನ್ನು ಕಂಡು ತಾಯಿ, ಎರಡನೆಯ ಮದುವೆಯಾಗಲು ಭದ್ರಯ್ಯನನ್ನು ಪುಸಲಾಯಿಸತೊಡಗಿದಳು. 'ಶಾಕಿನಿ'ಯ ನೆರವಿನಿಂದ ಬೇಕಾದ ಹೆಣ್ಣನ್ನು ಒಲಿಸಿಕೊಂಡು, ಮನಸಾರೆ ಸುಖಿಸಲು ಸಾಧ್ಯವಿರುವಾಗ, 'ಹೆಂಡತಿ' ಎನ್ನಿಸಿಕೊಂಡ ಒಂದೇ ಹೆಣ್ಣಿಗೆ ಏಕೆ ಜೋತು ಬೀಳಬೇಕು? ಎಂದು ಯೋಚಿಸಿ, ತಾಯಿಯ ಮಾತಿಗೆ ತಲೆದೂಗದೆ, ದ್ವಿತೀಯ ವಿವಾಹ ವನ್ನು ನಿರಾಕರಿಸಿದ ಭದ್ರಯ್ಯ. ಮಗನ ಶಕ್ತಿಯನ್ನರಿತ ತಾಯಿ ಹೆಚ್ಚು ಬಲವಂತ ಮಾಡದೆ ಸುಮ್ಮನಾದಳು.

ಅಂದಿನಿಂದ ಭದ್ರಯ್ಯನ ಕಣ್ಣು ಕಂಡಕಂಡ ಹೆಣ್ಣುಗಳ ಮೇಲೆಲ್ಲಾ ಹರಿದಾಡಿತು. ಬಯಸಿದ ಕನ್ಯೆಯನ್ನು 'ಶಾಕಿನಿ' ಅವನ ಹಾಸಿಗೆಗೆ ಎಳೆ ತಂದು ಒಪ್ಪಿಸುತ್ತಿದ್ದಳು. ಹಾಗೆ ಬರುತ್ತಿದ್ದವಳಿಗೆ ಕೇಳಿದಷ್ಟು ಹಣ ಭದ್ರಯ್ಯನ ಬೊಕ್ಕಸದಿಂದ ದೊರೆಯುತ್ತಿತ್ತು. ಇದರಿಂದಾಗಿ ಅವನ ಬೊಕ್ಕಸ ಬರಿದಾಗುತ್ತಿದ್ದುದರಲ್ಲಿ ಆಶ್ಚರ್ಯವಿರಲಿಲ್ಲ. ಅದನ್ನು ತುಂಬ ಲೋಸುಗ ಭದ್ರಯ್ಯ ಎಂತಹ ನೀಚಕಾರ್ಯಕ್ಕಾದರೂ–ಪಾಪ ಕೆಲಸಕ್ಕಾದರೂ ಸಿದ್ಧನಾಗುತ್ತಿದ್ದ. ಸದಾ ಅವನ ನೆರವಿಗೆ 'ಶಾಕಿನಿ' ಇದ್ದೇ ಇದ್ದಳು!

ಹೀಗಿರುವಲ್ಲಿ, ಒಂದು ದಿನ ನೆರೆಮನೆಯ ವೆಂಕಟೇಶಯ್ಯನ ಪತ್ನಿ ನರಸಮ್ಮ ಭದ್ರಯ್ಯನ ಕಣ್ಣಿಗೆ ಬಿದ್ದಳು. ಆಕೆಯೇನೂ ತುಂಬಾ ಸುಂದರಿ ಯಾಗಿರಲಿಲ್ಲ. ಆಗಲೇ ನಾಲ್ಕು ಮಕ್ಕಳ ತಾಯಿಯಾಗಿದ್ದುದರಿಂದ, ಅವಳ

ಮೈಯ್ಯಲ್ಲಿ ಯೌವ್ವನದ ಆಕರ್ಷಣೆಯೂ ಇರಲಿಲ್ಲ. ಅಲ್ಲದೆ ವೆಂಕಟೇಶಯ್ಯನಿಗೆ ಬಂದ ದುರ್ದೆಶೆಯು – ಬಡತನದಿಂದಾಗಿ ನರಸಮ್ಮ ತುಂಬಾ ಸೊರಗಿ ಹೋಗಿದ್ದಳು. ಆದರೂ ಭದ್ರಯ್ಯ ಅವಳನ್ನು ಬಯಸಿದ್ದ.

'ಶಾಕಿನಿ'ಯ ನೆರವಿನಿಂದ 'ವಶೀಕರಣ'ಮಾಡಿ, ನರಸಮ್ಮನನ್ನು ಒಲಿಸಿಕೊಳ್ಳುವುದು ಬಹು ಸುಲಭವಾಗಿತ್ತು. ಆದರೆ ಅವಳು ನೆರೆಮನೆಯವಳು; ಗಂಡನೊಂದಿಗೂ – ಮಕ್ಕಳೊಂದಿಗೂ ಸಂಸಾರ ಮಾಡುತ್ತಿರುವವಳು. ಅಂತಹವಳನ್ನು ಒಮ್ಮಿಂದೊಮ್ಮೆಗೇ ತನ್ನೆಡೆಗೆ ಸೆಳೆದುಕೊಂಡರೆ ನೆರೆಹೊರೆಯವರು ತನ್ನ ಬಗ್ಗೆ ತೀರ ಕೆಟ್ಟ ಅಭಿಪ್ರಾಯವನ್ನು ಹೊಂದುತ್ತಾರೆ. ಅವರೊಡನೆ ದ್ವೇಷಕಟ್ಟಿಕೊಳ್ಳುವುದು ಯಾವ ವಿಧದಿಂದಲೂ ಸರಿಯಲ್ಲವೆಂಬುದು ಭದ್ರಯ್ಯನ ಅಭಿಪ್ರಾಯ. ಎಂತಲೇ ಆತ 'ವಶೀಕರಣ' ಪ್ರಯೋಗ ಮಾಡದೆ, ವೆಂಕಟೇಶಯ್ಯನ ಸ್ನೇಹಮಾಡಿ, ನರಸಮ್ಮನನ್ನು ಕೂಡುವ ಹಂಚಿಕೆ ಹಾಕಿದ್ದ.

'ಹೇಗಿದ್ದರೂ ವೆಂಕಟೇಶಯ್ಯ ತೀರ ಬಡತನದಲ್ಲಿದ್ದಾನೆ. ಅವನು ಪಡುತ್ತಿರುವ ಕಷ್ಟ, ಅನುಭವಿಸುತ್ತಿರುವ ನರಕ—ಅವನಿಗೇ ಜೀವನದಲ್ಲಿ ಜಿಗುಪ್ಸೆ ಹುಟ್ಟಿಸಿದೆ. ಇಂತಹ ಸಮಯದಲ್ಲಿ ಅವನಿಗೆ ತಾನು ಸಹಾಯ್ಯ ಮಾಡಿ, ಅವನೂ–ಅವನ ಹೆಂಡತಿಯೂ ತನಗೆ ಕೃತಜ್ಞರಾಗುವಂತೆ ಮಾಡಬಹುದು. ಆ ಕೃತಜ್ಞತೆಯಿಂದಲೇ ಸಲಿಗೆ ಬೆಳೆಸಿ, ನರಸಮ್ಮನೆಡೆಗೆ 'ಕಾಂಚನ ಪ್ರವಾಹ' ಹರಿಸಿ ಅವಳನ್ನು ತನ್ನೆಡೆಗೆ ಸೆಳೆದುಕೊಳ್ಳಬಹುದು. 'ಕಾಂಚಾಣಂ ಕಾರ್ಯ ಸಿದ್ಧಿಃ' ಅಲ್ಲವೇ ?'

ಭದ್ರಯ್ಯನ ಮನಸ್ಸು ತರ್ಕಬದ್ಧವಾಗಿ ಯೋಚಿಸಿತು. ತನ್ನ ಬುದ್ಧಿವಂತಿಕೆಗಾಗಿ ತಾನೇ ಮೆಚ್ಚಿ 'ಭೇಷ್' ಎಂದುಕೊಂಡಿದ್ದ. ತನ್ನ ಯೋಚನೆಯನ್ನು ಕಾರ್ಯಗತಮಾಡಲೆಂದೇ ಮರುದಿನ ವೆಂಕಟೇಶಯ್ಯನಿಗಾಗಿಯೇ ಕಾಯುತ್ತಾ ತನ್ನ ಮನೆಯ ಮುಂಗಡೆಯ ಪುಟ್ಟ ಜಗುಲಿಯ ಮೇಲೆ ಕುಳಿತ.

ನಿರೀಕ್ಷಣೆಯಂತೆ, ಬಾಡಿದ ಮುಖದ ವೆಂಕಟೇಶಯ್ಯ ಬಂದೇ ಬಂದ. ಭದ್ರಯ್ಯ ಅವನನ್ನು ಒಳಗೆ ಕರೆದು, ಹಣ್ಣು–ಸಕ್ಕರೆ ಕೊಟ್ಟು ಉಪಚರಿಸಿ, ಅವನ ದುರ್ದೆಸೆಯ ದಾರುಣ ಕಥೆಯನ್ನು ಕೇಳಿ ತಿಳಿದುಕೊಂಡ. ವೆಂಕಟೇಶಯ್ಯನ ಸರ್ವಕಷ್ಟಗಳನ್ನೂ ಪರಿಹರಿಸುವ ಶಕ್ತಿ ತನಗಿದೆಯೆಂಬಂತೆ

ಮಾತನಾಡಿ, ಹೆಮ್ಮೆಯಿಂದ ಮೀಸೆಯಮೇಲೆ ಕೈಯಾಡಿಸಿದ.

ಸ್ವಲ್ಪ ಹೊತ್ತಿನ ಬಳಿಕ ಭದ್ರಯ್ಯನ ಆಜ್ಞೆಯಂತೆ, ಅವನ ತಾಯಿ ಕೈಚೀಲದಲ್ಲಿ ನಾಲ್ಕು ಸೇರು ಅಕ್ಕಿ ಹಾಕಿ ತಂದುಕೊಟ್ಟಳು.

"ಇದೆಲ್ಲಾ ಏಕೆ ಭದ್ರಯ್ಯನವರೆ? ಬಡವನ ಮೇಲೆ ಋಣ ಹೊರಿ ಸುತ್ತಿದ್ದೀರಿ"

"ಪರವಾಕಿಲ್ಲ ತಕ್ಕೊಳ್ಳಿ ಸ್ವಾಮಿ....ಇಷ್ಟಕ್ಕೇ ಆಗೋಯ್ತಾ!.... ಇನ್ನಾ ಸ್ಯಾನೆ ಸ್ಯಾನೆ ಅದೆ!!"

ವೆಂಕಟೇಶಯ್ಯ ಕಣ್ಣುಗಳಲ್ಲಿ ಕೃತಜ್ಞತೆ ಸೂಚಿಸುತ್ತಾ, ಅಕ್ಕಿಯ ಕೈ ಚೀಲವನ್ನು ತೆಗೆದುಕೊಂಡ.

ಭದ್ರಯ್ಯ ತನ್ನ ಜೇಬಿನಿಂದ ಹತ್ತುರೂಪಾಯಿಗಳ ಐದು ನೋಟು ಗಳನ್ನು ಹೊರತೆಗೆದು—

"ಕೊಳ್ಳಿ ಸ್ವಾಮಿ. ಮಡೀಕೊಳ್ಳಿ. ಮನೆ ಬಾಡಿಗೆ, ಹಾಲು-ಮೊಸರು ಸಾಡೆಯೋರ ಸಾಲ ತೀರಿಸಿಕೊಳ್ಳಿ"

ಭದ್ರಯ್ಯನ ಔದಾರ್ಯವನ್ನು ಕಂಡು, ಅದರ ಹಿನ್ನಲೆಯನ್ನು ಅರಿಯದ ವೆಂಕಟೇಶಯ್ಯ ಮೂಕನಾದ. ಸಂಕೋಚದಿಂದ ಸಾವಧಾನವಾಗಿ ಕೈಚಾಚಿ ಅವನು ಕೊಟ್ಟ ಹಣವನ್ನು ತಗೆದುಕೊಂಡ.

"ಇನ್ನೇನೂ ಯಥೆ ಬೀಳ್ಬೇಡಿ ಸ್ವಾಮಿ. ಇನ್ನೆಂಟು ದಿನದೊಳಗಾಗಿ ನಿಮ್ಮ ಅದೃಷ್ಟಾನೇ ಕುಲಾಯಿಸ್ತದೆ. ಮೊದಲಿದ್ದಂಗೆ ಆಯ್ತೀರಿ!"

"ನಿಜವೇ ಭದ್ರಯ್ಯನವರೇ?"

"ನನ್ ಮಾತು ಸುಳ್ಳಾಯ್ತದ ಎಂದಾನ?"

"ನಿಮ್ಮ ಬಾಯಿ ಹರಕೆ ನಿಜವಾಗಲಿ ಭದ್ರಯ್ಯನವರೆ. ಆ ಕಲ್ಲು ದೇವರಿಗೆ ಒಡೆಯುವ ತೆಂಗಿನಕಾಯಿ ನಿಮಗೇ ಒಡೆದು ಅಡ್ಡ ಬೀಳುತ್ತೇನೆ"

"ಸ್ಯಾನೆ ದೊಡ್ಡ ಮಾತು ಸ್ವಾಮಿ"

"ನಿಮ್ಮಂಥ ದೊಡ್ಡವರಿಗೆ ದೊಡ್ಡಮಾತೇ ಸರಿ. ಅದರಲ್ಲೇನು ತಪ್ಪು?" ಎಂದ ವೆಂಕಟೇಶಯ್ಯ.

ಅಷ್ಟರಲ್ಲಿ ಭದ್ರಯ್ಯನನ್ನು ಹುಡುಕಿಕೊಂಡು ಗಿರಾಕಿಯೊಬ್ಬನು ಬಂದು ದರಿಂದ ವೆಂಕಟೇಶಯ್ಯ ನಮಸ್ಕಾರ ಹೇಳಿ, ತನ್ನ ಮನೆ ಸೇರಿದ.

ಸ್ವಲ್ಪಹೊತ್ತಿಗೆ ಮುಂಚೆ ಮನೆಯಿಂದ ಹೊರಟ ತನ್ನ ಗಂಡ, ಅಷ್ಟು

ಬೇಗನೆ ಹಿಂತಿರುಗಿದುದನ್ನು ಕಂಡು ನರಸಮ್ಮನಿಗೆ ತುಸು ಆಶ್ಚರ್ಯವೇ ಆಯಿತು. ಅಲ್ಲದೆ, ವೆಂಕಟೇಶಯ್ಯ ಅಕ್ಕಿಯನ್ನೂ, ಐವತ್ತು ರೂಪಾಯಿಗಳನ್ನೂ ಹೆಂಡತಿಯ ಮುಂದೆ ಇಟ್ಟಾಗ, ನರಸಮ್ಮ ಬೆರಗಾದಳು.

" ತೊಗೋ ಈ ಮೂವತ್ತು ರೂಪಾಯಿ. ಹಾಲು – ಮೊಸರಿನವರ ಸಾಲ ಮೊದಲು ತೀರಿಸಿಬಿಡು. ಸೌದೆ ಅಂಗಡಿಯವನಿಗೆ ಏನು ಕೊಡಬೇಕೋ ಅದನ್ನು ಕೊಟ್ಟುಬಿಡು. ಇನ್ನೂ ದುಡ್ಡು ಮಿಕ್ಕರೆ, ಮನೆಗೆ ಬೇಕಾದ ಸಾಮಾನು ಕೊಂಡುಕೋ....ಈ ಇಪ್ಪತ್ತು ರೂಪಾಯಿಯನ್ನು ಬಾಡಿಗೆಯವನಿಗೆ ಕೊಟ್ಟು, ಬಾಕಿ ತೀರಿಸಿಬಿಡುತ್ತೇನೆ......."

ಅದುವರೆಗೂ ಮೂಕಳಾಗಿ ಕುಳಿತಿದ್ದ ನರಸಮ್ಮ—

" ಸದ್ಯ, ದೇವರು ನಮ್ಮ ಕೈಬಿಡಲಿಲ್ಲ....!"

ಎನ್ನುತ್ತಾ ಸಂತೋಷದಿಂದ—'ದೇವರ ಮಹಿಮೆ'ಗೆ ಕೃತಜ್ಞತೆ ಸೂಚಿಸಿ, ನಿಟ್ಟುಸಿರಿಟ್ಟಳು. ಆದರೆ ವೆಂಕಟೇಶಯ್ಯ—

" ದೇವರೇನು ಮಾಡುತ್ತಾನೆಯೋ ?....ಅವನೊಂದು ಕೈಲಾಗದ ಕಲ್ಲುಬೊಂಬೆ "

ಎಂದು ತಿರಸ್ಕಾರದ ದನಿಯಲ್ಲಿ ನುಡಿದನು. ಜಿಗುಪ್ಸೆ ಪಡಿಸಿದ್ದ ಕೆಟ್ಟ ಬಡತನ ಅವನ ಬಾಯಲ್ಲಿ ಆ ಮಾತು ಆಡಿಸಿತ್ತು.

ನರಸಮ್ಮನಿಗೇಕೋ ಗಂಡನ ಮಾತು ಸಹಿಸಲಿಲ್ಲ. ಆಕೆ ಒಂದು ಕ್ಷಣ ಅವನೆಡೆಗೆ ಕ್ರುದ್ಧ ದೃಷ್ಟಿಯನ್ನು ಬೀರಿ, ಅನಂತರ, ಅವನ ಅಪಚಾರದ ಮಾತಿಗಾಗಿ ತಾನು ಮೂರುಸಾರಿ ಗಲ್ಲಬಡಿದುಕೊಂಡಳು.

" ಇದೇನು ಹುಚ್ಚಿ ನರಸಾ ನೀನು ?....ಇನ್ನೂ 'ದೇವರು – ದೇವರು' ಅಂತ ಹೊಡೆದುಕೊಳ್ಳುತ್ತೀ !"

" ಸುಮ್ಮನಿರೀಂದ್ರೆ ಹಾಗನ್ನಬೇಡಿ "

" ದೇವರಿದ್ದಿದ್ದರೆ ನಮ್ಮ ಕಷ್ಟ ನೋಡಿಕೊಂಡು ಸುಮ್ಮನಿರುತ್ತಿದ್ದನೇನೇ ? ದೇವರಿಲ್ಲವೇ ಇಲ್ಲ ಕಣೆ ನರಸಾ....ಎಲ್ಲಾ ಬರಿಯ ಭ್ರಾಂತಿ !"

" ಬಿಡ್ತುಅನ್ನಿ....ದೇವರಿಲ್ಲದೆ—ಅವನು ಕೊಡದೆ, ಇವೆಲ್ಲಾ ಇಲ್ಲಿಗೆ ಬಂತೇನು ?"

ಎದುರಿಗಿದ್ದ ಅಕ್ಕಿಯನ್ನೂ ಹಣವನ್ನೂ ತೋರಿಸುತ್ತಾ ನರಸಮ್ಮ ಕೇಳಿದಳು.

" ಇದನ್ನು ದೇವರು ಕೊಟ್ಟ ಅಂತ ತಿಳಿದುಕೊಂಡೆಯಾ ? ಅದಕ್ಕೇ ನಿನ್ನ ಹುಚ್ಚಿ ಅಂದದ್ದು !"

ವೆಂಕಟೇಶಯ್ಯ ಘೊಳ್ಳನೆ ನಕ್ಕ.

" ಮತ್ತೆ........ ?"

" ದೇವರಲ್ಲ ಕಣೆ....ಭದ್ರಯ್ಯ ಕೊಟ್ಟ....ಪಕ್ಕದ ಮನೆಯ ಭದ್ರಯ್ಯ ನಿಲ್ಲವೆ—ಅವನು ಕೊಟ್ಟ !"

ನರಸಮ್ಮ ಮೌನವಾದಳು. ಭದ್ರಯ್ಯನ ಹೆಸರು ಕಿವಿಗೆ ಬಿದ್ದೊಡನೆ, ಹೆಣ್ಣು, ಹೆಂಡ, ' ಶಾಕಿನಿ ' ಪೂಜೆ—ಅವಳ ಕಣ್ಮುಂದೆ ಸುಳಿಯಿತು. ನೆರೆ ಹೊರೆಯವರ ಪಿಸುಮಾತುಗಳಿಂದ ಅವನ ವಿಷಯವಾಗಿ ಅನೇಕ ಸಂಗತಿ ಗಳನ್ನು ತಿಳಿದಿದ್ದ, ಕಣ್ಣಾರೆ ಅವನ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮ ನಿಸಿದ್ದ ನರಸಮ್ಮನಿಗೆ, ಭದ್ರಯ್ಯನ ಸಹಾಯದ ಹಿಂದೆ ಅಡಗಿರುವ ದುರು ದ್ದೇಶವನ್ನು ಅರಿಯಲು ಬಹಳ ಹೊತ್ತಾಗಲಿಲ್ಲ. ಆದರೆ ತನ್ನ ಊಹೆ ತಪ್ಪೇನೋ ಎಂದು ಆಕೆಗೆ ಶಂಕೆ. ಏಕೆಂದರೆ, ತಾನು ರೂಪವತಿಯಲ್ಲ ; ಕಪ್ಪು ಬಣ್ಣದ ಮೊದ್ದು ಬೊಂಬೆ. ಯೌವ್ವನದಲ್ಲಿ ಎಲ್ಲ ಹೆಣ್ಣು ಮಕ್ಕಳಂತೆ ತಾನೂ ಆಕರ್ಷಣೀಯವಾಗಿದ್ದೆನೇನೋ ! — ಆದರೆ ಈಗ ಆ ಯೌವ್ವನವೂ ಇಲ್ಲ ; ಆಕರ್ಷಣೆಯೂ ಇಲ್ಲ. ನಾಲ್ಕು ಮಕ್ಕಳನ್ನು ಹೆತ್ತು, ಮೈ ಹುರುಡು ಮಾಯವಾಗಿ, ಬರಿಯ ಮೂಳೆಯ ಹಂದರವಾಗಿದ್ದೇನೆ. ಎಂದಮೇಲೆ ಭದ್ರಯ್ಯ ತನ್ನನ್ನು ಆಶಿಸುವ ದುರುದ್ದೇಶವಿಟ್ಟುಕೊಂಡಿರುವುದು ನಿಜವೆ ?

ನರಸಮ್ಮನಿಗೆ ಏನೊಂದೂ ಬಗೆ ಹರಿಯಲಿಲ್ಲ. ಆಕೆ ಸಂದೇಹದಿಂದಲೇ ಒಳಗೆ ನಡೆದಳು. ವ್ಯಾಕುಲಗೊಂಡ ಮನಸ್ಸು ಅವಳು ದೃಢವಾಗಿ ನಂಬಿದ್ದ ದೇವರ ಬಳಿಗೆ ಕರೆದೊಯ್ದಿತು. 'ಗಿರಿಜಾ ಶಂಕರ'ನ ಭಾವಚಿತ್ರಕ್ಕೆ ನಮಿಸಿ, ನೀಲಾಂಜನ ಹಚ್ಚಲು ಎಣ್ಣೆಯ ಸೀಸೆಯ ಕಡೆಗೆ ನೋಡಿದಳು ನರಸಮ್ಮ. ಅನ್ನಕ್ಕೇ ಗತಿಯಿಲ್ಲದ ಆ ದರಿದ್ರಮನೆಯಲ್ಲಿ ಎಣ್ಣೆ ಎಲ್ಲಿಂದ ಬರಬೇಕು ?

ನರಸಮ್ಮನ ಕಣ್ಣು ಹನಿಯಿಟ್ಟಿತು. ಆಕೆ ಹಾಗೆಯೇ ಕುಸಿದು ' ಗಿರಿಜಾ ಶಂಕರ 'ನ ಭಾವ ಚಿತ್ರದೆದುರು ಮೌನವಾಗಿ ಕುಳಿತು ಬಿಟ್ಟಳು. ಶಾಲೆಗೆ ಹೋಗಿದ್ದ ಮೂರು ಮಕ್ಕಳು ಮಧ್ಯಾಹ್ನದ ವಿರಾಮ ಸಮಯದಲ್ಲಿ ಮನೆಗೆ ಬಂದು, ತಾಯಿಯನ್ನು ಕೂಗಿದಾಗಲೇ ನರಸಮ್ಮನಿಗೆ ಎಚ್ಚರ. ಅಷ್ಟರಲ್ಲಿ ತೊಟ್ಟಿಲಲ್ಲಿದ್ದ ಕೈಗೂಸು ಎಚ್ಚೆತ್ತು ಅಳುತ್ತಾ ಅವಳನ್ನು ತನ್ನ

ಬಳಿಗೆ ಕರೆಯಿತು. ನರಸಮ್ಮ ಕುಳಿತಲ್ಲಿಂದ ಎದ್ದು ಹೋದಳು. ಸಂದೇಹ ದಿಂದ ತೊಳಲಾಡುತ್ತಿದ್ದ ಅವಳ ಮನಸ್ಸು ಇನ್ನೂ ಸಮಾಧಾನಗೊಂಡಿರಲಿಲ್ಲ.

ಆ ರಾತ್ರಿ ಮಕ್ಕಳೆಲ್ಲಾ ಮಲಗಿದಮೇಲೆ, ನರಸಮ್ಮ ತನ್ನ ಸಂದೇಹ ವನ್ನು ಸೂಕ್ಷ್ಮವಾಗಿ ಗಂಡನ ಮುಂದಿಟ್ಟಳು.

" ಭದ್ರಯ್ಯನ ಸಾಲ ಬೇರೆ ನಮ್ಮ ತಲೆಯಮೇಲೆ ಹೇರಿಕೊಂಡಿತು "

" ಅದು ಸಾಲ ಅಲ್ಲಕಣೆ "

" ಮತ್ತೆ.... ?"

" ನಮ್ಮ ಬಡತನ ನೋಡಿ ಅವನು ಸುಮ್ಮನೆ ಕೊಟ್ಟ ಕಣೆ "

" ಸುಮ್ಮಸುಮ್ಮನೆ ಈ ಕಾಲದಲ್ಲಿ ಯಾರಾದರೂ ಇಷ್ಟೊಂದು ಧಾರಾಳ ತೋರಿಸುತ್ತಾರೆಯೇ ಅಂದ್ರೆ ?"

" ಭದ್ರಯ್ಯನ ವಿಷಯ ನಿನಗೇನು ಗೊತ್ತು ನರಸಾ ? ಅವನ ಮನಸ್ಸು ತುಂಬಾ ದೊಡ್ಡದು. ದುಡ್ಡು–ಕಾಸು, ದವಸ–ಧಾನ್ಯ ಅವನ ಮನೆಯಲ್ಲಿ ತುಂಬಿ ತುಳುಕಾಡುತ್ತಿದೆ. ಬಡವರನ್ನು ಕಂಡರೆ, ಬ್ರಾಹ್ಮಣರನ್ನು ಕಂಡರೆ ' ಅಯ್ಯೋ ' ಎನ್ನುತ್ತಾನೆ........ "

" ಅವನು ' ಅಯ್ಯೋ ' ಅನ್ನುವುದು ಇರಲೀಂದ್ರೆ. ಇನ್ನೊಬ್ಬರನ್ನೂ ' ಅಯ್ಯೋ ' ಅನ್ನಿಸುತ್ತಾನೆ ! ಅವನ ವಿಚಾರ ನಿಮಗಿನ್ನೂ ತಿಳಿಯದು. ಮೂರು ಹೊತ್ತೂ ಮನೆಯಲ್ಲಿರುವ ಹೆಣ್ಣು ಹೆಂಗಸು ನಾನು ನೋಡು ತ್ತಿದೇನಲ್ಲಾ........ನೀವು ಅವನ ಮನಸ್ಸು ಎಷ್ಟು ದೊಡ್ಡದು ಅಂತೀರೋ ಅಷ್ಟೇ ಚಿಕ್ಕದು !"

" ಅದು ಹೇಗಾದರೂ ಇರಲಿ ನರಸಾ .... ನಾವಂತೂ ಬಡವರು. ಇನ್ನೊಬ್ಬರ ವಿಷಯವಾಗಿ ಕೆಟ್ಟಮಾತಾಡಿ ನಾವು ಬದುಕುವುದಕ್ಕಾಗು ತ್ತದೆಯೇ ? ಭದ್ರಯ್ಯನ ಮನಸ್ಸು ಚಿಕ್ಕದೋ ದೊಡ್ಡದೋ—ಅವನಂತೂ ನಮಗೆ ಸಹಾಯ ಮಾಡಲು ಮುಂದೆ ಬಂದಿದ್ದಾನೆ. ನಮ್ಮ ಬಡತನ ನೀಗುವ ಭರವಸೆ ಕೊಟ್ಟಿದ್ದಾನೆ "

" ಇಷ್ಟು ಉಪಕಾರದ ಹಿಂದೆ ಏನು ಉದ್ದೇಶ ಅಡಗಿದೆಯೋ ?"

" ಏನಾದರೂ ಇರಲಿ ಬಿಡು. ಆ ಮಾತೇಕೆ ?"

" ಅಂದರೆ.... ?"

" ಯಾವ ಉದ್ದೇಶವಿದ್ದರೂ ಸರಿಯೆ. ಅದನ್ನು ಅನುಭವಿಸಲು ಸಿದ್ಧ

ವಾಗಬೇಕು ನರಸಾ "

"ಅಯ್ಯೋ, ಅವನದು ಕೆಟ್ಟಮನಸ್ಸು. ನಮ್ಮ ಮಾನಕಳೆಯು ವುದಕ್ಕೂ ಅವನು ಹೇಸುವುದಿಲ್ಲ"

"ನಮ್ಮಂತಹ ಬಡವರಿಗೆ ಮಾನ—ಅವಮಾನ ಎನ್ನುವುದಿದೆಯೇನು?"

ವೆಂಕಟೇಶಯ್ಯ ವಿಷಾದದ ನಗೆ ನಕ್ಕು ನುಡಿದ.

ಗಂಡನ ಬಾಯಿಂದಲೇ ಅಂತಹ ಮಾತು ಕೇಳಿದಾಗ, ನರಸಮ್ಮ ಸಿಡಿಲು ಬಡಿವದಳಂತೆ ಕುಸಿದು ಕುಳಿತಳು. ಬಳಬಳನೆ ಹರಿದ ಕಣ್ಣೀರು ಅವಳ ಸೆರಗನ್ನು ತೋಯಿಸಿತು.

'ನೀನು ಹೆಣ್ಣು....ಹೆಣ್ಣು....ಹೆಣ್ಣು'

ಅವಳ ಮನಸ್ಸು ಚುಚ್ಚಿ ಚುಚ್ಚಿ ಎಚ್ಚರಿಸಿತು.

ಅದರಲ್ಲೇನು ಸಂದೇಹ? ಭೂಮಿಯ ಮೇಲೆ ಹೆಣ್ಣಾಗಿ ಹುಟ್ಟಿ ಈಗಾಗಲೇ ಇಪ್ಪತ್ತೆಂಟು ವರ್ಷಗಳನ್ನು ಕಳೆದಿಲ್ಲವೇ?

'ಗಂಡಿನ ಕೈಗೊಂಬೆ ಹೆಣ್ಣು....ಗಂಡಿನ ಪ್ರೇಮದ ಭೋಗವಸ್ತು ಹೆಣ್ಣು!'

ಇದುವರೆಗೆ ಹೀಗೆಯೇ ಕಳೆದಿದೆ ಇಪ್ಪತ್ತೆಂಟು ವರ್ಷ!

ಇನ್ನು ಮುಂದೆ....?

'ಈ ಬಡತನದ ಹೆಣ್ಣು ಬೊಂಬೆ ಇನ್ನೊಂದು ಗಂಡಿನ ಕೈಗೊಂಬೆ ಯಾಗಿ ಕಂಗೊಳಿಸಿ, ಸ್ವರ್ಣ ಸಾಮ್ರಾಜ್ಞಿಯಾಗಿ ಮೆರೆಯುತ್ತಾಳೆ!'

ಛೆ, ಎಂತಹ ಕೆಟ್ಟ ಆಲೋಚನೆ ಇದು!

'ಹಹ್ಹ ಹ್ಹಾ........'

ಮನದ ಅಳುಕಿಗೆ ನಕ್ಕಿತು ಭ್ರಮೆಯ ಬದುಕು!

ಹಾಸಿಗೆಯ ಮೇಲೆ ಹೊರಳಾಡುತ್ತಾ, ನಿದ್ರೆಯಿಲ್ಲದೆ ಆ ರಾತ್ರಿಯನ್ನು ಕಳೆದಳು ನರಸಮ್ಮ.

ಮರುದಿನ ಸಂಜೆ ಆಕೆ ತೊಟ್ಟಿಲು ತೂಗುತ್ತಾ ಕುಳಿತಿದ್ದಳು. ಮಗು ನಿದ್ರಿಸಿ ಬಹಳ ಹೊತ್ತಾಗಿದ್ದರೂ ನರಸಮ್ಮ ಇನ್ನೂ ತೊಟ್ಟಿಲು ತೂಗುತ್ತಲೇ ಇದ್ದಳು. ಉಳಿದ ಮೂರು ಮಕ್ಕಳು ಆಟಕ್ಕೆ ಹೋಗಿದ್ದವು. ಮನೆಯಲ್ಲಿ ಆಕೆಯೊಬ್ಬಳೇ. ವೆಂಕಟೇಶಯ್ಯನೂ ಇರಲಿಲ್ಲ.

"ಯಂಕ್ಟೇಶಯ್ಯನೋರೇ....?"

ಬಳಿಗೆ ಕರೆಯಿತು. ನರಸಮ್ಮ ಕುಳಿತಲ್ಲಿಂದ ಎದ್ದು ಹೋದಳು. ಸಂದೇಹ ದಿಂದ ತೊಳಲಾಡುತ್ತಿದ್ದ ಅವಳ ಮನಸ್ಸು ಇನ್ನೂ ಸಮಾಧಾನಗೊಂಡಿರಲಿಲ್ಲ.

ಆ ರಾತ್ರಿ ಮಕ್ಕಳೆಲ್ಲಾ ಮಲಗಿದಮೇಲೆ, ನರಸಮ್ಮ ತನ್ನ ಸಂದೇಹ ವನ್ನು ಸೂಕ್ಷ್ಮವಾಗಿ ಗಂಡನ ಮುಂದಿಟ್ಟಳು.

" ಭದ್ರಯ್ಯನ ಸಾಲ ಬೇರೆ ನಮ್ಮ ತಲೆಯಮೇಲೆ ಹೇರಿಕೊಂಡಿತು "

" ಅದು ಸಾಲ ಅಲ್ಲಕಣೆ "

" ಮತ್ತೆ.... ?"

" ನಮ್ಮ ಬಡತನ ನೋಡಿ ಅವನು ಸುಮ್ಮನೆ ಕೊಟ್ಟ ಕಣೆ "

" ಸುಮ್ಮಸುಮ್ಮನೆ ಈ ಕಾಲದಲ್ಲಿ ಯಾರಾದರೂ ಇಷ್ಟೊಂದು ಧಾರಾಳ ತೋರಿಸುತ್ತಾರೆಯೇ ಅಂದ್ರೆ ?"

" ಭದ್ರಯ್ಯನ ವಿಷಯ ನಿನಗೇನು ಗೊತ್ತು ನರಸಾ ? ಅವನ ಮನಸ್ಸು ತುಂಬಾ ದೊಡ್ಡದು. ದುಡ್ಡು-ಕಾಸು, ದವಸ-ಧಾನ್ಯ ಅವನ ಮನೆಯಲ್ಲಿ ತುಂಬಿ ತುಳುಕಾಡುತ್ತಿದೆ. ಬಡವರನ್ನು ಕಂಡರೆ, ಬ್ರಾಹ್ಮಣರನ್ನು ಕಂಡರೆ ' ಅಯ್ಯೋ ' ಎನ್ನುತ್ತಾನೆ........ "

" ಅವನು ' ಅಯ್ಯೋ ' ಅನ್ನುವುದು ಇರಲೀಂದ್ರೆ. ಇನ್ನೊಬ್ಬರನ್ನೂ ' ಅಯ್ಯೋ ' ಅನ್ನಿಸುತ್ತಾನೆ ! ಅವನ ವಿಚಾರ ನಿಮಗಿನ್ನೂ ತಿಳಿಯದು. ಮೂರು ಹೊತ್ತೂ ಮನೆಯಲ್ಲಿರುವ ಹೆಣ್ಣು ಹೆಂಗಸು ನಾನು ನೋಡು ತ್ತಿದೇನಲ್ಲಾ........ನೀವು ಅವನ ಮನಸ್ಸು ಎಷ್ಟು ದೊಡ್ಡದು ಅಂತೀರೋ ಅಷ್ಟೇ ಚಿಕ್ಕದು !"

" ಅದು ಹೇಗಾದರೂ ಇರಲಿ ನರಸಾ .... ನಾವಂತೂ ಬಡವರು. ಇನ್ನೊಬ್ಬರ ವಿಷಯವಾಗಿ ಕೆಟ್ಟಮಾತಾಡಿ ನಾವು ಬದುಕುವುದಕ್ಕಾಗು ತ್ತದೆಯೇ ? ಭದ್ರಯ್ಯನ ಮನಸ್ಸು ಚಿಕ್ಕದೋ ದೊಡ್ಡದೋ—ಅವನಂತೂ ನಮಗೆ ಸಹಾಯ ಮಾಡಲು ಮುಂದೆ ಬಂದಿದ್ದಾನೆ. ನಮ್ಮ ಬಡತನ ನೀಗುವ ಭರವಸೆ ಕೊಟ್ಟಿದ್ದಾನೆ "

" ಇಷ್ಟು ಉಪಕಾರದ ಹಿಂದೆ ಏನು ಉದ್ದೇಶ ಅಡಗಿದೆಯೋ ?"

" ಏನಾದರೂ ಇರಲಿ ಬಿಡು. ಆ ಮಾತೇಕೆ ?"

" ಅಂದರೆ.... ?"

" ಯಾವ ಉದ್ದೇಶವಿದ್ದರೂ ಸರಿಯೆ. ಅದನ್ನು ಅನುಭವಿಸಲು ಸಿದ್ಧ

ವಾಗಬೇಕು ನರಸಾ "

"ಅಯ್ಯೋ, ಅವನದು ಕೆಟ್ಟಮನಸ್ಸು. ನಮ್ಮ ಮಾನಕಳೆಯುವುದಕ್ಕೂ ಅವನು ಹೇಸುವುದಿಲ್ಲ"

"ನಮ್ಮಂತಹ ಬಡವರಿಗೆ ಮಾನ—ಅವಮಾನ ಎನ್ನುವುದಿದೆಯೇನು?"

ವೆಂಕಟೇಶಯ್ಯ ವಿಷಾದದ ನಗೆ ನಕ್ಕು ನುಡಿದ.

ಗಂಡನ ಬಾಯಿಂದಲೇ ಅಂತಹ ಮಾತು ಕೇಳಿದಾಗ, ನರಸಮ್ಮ ಸಿಡಿಲು ಬಡಿವದಳಂತೆ ಕುಸಿದು ಕುಳಿತಳು. ಬಳಬಳನೆ ಹರಿದ ಕಣ್ಣೀರು ಅವಳ ಸೆರಗನ್ನು ತೋಯಿಸಿತು.

'ನೀನು ಹೆಣ್ಣು....ಹೆಣ್ಣು....ಹೆಣ್ಣು'

ಅವಳ ಮನಸ್ಸು ಚುಚ್ಚಿ ಚುಚ್ಚಿ ಎಚ್ಚರಿಸಿತು.

ಅದರಲ್ಲೇನು ಸಂದೇಹ? ಭೂಮಿಯ ಮೇಲೆ ಹೆಣ್ಣಾಗಿ ಹುಟ್ಟಿ ಈಗಾಗಲೇ ಇಪ್ಪತ್ತೆಂಟು ವರ್ಷಗಳನ್ನು ಕಳೆದಿಲ್ಲವೇ?

'ಗಂಡಿನ ಕೈಗೊಂಬೆ ಹೆಣ್ಣು....ಗಂಡಿನ ಪ್ರೇಮದ ಭೋಗವಸ್ತು ಹೆಣ್ಣು!'

ಇದುವರೆಗೆ ಹೀಗೆಯೇ ಕಳೆದಿದೆ ಇಪ್ಪತ್ತೆಂಟು ವರ್ಷ!

ಇನ್ನು ಮುಂದೆ....?

'ಈ ಬಡತನದ ಹೆಣ್ಣು ಬೊಂಬೆ ಇನ್ನೊಂದು ಗಂಡಿನ ಕೈಗೊಂಬೆಯಾಗಿ ಕಂಗೊಳಿಸಿ, ಸ್ವರ್ಣ ಸಾಮ್ರಾಜ್ಞಿಯಾಗಿ ಮೆರೆಯುತ್ತಾಳೆ!'

ಛೆ, ಎಂತಹ ಕೆಟ್ಟ ಆಲೋಚನೆ ಇದು!

'ಹಹ್ಹಹ್ಹಾ........'

ಮನದ ಅಳುಕಿಗೆ ನಕ್ಕಿತು ಭ್ರಮೆಯ ಬದುಕು!

ಹಾಸಿಗೆಯ ಮೇಲೆ ಹೊರಳಾಡುತ್ತಾ, ನಿದ್ರೆಯಿಲ್ಲದೆ ಆ ರಾತ್ರಿಯನ್ನು ಕಳೆದಳು ನರಸಮ್ಮ.

ಮರುದಿನ ಸಂಜೆ ಆಕೆ ತೊಟ್ಟಿಲು ತೂಗುತ್ತಾ ಕುಳಿತಿದ್ದಳು. ಮಗು ನಿದ್ರಿಸಿ ಬಹಳ ಹೊತ್ತಾಗಿದ್ದರೂ ನರಸಮ್ಮ ಇನ್ನೂ ತೊಟ್ಟಿಲು ತೂಗುತ್ತಲೇ ಇದ್ದಳು. ಉಳಿದ ಮೂರು ಮಕ್ಕಳು ಆಟಕ್ಕೆ ಹೋಗಿದ್ದವು. ಮನೆಯಲ್ಲಿ ಆಕೆಯೊಬ್ಬಳೇ. ವೆಂಕಟೇಶಯ್ಯನೂ ಇರಲಿಲ್ಲ.

"ಯಂಕ್ಟೇಶಯ್ಯನೋರೇ....?"

ಯೋಚನೆಯಲ್ಲಿ ಮೈಮರೆತಿದ್ದವಳನ್ನು ಬಡಿದೆಬ್ಬಿಸಿತು ಆ ಧ್ವನಿ. ಮೆಲ್ಲನೆ ಅತ್ತ ತಿರುಗಿ ನೋಡಿದಳು ನರಸಮ್ಮ....ಭೀಮಕಾಯದ ಭದ್ರಯ್ಯ ನಿಂತಿದ್ದಾನೆ!

ಅವಳು ಅವನ ಕಡೆಗೆ ನೋಡಿದಾಗ ಅವನ ಮೀಸೆಯ ಕುಡಿ ಕುಣಿ ಯಿತು; ಕಣ್ಣು ಆಸೆಯಿಂದ ಮಿಂಚಿತು; ತುಟಿ ಮಂದಹಾಸವನ್ನು ಚಿಮ್ಮಿತು.

"ಇಲ್ಲ ಅವರು"

ಎಂದಳು ನರಸಮ್ಮ.

"ನಿಜ, ನಿಜ....ಅವರಿಲ್ಲ. ಆಗ್ಲೇ ಅವರು ಬೀದೀನಾಗ ಓಯ್ತಿದ್ದಿದ್ದು ನೋಡ್ದೆ"

ಗಂಡನಿಲ್ಲದಿದ್ದುದನ್ನು ತಿಳಿದೂ ತಿಳಿದೂ ಅಲ್ಲಿಗೆ ಬಂದಿದ್ದ ಭದ್ರಯ್ಯನ ಮನೋಭೀಷ್ಟ ನರಸಮ್ಮನಿಗೆ ಕೂಡಲೇ ಹೊಳೆಯಿತು. ಅವಳ ಹೃದಯ ನಡುಗಿತು.

"ಸಾಲ ತೀರಿಸ್‌ಬುಟ್ ಮೇಲೆ ನೆಮ್ಮದಿಯಾಗೈತಲ್ವಾ ಮನ್ಸ?"

ತಾನು ಬಂದ ಉದ್ದೇಶವನ್ನು ಸಾಧಿಸಲು ಬಳಸುದಾರಿ ಹಿಡಿದಿದ್ದ ಭದ್ರಯ್ಯ!

ನರಸಮ್ಮ ಮೌನವಾಗಿಯೇ ಇದ್ದಳು. ಆದರೆ ಅವಳ ಮನಸ್ಸು ಕಿಡಿ ಕಾರುತ್ತಿತ್ತು.

ಭದ್ರಯ್ಯ ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ ಅವಳ ಬಳಿಗೆ ಬಂದಿದ್ದ. ಮುಂದಿನ ಘಟ್ಟವೇನೆಂಬುದು ನರಸಮ್ಮನಿಗೆ ಸ್ಪಷ್ಟವಾಯಿತು. ಆದರೆ ಆ ಮಾನ ಹಾನಿಯ ಪ್ರಸಂಗದಿಂದ ಪಾರಾಗುವುದು ಹೇಗೆ?

ಕಿರಿಚಿಕೊಂಡರೆ, ನೆರೆಹೊರೆಯವರು ಬಂದು ದೊಡ್ಡ ರಾದ್ಧಾಂತ ವಾಗುತ್ತದೆ.

ಭದ್ರಯ್ಯ ತಮ್ಮ ಸಂಸಾರದ ಮೇಲೆಯೇ ಮತ್ಸರವಿಡುತ್ತಾನೆ.

ಕಿಡಿಕಾರಿ, ಕೋಪವನ್ನು ಪ್ರದರ್ಶಿಸಿದರೆ, ತತ್‌ಕ್ಷಣದಲ್ಲಿ ಅವನ ಮುಷ್ಟಿ ಯಿಂದ ಪಾರಾಗುವುದು ಸಾಧ್ಯವೇ ಇಲ್ಲ.

ಗಂಡನಾದವನು ಬಡತನದ ಸೀರೆಯುಟ್ಟು, ದುಷ್ಟರ ನೆರವಿನ ಎಂಜಲು ರವಿಕೆ ತೊಟ್ಟು, ಷಂಡನಾಗಿ, ಭದ್ರಯ್ಯನ ಪರವಾಗಿಯೇ ನಿಂತು ಹೇಡಿತನ

ದಿಂದ ಪಾದಿಸುತ್ತಿದ್ದಾನೆ.

ಇಂತಹ ಸಮಯದಲ್ಲಿ ನಿಸ್ಸಹಾಯಕಳಾದ ಹೆಣ್ಣು ಏನು ಮಾಡಬೇಕು ?

ಬಡತನದ ಹೆಸರಿನಲ್ಲಿ ಶೀಲವನ್ನು ಬಲಿಗೊಡಬೇಕೆ ?

ಪಾತಿವ್ರತ್ಯವನ್ನು ಪರರಿಗೆ ಹಂಚಿ ಬೆತ್ತಲೆಯಾಗಿ ನಿಲ್ಲಬೇಕೆ ?

ಮಾನನಿಧಿಯಾದ ಭಾರತ ಸ್ತ್ರೀ ಪರಮ ಶಾಂತಮಯಿ. ಜಗಜ್ಜನನಿಯಾದ ಕಾರುಣ್ಯ ಶೀಲವೇ ಆಕೆಯ ಹಾರ್ದಿಕ ಸಂಸ್ಕೃತಿ. ಪ್ರಾಣಾಂತಿಕವಾದರೂ ಪಾತಿವ್ರತ್ಯ ರಕ್ಷಣೆಯೇ ಪರಮಗುರಿಯೆಂದು ನಂಬಿ ನಡೆಯುವ ಸ್ಥಿರ ಚಿತ್ತೆ ಆಕೆ – ಭಾರತ ಸ್ತ್ರೀ.

ಅಲ್ಪಸ್ವಲ್ಪ ಓದಿದ ಹೆಣ್ಣು ನರಸಮ್ಮ ತನ್ನ ಜ್ಞಾನದ ಬೆಳಕಿನಲ್ಲಿ ಕಣ್ಣು ತೆರೆದು ನೋಡಿದಳು. ಸದ್ಯದ ಪರಿಸ್ಥಿತಿಯಿಂದ ಪಾರಾಗುವ ಬಗೆ ಆಕೆಗೆ ಸ್ಪಷ್ಟವಾಗಿ ಹೊಳೆದಿತ್ತು—ಆ ಸೌಮ್ಯವಾದ ಬೆಳಕಿನಲ್ಲಿ.

ಮನಸ್ಸಿನ ಅಂಜಿಕೆ – ಅಳುಕು ಮಾಯವಾಯಿತು.

ತಾನು ಭಾರತ ಸ್ತ್ರೀಯಲ್ಲವೆ? ವೀರನಾರಿಯಲ್ಲವೆ? ಅಷ್ಟೇ ಸಹನಾಮಯಿಯೂ ಹೌದಲ್ಲವೆ ?

ನರಸಮ್ಮ ಭದ್ರಯ್ಯನನ್ನು ಕಂಡು ನಸುನಕ್ಕಳು.

ತಾನು ಬಯಸಿದ ಸ್ವರ್ಗ ಇಷ್ಟು ಬೇಗ ವಶವಾಯಿತಲ್ಲಾ – ಎಂದು ಭದ್ರಯ್ಯನಿಗೆ ಆನಂದ – ಉತ್ಸಾಹ. ಆದರೆ ಅದು ಮಾಯಾ ಮರೀಚಿಕೆಯೆಂಬುದು ಅವನಿಗೇನು ಗೊತ್ತು ?

ಭದ್ರಯ್ಯ ಹತ್ತಿರಕ್ಕೇ ಬಂದು ನಿಂತಿದ್ದ. ಇನ್ನೊಂದು ನಿಮಿಷದಲ್ಲಿ ನರಸಮ್ಮ ಅವನ ತೋಳ್ತೆಕ್ಕೆಯಲ್ಲಿರುತ್ತಿದ್ದಳು.

" ಇಷ್ಟು ಅವಸರ ಯಾಕೆ ? ಸ್ವಲ್ಪ ತಾಳಿ...."

ತಟ್ಟನೆ ಎರಡು ಹೆಜ್ಜೆ ಹಿಂದೆ ಸರಿದಳು ನರಸಮ್ಮ. ಅವಳ ಮಾತಿನಿಂದ ಪ್ರಸನ್ನನಾದ ಭದ್ರಯ್ಯ ನಿಂತಲ್ಲಿಯೇ ನಿಂತ.

" ಮನೇಲಿ ನಿಮ್ಮ ತಾಯಿ ಇಲ್ಲವೆ ?

ನರಸಮ್ಮ ಕೇಳಿದಳು.

" ಅವ್ಳೆ...."

" ಹೇಗಿದ್ದಾಳೆ ಆಕೆ ?"

" ಯಾಕ್ ನೀವ್ ನೋಡಿಲ್ವಾ ಆ ಮುದುಕೀನ ?"

" ಮುದುಕೀ ಆದರೂ ಅವಳು ಹೆಂಗಸು ತಾನೆ ?"

" ಹೆಂಗಸಲ್ದೆ ಗಂಡ್ಸಾ ನನ್ ಹೆತ್ತವ್ವ ?"

" ಅಂದರೆ ಹೆಂಗಸೇ ತಾನೆ ?"

" ಹ್ಞಂ "

" ನಾನು ?"

" ನೀವೂ ಹೆಂಗಸೇ !"

" ನಿಮ್ಮ ತಾಯಿಯ ಹಾಗೇ ಹೆಂಗಸುತಾನೇ ?"

" ಹ್ಞಂ "

" ನಿಮ್ಮ ತಾಯಿನ್ನೂ ಹೀಗೇ ಬಲವಂತ ಮಾಡ್ತೀರಾ ? ಅವಳನ್ನೂ ಪಕ್ಕದಲ್ಲಿ ಮಲಗಿಸಿಕೊಂಡು ತಬ್ಬಿಕೋಳ್ತೀರಾ ?"

ಭದ್ರಯ್ಯನನ್ನು ಹೆಡೆತುಳಿದ ಹಾವಿನಂತೆ ಮಾಡಿತು—ನರಸಮ್ಮನ ಮಾತು.

" ನಿಮ್ ತಾವ ಉಪದೇಸ ಕೇಳಾಕ್ ಬಂದೀವ್ನಾ ನಾನು ?"

ಅದುವರೆಗೆ ಮೃದುಸ್ವಭಾವದಿಂದ ನಿಂತಿದ್ದ ಭದ್ರಯ್ಯ, ಒಮ್ಮೆಗೇ ಕೆರಳಿ ಕೆಂಪಾಗಿ, ಕಿಡಿನುಡಿ ಸಿಡಿಸಿದ. ಪ್ರಕೃತಿ ಸ್ವರೂಪಳಾದ ಹೆಣ್ಣಿಗೆ ಅಗ್ನಿಯನ್ನು ಶಾಂತ ಮಾಡುವ ಶಕ್ತಿ ಇಲ್ಲವೇನು ?

ತಟ್ಟನೆ ನಕ್ಕಳು ಮೋಹದ ನಗೆಯನ್ನು – ನರಸಮ್ಮ

ಅವಳ ನಗೆಬೆಳದಿಂಗಳ ಬೆಳಕಿನೊಡನೆ ಸ್ಪರ್ಧಿಸಲಾರದೆ ಭದ್ರಯ್ಯನ ಬೆಂಕಿ ಮಂಕಾಯಿತು.

" ಇಷ್ಟಕ್ಕೇ ಕೋಪ ಬಂದು ಬಿಟ್ಟಿತೆ ? "

ಬೆರಗು ಗೊಳಿಸುವ ಅವಳ ಆ ಇನಿದನಿಯೇ ಬಲವಾಗಿ ಬೀಸಿತು ಬಲೆ – ಭದ್ರಯ್ಯನ ಮೇಲೆ.

" ಏಟೊಂದು ಆಟ ಆಡಿಸ್‌ಬುಡ್ತು – ಈ ಬ್ರಾಂಬರ ಎಣ್ಣು ! "

— ಎಂದು ಮೆಲ್ದನಿಯಲ್ಲಿ ಹೇಳಿದ ಭದ್ರಯ್ಯ. ನರಸಮ್ಮನಿಗೂ ಆ ಮಾತು ಕೇಳಿಸಿತು.

" ನಾನೇನು ಆಟ ಆಡಿಸಿದೆ ! "

ಕುಲುಕುಲು ನಗುತ್ತಾ ನುಡಿದ ನರಸಮ್ಮ —

" ಹ್ಞಂ. ಸಂಜೆಗತ್ತಲಾಗುತ್ತಾ ಬಂತು, ಇವತ್ತು ಶುಕ್ರವಾರ ಬೇರೆ.

ಮನೆಗೆ ' ಲಕ್ಷ್ಮಿ ' ಬರುವ ಹೊತ್ತು ........" ಎಂದಳು.

" ಅಂಗಾದ್ರೆ ನನ್ನ ಮರ್ತು ಬಿಟ್ಟಂಗೇನಾ ? "

" ಉಂಟೆ ! ನಿಮ್ಮನ್ನೇ ಮರೆಯುವುದು ? ಈ ಮೈ ಮನಸ್ಸು ಎಲ್ಲಾ ನಿಮ್ಮದೇ .... " ನರಸಮ್ಮನ ಮಾತು ಕೇಳಿ ಭದ್ರಯ್ಯ ಆನಂದತುಂದಿಲನಾದ.

ಅವಳು ಮುಂದುವರಿಸಿದಳು—

" ಆದರೆ ಇವತ್ತು ಬೇಡ. ಮಕ್ಕಳು ಮರಿ ಮನೆಗೆ ಬರುವ ಹೊತ್ತು...."

" ಇನ್ಯಾವಾಗ ? "

" ನಾಳೆ .... ನಾಳೆ ಸಾಯಂಕಾಲ .... ನಾಳೆ ಸಾಯಂಕಾಲ ಏನು ಬೇಕಾದರೂ ಮಾಡಿ – ಎಲ್ಲಾ ನಿಮ್ಮದೇ ! "

" ನಿಜಾನ ? "

" ನಿಜವೋ ಸುಳ್ಳೋ – ನಾಳೆ ನಿಮಗೇ ಗೊತ್ತಾಗುತ್ತೆ "

ಎಂದಳು ನರಸಮ್ಮ. ಭದ್ರಯ್ಯ ಅರೆಮನಸ್ಸಿನಿಂದ ಹಿಂತಿರುಗಿದ.

ಅಂತೂ ಪಾರಾಗಿದ್ದಳು ನರಸಮ್ಮ – ಉರಗನಿಂದ ಪಾರಾದ ಕೋಗಿಲೆಯಂತೆ.

.... ಮರುದಿನ ಸಂಜೆಗೆ ಮೈ ಒಪ್ಪಿಸುವೆನೆಂದು ಹೇಳಿರುವೆನಲ್ಲವೆ — ಭದ್ರಯ್ಯನಿಗೆ. ಹೇಳಿದ ಮಾತನ್ನು ಉಳಿಸಿಕೊಳ್ಳದಿದ್ದರೆ ದೇವರು ಮೆಚ್ಚುತ್ತಾನೇನು ?

ದೇಹವನ್ನು ಒಪ್ಪಿಸಲೇ ಬೇಕು – ಒಪ್ಪಿಸುತ್ತೇನೆ.

ಆದರೆ ಈ ದೇಹವನ್ನಲ್ಲ – ಜೀವವಿಲ್ಲದ ದೇಹವನ್ನು !

ಪಾತಿವ್ರತ್ಯಕ್ಕಾಗಿ ಪ್ರಾಣವನ್ನರ್ಪಿಸುತ್ತೇನೆ; ಆತ್ಮ ದೇವ ಬಿಟ್ಟು ಹೋದ ದೇಹ ದೇಗುಲವನ್ನು ಭದ್ರಯ್ಯನಿಗೆ ಒಪ್ಪಿಸುತ್ತೇನೆ.

ಆದರೆ ಈ ಮಕ್ಕಳು .... ಸಣ್ಣ ಪುಟ್ಟ ನಾಲ್ಕು ಮಕ್ಕಳು ?

ಛೆ, ಅವು ತನ್ನ ಮಕ್ಕಳೇನು ? ಅಲ್ಲವೇ ಅಲ್ಲ ! ತನಗೆ ದೇವರಾದ ತನ್ನ ಗಂಡನ ಮಕ್ಕಳು – ದೇವರ ಮಕ್ಕಳು .... ದೇವರ ಮಕ್ಕಳು ....

ಎಲ್ಲ ಪ್ರಾಪಂಚಿಕ ಬಂಧನಗಳಿಂದ ಮೆಲ್ಲ ಮೆಲ್ಲನೆ ಬಿಡಿಸಿಕೊಳ್ಳತೊಡಗಿದಳು ನರಸಮ್ಮ. ಆದರೆ ಅಷ್ಟು ಸುಲಭವಾಗಿ ಪ್ರಪಂಚ ಅವಳನ್ನು ಬಿಟ್ಟು ಬಿಡುವುದೇನು ?

ಆ ರಾತ್ರಿ ಮನೆಗೆ ಹಿಂತಿರುಗಿದ ವೆಂಕಟೇಶಯ್ಯನಿಗೆ, ನಡೆದ ಸಂಗತಿ

ಯನ್ನು ಹೇಳಬೇಕೆಂದಿದ್ದಳು ನರಸಮ್ಮ. ಆದರೆ 'ಹೇಳಿ ಏನು ಪ್ರಯೋಜನ ?' ಎಂಬ ನಿರಾಶೆಯ ಆಲೋಚನೆ ಸುಳಿದು ಆಕೆ ಸುಮ್ಮನಾಗಿದ್ದಳು.

ಸಂಜೆ ಮನೆಗೆ ಹಿಂತಿರುಗಿದ್ದ ಭದ್ರಯ್ಯ ವಿಮನಸ್ಕನಾಗಿದ್ದ. ವಿಭ್ರಮಿತನಾಗಿದ್ದ ಅವನನ್ನು ಊಟಕ್ಕೆಂದು ನಾಲ್ಕಾರು ಬಾರಿ ಕರೆದಿದ್ದಳು ಅವನ ತಾಯಿ. ಭದ್ರಯ್ಯ ಅತ್ತ ಗಮನವಿತ್ತಿರಲಿಲ್ಲ. ಅವನ ಕಿವಿಗಳಲ್ಲಿ ನರಸಮ್ಮನೊಡನೆ ನಡೆದ ಸಂಭಾಷಣೆ ಇನ್ನೂ ಪ್ರತಿಧ್ವನಿಸುತ್ತಿದ್ದಿತು.

'ನಾನು ?'

'ನೀವೂ ಹೆಂಗಸೇ !'

'ನಿಮ್ಮ ತಾಯಿಯ ಹಾಗೇ ಹೆಂಗಸುತಾನೇ ?'

'ಹ್ಞಂ'

'ನಿಮ್ಮ ತಾಯನ್ನೂ ಹೀಗೇ ಬಲವಂತ ಮಾಡ್ತೀರಾ? ಅವಳನ್ನೂ ಪಕ್ಕದಲ್ಲಿ ಮಲಗಿಸಿಕೊಂಡು ತಬ್ಬಿಕೊಳ್ತೀರಾ ?'

— ಕ್ರಮವಾಗಿ ಈ ಮಾತುಗಳು ನೆನಪಿನ ಬುತ್ತಿಯಲ್ಲಿ ನಲಿದಾಡುತ್ತಿವೆ. ಮರೆಯೋಣವೆಂದರೆ ಸಾಧ್ಯವಾಗುತ್ತಿಲ್ಲ. ಮರೆಯಲು ಪ್ರಯತ್ನಿಸಿದಷ್ಟೂ .. ಮತ್ತೂ ಹೆಚ್ಚಾಗಿ ಜ್ಞಾಪಕಕ್ಕೆ ಬರುತ್ತಿದೆ.

ಭದ್ರಯ್ಯನ ಮನೋರಂಗದಲ್ಲಿ, ಅವನ ತಾಯಿಯ ಚಿತ್ರವೂ ನರಸಮ್ಮನ ಚಿತ್ರವೂ ಏಕಕಾಲದಲ್ಲಿ ಸುಳಿದವು....

ವೃದ್ಧೆಯಾದ ತಾಯಿಗೆ ಸುಮಾರು ಅರವತ್ತು ವರ್ಷ. ಇಪ್ಪತ್ತೆಂಟರ ನರಸಮ್ಮನಿಗೆ ಅವನ ದೃಷ್ಟಿಯಲ್ಲಿ ಸುಮಾರು ಮೂವತ್ತು ವರ್ಷ. ಆದರೂ ಈ ವಯಸ್ಸಿಗೇ ನರಸಮ್ಮನಿಗೆ ಮುಪ್ಪಡರಿದೆ ; ಮೈರಕ್ತ ಗುಂದಿ, ಚರ್ಮ ನೆರಿಗೆಗಟ್ಟುತ್ತಿದೆ. ಅರವತ್ತು ವರ್ಷವಾದರೂ ತನ್ನ ತಾಯಿಗೆ ಕೂದಲು ನರೆತಿಲ್ಲ. ಆದರೆ ನರಸಮ್ಮನ ತಲೆಯಲ್ಲಿ ಈಗಾಗಲೇ ಬಿಳಿಗೂದಲು ಕಾಣಿಸಿಕೊಂಡಿದೆ. ನಿಲುವಿನಲ್ಲಿ ಇಬ್ಬರೂ ಒಂದೆ. ಇನ್ನು ಚೆಲುವು....? ಅದು ಇಬ್ಬರಿಗೂ ಇಲ್ಲ! ....ಎರಡೂ ಕಪ್ಪು ಬೊಂಬೆಗಳು........ಸಾಮಾನ್ಯ ಹೆಂಗಳು.... ಆದರೂ ನರಸಮ್ಮ ತನ್ನ ಕಣ್ಣುಗಳಿಗೆ ಕೂರ್ಪಕೃತ್ಯ ಕಾಮಿನಿಯಂತೆ ಕಾಣಿಸುತ್ತಿದ್ದಾಳೆ ; ಹೃಷಿತಳಾಗಿ ಹೃದಯದ ತುಂಬಾ ತುಂಬಿಕೊಂಡಿದ್ದಾಳೆ; ತನ್ನೆದೆ ಮುದದಿಂದ ನಲಿಯುವಂತೆ ನಾಟ್ಯವಾಡುತ್ತಿದ್ದಾಳೆ !

ಭದ್ರಯ್ಯ ಹಾತೊರೆಯುತ್ತಿದ್ದ, ಹೆಕ್ಕಳಿಸಿದ ಮನ ಆ 'ಮಕ್ಕಳ

ತಾಯಿ 'ಯನ್ನು ನೆನೆನೆನೆದು ಕಕ್ಕುಲತೆಗೊಂಡಿತು.

ವಿಭ್ರಮಿತನಾಗಿದ್ದ ಭದ್ರಯ್ಯನನ್ನು ಕಟು ದನಿಯಲ್ಲಿ ಎಚ್ಚರಿಸಿದಳು— ಸಿಡಿಮಿಡಿಗೊಂಡ ತಾಯಿ.

"ಊಟಮಾಡೇಳೋ ಭದ್ರೂ.... "

ಊಟ, ನಿದ್ದೆ -- ಎಲ್ಲಾ ಯಥಾವಿಧಿಯಂತೆ ಸಾಗಿತು.

ಆದರೆ ಆ ರಾತ್ರಿಯ ನಿದ್ರೆಯಲ್ಲಿ ಭದ್ರಯ್ಯ ಕಂಡ ವೈಚಿತ್ರ್ಯ ಎಷ್ಟು ಅಚ್ಚರಿಯದು !

ಬಣ್ಣದ ಕನಸಿನ ಚಿತ್ರ ವೈಚಿತ್ರ್ಯ....

.... ಆರಾಮ ಕುರ್ಚಿಯಲ್ಲಿ ಆಸೀನನಾಗಿದ್ದಾನೆ ಭದ್ರಯ್ಯ. ಮನಸ್ಸು ಆನಂದದಿಂದ ಪ್ರಫುಲ್ಲವಾಗಿದೆ. ಮೀಸೆಯಮೇಲೆ ಕೈಯ್ಯಾಡಿಸುತ್ತಾ ತುಟಿಯಲ್ಲೇ ನಗುತ್ತಿದ್ದಾನೆ. ಕೆಳಗೆ ಹಾಸಿದ ರತ್ನಗಂಬಳಿಯ ಮೇಲೆ ಕುಳಿತ ಮುನಿಯಮ್ಮ ಪತಿಯ ಪಾದಗಳನ್ನು ತೊಡೆಯಮೇಲಿಟ್ಟುಕೊಂಡು ಮೃದುವಾಗಿ ಒತ್ತುತ್ತಿದ್ದಾಳೆ. ಅವಳಿಗೂ ಒಂದು ಬಗೆಯ ತೃಪ್ತಿ--ಸಂತೋಷ.

........ ಎದುರುಗಡೆಯ ಗೋಡೆಯ ಬಳಿ ಹೊಳೆಯುವ 'ಪ್ರಭಾವಳಿ' ಕಂಗೊಳಿಸುತ್ತಿದೆ. ಅದರ ನಡುವೆ 'ಚಂಡಿ'ಯ ಪ್ರತಿಮೆಯ ಬದಲು 'ಶಾಕಿನಿ'ಯ ಪ್ರತಿಮೆ ರಾರಾಜಿಸುತ್ತಿದೆ. ಪಕ್ಕದಲ್ಲಿಯೇ ಪರಿಮಳಿಸುವ ಪುಷ್ಪ ಹಾಗೂ ಪಕ್ವಫಲಪೂರ್ಣ ಹರಿವಾಣವಿದೆ. ಸನಿಯದಲ್ಲಿಯೇ ತೆರೆತೆರೆಯಾಗಿ ಹೊಗೆಯೇಳುತ್ತಿರುವ ಸುಗಂಧ 'ಧೂಪದಾನಿ' ಇದೆ.

........ ಮುಂದುಗಡೆ ಯಾರೋ ಕಂಡೂ ಕಾಣದಂತೆ ನರ್ತಿಸುತ್ತಿದ್ದಾರೆ.

........ ದಿವ್ಯವಾದ ಸಂಗೀತ ಮೈಮರೆಸುವಷ್ಟು ಮಧುರವಾಗಿ ಕೇಳಿಬರುತ್ತಿದೆ. ಆದರೆ ಹಾಡುತ್ತಿರುವವರು ಯಾರೋ ! ವಾದ್ಯಗಳಾಗಲಿ, ಸಂಗೀತಗಾರರಾಗಲಿ ಕಣ್ಣಿಗೆ ಕಾಣಿಸುತ್ತಿಲ್ಲ. ಭದ್ರಯ್ಯನಂತೂ ಆ ಗಾನಾಮೃತ ಪಾನದಿಂದ ಮತ್ತನಾಗಿ ಆನಂದ ಚಂದನವನದಲ್ಲಿ ವಿಹರಿಸುತ್ತಿದ್ದಾನೆ.

........ಒಳಗಡೆಯಿಂದ ವಾತ್ಸಲ್ಯವೇ ಮೂರ್ತಿವೆತ್ತಂತೆ ಬಂದ ತಾಯಿ, ಕೈಯಲ್ಲಿ ಹಾಲಿನ ಬಟ್ಟಲನ್ನು ಹಿಡಿದು ಮಗನಿಗೆ ನೀಡಲು ನಿಂತಿದ್ದಾಳೆ.

........ಭದ್ರೂ....ಭದ್ರೂ........

........ಕಣ್ಣುತೆರೆದ ಭದ್ರಯ್ಯ ಮಮತೆಯಿಂದ ತಾಯಿಯ ಕಡೆಗೆ

ನೋಡುತ್ತಿದ್ದಾನೆ. ಆಹ್ ! ಆಕೆಯ ಮುಖದಲ್ಲೆಷ್ಟು ಗಾಂಭೀರ್ಯ ಕಾರುಣ್ಯ, ಪ್ರೇಮ ತುಂಬಿದೆ! ನೋಡಿದೊಡನೆ ಕೈಮುಗಿಯೋಣವೇ ಎನ್ನುವಷ್ಟು ಪೂಜ್ಯತೆ, ಪಾವಿತ್ರ್ಯತೆ ಪರಿಶುದ್ಧತೆ ಸ್ಪಷ್ಟವಾಗಿ ಗೋಚರಿಸುತ್ತಿದೆ. ಆದರೆ ಆಕೆಯ ಮುಖವೇನು ಹೀಗಿದೆ? ನೆರೆಮನೆಯ ನರಸಮ್ಮನಂತೆ ಕಾಣುತ್ತಿರುವಳಲ್ಲಾ !....ನರಸಮ್ಮನೇ ತನ್ನ ತಾಯಿಯೆ ?

........ಪಕ್ಕನೆ ಎದ್ದುನಿಂತ ಭದ್ರಯ್ಯ, ಬಳಿಗೈದಿ ಆಕೆಯ ಮುಖವನ್ನು ಸ್ಪಷ್ಟವಾಗಿ ನಿಟ್ಟಿಸಿದ. ಹೌದು, ಆಕೆ ನರಸಮ್ಮನೇ ! ಅದರಲ್ಲಿ ಲೇಶವೂ ಸಂದೇಹವಿಲ್ಲ.

'........ಇದ್ಯಾಕ್ ಇಂಗ್ ನೋಡ್ತೀ ಭದ್ರೂ ?'

........ಆ ಧ್ವನಿ ತನ್ನ ತಾಯಿಯ ಧ್ವನಿಯಂತೆಯೇ ಇದೆ.

'........ಕೋ ಮಗಾ, ಹಾಲ್ ಕುಡಿ– ಆರೋಗ್ತಯ್ತೆ'

........ಅಕ್ಕರೆ ತುಂಬಿದ ಸಕ್ಕರೆ ಮಾತಿನಲ್ಲಿ ಹೇಳುತ್ತಿದ್ದಾಳೆ ತಾಯಿ. ತಾಯಿಯ ಮುಖ ನರಸಮ್ಮನಂತಿದೆ. ನರಸಮ್ಮನ ಮುಖದಲ್ಲಿ ಹೆತ್ತಮ್ಮನ ಧ್ವನಿ ! ತನ್ನನ್ನು ಹೆತ್ತವಳು ನರಸಮ್ಮನೇ ಏನು ?

........ಬಗೆಹರಿಯದ ಭದ್ರಯ್ಯ ನಿಧಾನವಾಗಿ ಹಾಲು ಕುಡಿದ.

........ಅಷ್ಟರಲ್ಲಿ —

........ ಎದುರಿಗೆ ಕಂಗೊಳಿಸುತ್ತಿದ್ದ ಪ್ರಭಾವಳಿಯಿಂದ ಯಾರೋ ಎದ್ದು ಬಂದಂತೆ ಅಸ್ಪಷ್ಟವಾಗಿ ಕಾಣುತ್ತಿದೆ. ಕಪ್ಪುಸೀರೆ, ಕಪ್ಪು ಮುಖ, ಕಳವಳದ ಕಣ್ಣು, ಕೆದರಿದ ಕೂದಲು – ಭದ್ರಯ್ಯ ಗಾಬರಿಗೊಂಡು ನೋಡುತ್ತಿದ್ದಾನೆ.

........ತುಸು ಹೊತ್ತಿಗೆ ಮುಂಚೆ ಕೇಳಿ ಬರುತ್ತಿದ್ದ ದಿವ್ಯ ಸಂಗೀತ ಯಾವಾಗ ನಿಂತಿತೋ–ಏನೋ! ಈಗಂತೂ ಭೇರಿಯನಾದ ಬಡಿದೆಬ್ಬಿಸುವಷ್ಟು ಭೀಕರವಾಗಿ ಕೇಳಿಬರುತ್ತಿದೆ. ದಿವ್ಯಗಾನದ ಬದಲು ದಾನವ ಧ್ವಾನ ಆರಂಭವಾಗಿದೆ. ಘೋರದ ಘೋರ ಗರ್ಜನೆ, ವಿಘೂರ್ಣಿಸುವ ಧಳಂಕೃತ, ಡಕ್ಕೆ, ಡಮರು, ಡವುಡೆ, ಡಂಬಕ, ಡಮಾಣ, ಡಿಕ್ಕಿ, ಡಿಂಡಿಮುಗಳ–'ಡ' ಸಪ್ತವಾದ್ಯಗಳ ಡಿಂಗು ಡಂಗು ಬಡಿಸುವಂತೆ ಕೇಳಿಬರುತ್ತಿದೆ. ಭಯಂಕರ ಶಂಕಧ್ವಾನ ಕಿವಿಗೆ ಬಿದ್ದು ಭದ್ರಯ್ಯನನ್ನು ನಡುಗಿಸುತ್ತಿದೆ. ಸೌಮ್ಯವಾದ ಬೆಳಕಿನಿಂದ ತುಂಬಿದ್ದ ಸುತ್ತಲಿನ ಸ್ಥಳವೆಲ್ಲ ಅಸಾಧ್ಯ ಅಂಧಕಾರದಿಂದ

ಕಪ್ಪಿಟ್ಟು ಹೋಗಿದೆ. ಕಾಲೊತ್ತುತ್ತಿದ್ದ ಮುನಿಯಮ್ಮನಾಗಲಿ, ಸನಿಯದಲ್ಲಿ ನಿಂತಿದ್ದ ತಾಯಿಯಾಗಲಿ ಕಾಣಿಸದಂತಾಗಿದ್ದಾರೆ.

........ಇದೀಗ ಎಡ-ಬಲದ ಕಿವಿಗಳ ಬಳಿ ಎರಡು ಹೆಣ್ಣುಧ್ವನಿ ಸ್ಪಷ್ಟ ವಾಗಿ ಕೇಳಿಸುತ್ತಿದೆ. ಒಂದು ತಾಯಿಯ ಧ್ವನಿ, ಇನ್ನೊಂದು ನರಸಮ್ಮನ ಧ್ವನಿ. ಭದ್ರಯ್ಯ ಒಮ್ಮೆ ಅತ್ತ ತಿರುಗುತ್ತಾನೆ-ಇನ್ನೊಮ್ಮೆ ಇತ್ತ ತಿರುಗು ತ್ತಾನೆ.

........'ಭದ್ರೂ, ನಾನ್ ಚೆಂದಾಕಿಲ್ವಾ ?'

—ಅದು ತಾಯಿಯ ಧ್ವನಿ ; ಪರಿಚಿತ ಗ್ರಾಮ್ಯಭಾಷೆ.

'ಭದ್ರೂ, ಯಾಕಪ್ಪಾ ಹೀಗೆ ನಡುಗುತ್ತಿದ್ದೀ ? ಚಳಿಯೆ ? ಮೈಗೆ ಸರಿಯಿಲ್ಲವೇ ಮಗೂ ?'

—ಇದು ನಾಗರೀಕ ಬಲ್ಲ ನರಸಮ್ಮನ ಧ್ವನಿ. ತಾಯ್‌ಹೃದಯದ ವಾತ್ಸಲ್ಯ ಅಮೃತದ ಹನಿನುಡಿಯಾಗಿ ಆಕೆಯ ಬಾಯಿಂದ ಒಸರುತ್ತಿದೆ.

'ಭದ್ರೂ, ಇತ್ತಾಗೆ ನೋಡು, ನಾನೆಷ್ಟ್ ಚೆಂದಾಕಿನ್ನಿ'

'ಮೈತುಂಬಾ ಹೊದಿಸುತ್ತೇನೆ ತಾಳು ಕಂದ....'

'ಹೆಂಡ್ರು ಓದ್ರೆ ಓಗ್ಲಿ-ನಾನಿಲ್ವಾ ನಿಮ್ಮವ್ವ ! ನಿನ್ನೆಂಡ್ರಂಗೇ ಇರ್ತೀನಿ. ಬಾ ಇತ್ತಾಗೆ'

'ಹೆದರಬೇಡ ಭದ್ರೂ-ನಾನಿಲ್ಲವೇ ನಿನ್ನಮ್ಮ ! ನನ್ನ ಕಂದನನ್ನು ನೋಡಿಕೊಳ್ಳದೆ ಬಿಟ್ಟು ಬಿಡುತ್ತೇನೆಯೇ ?'

'ಬಾರ್‍ಲಾ ಭದ್ರೂ, ನಿನ್ನವ್ವನಾದ್ರೆ ಏನ್ಲಾ? ನಿನ್ನೆಂಡ್ರಿಗಿಂತ ಚೆಂದಾಕಿನ್ನಿ ನಾನು ಬಾರ್‍ಲಾ. ಇನ್ನಾ ಇತ್ತಾಗ್ ಬಂದ್ ಮನೀಕೊಳ್ಲಾ....'

'ಸ್ವಲ್ಪ ಹಾಲು ಕಾಯಿಸಿ ಕೊಡುತ್ತೇನೆ. ಕುಡಿದು ಸ್ವಸ್ಥವಾಗಿ ನಿದ್ದೆ ಮಾಡು ಕಂದ. ಬೆಳಿಗ್ಗೆ ಡಾಕ್ಟರನ್ನು ಕರೆಸಿ ತೋರಿಸುತ್ತೇನೆ....ದೇವರು ನನ್ನ ಮಗನನ್ನು ಆರೋಗ್ಯವಾಗಿ-ಸುಖವಾಗಿ ಇಟ್ಟರೆ ನನಗಷ್ಟೇ ಸಂತೋಷ !'

'ಇದ್ಯಾಕ್ ಗಂಡ್ಸಲ್ವಾ ಭದ್ರೂ ನೀನು ? ಮತ್ತೀಗ-ಬಾ ಅತ್ರ. ಹೆಂಗಸ್‌ನತ್ರ ಇಂಗೇನಾ ಗಂಡ್ಸು ನಡ್ಕಣೋದು....ಮನೀಕೋ ಬಾ ಇನ್ನಾ ಇತ್ತಾಗೆ....'

........ಭದ್ರಯ್ಯನ ಹಣೆಯಮೇಲೆ ಬೆವರು ಹನಿ ಮೂಡಿದೆ.

........ಅತ್ತ ನರಸಮ್ಮ ಮಗನೆಂಬ ಮಮತೆಯಿಂದ ನಯವಾಗಿ

ಮುಂಗೂದಲು ನೇವರಿಸುತ್ತಾ ಮೃದು ವಚನಗಳಿಂದ ಸಂತೈಸುತ್ತಿದ್ದಾಳೆ.

........ಇತ್ತ ಹೆತ್ತ ತಾಯಿ ವಿಲಾಸಿನಿಯಾಗಿ ಮಗನನ್ನೇ ಮಗ್ಗುಲಿಗೆ ಕರೆಯುತ್ತಿದ್ದಾಳೆ.

........ಮನದಲ್ಲಿ ನೆನಪಿನ ನೀರವ ಧ್ವನಿ ಈಗ ಅಲೆಅಲೆಯಾಗಿ ಬರುತ್ತಿದೆ—

—' ನಾನು ?'

' ನೀವೂ ಹೆಂಗಸೇ !'

' ನಿಮ್ಮ ತಾಯಿಯ ಹಾಗೇ ಹೆಂಗಸುತಾನೇ ?'

' ಹ್ಞಂ '

' ನಿಮ್ಮ ತಾಯಿಯನ್ನೂ ಹೀಗೇ ಬಲವಂತ ಮಾಡ್ತೀರಾ ? ಅವಳನ್ನೂ ಪಕ್ಕದಲ್ಲಿ ಮಲಗಿಸಿಕೊಂಡು ತಬ್ಬಿಕೊಳ್ತೀರಾ ?'

........ಭದ್ರಯ್ಯ ಕಂಗಾಲಾಗಿದ್ದಾನೆ.

........ಕಾಳಭೀಕರ ಮಾರಿಯ ಉತ್ಥಾನ, ಕರ್ಕಶವಾದ್ಯಾವಳಿಯ ಘೋರ ಗರ್ಜನೆ, ಕಣ್‌ಕೀಳುವ ಕತ್ತಲಮುತ್ತಿಗೆ, ಸ್ತ್ರೀಯ ತಿರುಗು ಮುರುಗು ಬಾಂಧವ್ಯದ ದ್ವಿಮುಖ, ಹೆಡೆ ಮುರಿದು, ಹೊಡೆ ಮೊಗಚಿ, ವಿವೇಕವನ್ನು ಕೆರಳಿಸುವಂತಹ ನರಸಮ್ಮನ ಮಾತು — ಭದ್ರಯ್ಯನನ್ನು ಉತ್ಪಿಂಜಗೊಳಿಸಿವೆ.

........' ಇಲ್ಲ, ಇಲ್ಲ, ನಾನು ಮಾಡುತ್ತಿರುವುದು ತಪ್ಪು....ತಪ್ಪು.... ನನ್ನ ತಾಯಿಯೇ ನರಸಮ್ಮ....ನರಸಮ್ಮನೇ ನನ್ನ ತಾಯಿ ?'

—ಕ್ಷಣಮಾತ್ರದಲ್ಲಿ ಪರಿವರ್ತನೆಗೊಂಡ ಅವನ ಮನಸ್ಸು ಮೌನವಾಗಿ ಮೊರೆಯಿಡುತ್ತಿದೆ. ಪಶ್ಚಾತ್ತಾಪದಿಂದ ಕಣ್ಣು ತುಂಬಿ ಕೋಡಿವರಿಯುತ್ತಿದೆ.

ಎಷ್ಟು ಹೊತ್ತು ಹೀಗೆ ಕಳೆಯಿತೋ ! ಅಂತೂ ಸುತ್ತಲಿನ ಕತ್ತಲೆ ಕಳೆದು, ಮತ್ತೆ ಬೆಳಕು ಬೆಳಗಿದಾಗಲೇ ಭದ್ರಯ್ಯನಿಗೆ ಎಚ್ಚರ.

........ಆದರೆ ಇದೇನಾಶ್ಚರ್ಯ !

........ಕಂಗೊಳಿಸುವ ಪ್ರಭಾವಳಿಯಿಂದ ರಾರಾಜಿಸುವ ದೇವಮೂರ್ತಿಯೋರ್ವಳು ಗಂಭೀರ ಗಮನದಿಂದ ತನ್ನೆಡೆಗೇ ಬರುತ್ತಿದ್ದಾಳೆ. ಕನಕ ವಸನಾಲಂಕೃತಳಾಗಿ, ಕಿರೀಟಧಾರಿಯಾಗಿ, ಕಲಾಕ್ರಮ ಪಾದಗತಿಯಿಂದ ತನ್ನನ್ನು ಸಮೀಪಿಸುತ್ತಿರುವ ಆ ದೇವತಾಸ್ತ್ರೀಯ ಮುಖ ನರಸಮ್ಮನನ್ನೇ

ಹೋಲುತ್ತಿದೆ. ಆಕೆ ತನ್ನ ಬಳಿಗೇ ಬಂದು ನಿಂತಿದ್ದಾಳೆ. ಆ ಸುವಾಸಿನಿಯ ಬಳಿಯಿಂದ ಬರುತ್ತಿರುವ ಮಧುರ ಪರಿಮಳ ಮೂಗನ್ನರಳಿಸಿ, ಮನಸ್ಸಿನ ಮೇಲೆ ದಿವ್ಯಭಾವನೆಗಳನ್ನು ಮೂಡಿಸುತ್ತಿದೆ. ತನಗೆ ತಾಯಿಯಂತೆ ಗೋಚರಿಸಿದ ನರಸಮ್ಮ ಈಗ ವರದಾಯಕಿಯಾದ ದೇವತೆಯಾಗಿ ಬಂದು ನಿಂತಿದ್ದಾಳೆ. ಪರೀಕ್ಷಿಸಲೆಂಬಂತೆ ತನ್ನನ್ನೇ ನೋಡುತ್ತಿದ್ದಾಳೆ. ಆ ನೋಟ ದಲ್ಲಿ ತನ್ನನ್ನು ಶಿಕ್ಷಿಸುವ ತೀಕ್ಷ್ಣತೆ ಸ್ಪಷ್ಟವಾಗಿ ಕಾಣುತ್ತಿದೆ.

........ಪ್ರಬಲ ಶಕ್ತಿಯ ಪ್ರೇರಣೆಗೆ ಸೋತು ಭಕ್ತಿಯಿಂದ ಭದ್ರಯ್ಯ ಕೈಜೋಡಿಸಿ ತಲೆಬಾಗಿದ್ದಾನೆ. ನರಸಮ್ಮನನ್ನೇ ಹೋಲುವ ದೇವಿ ಕೃಪಾ ಪುಷ್ಪ ವರ್ಷವನ್ನು ಸುರಿಸಿ, ಅಭಯ ಹಸ್ತವನ್ನು ತೋರಿ, ವರದ ಹಸ್ತದಿಂದ ಹರಸುತ್ತಿದ್ದಾಳೆ. ಮಂಗಳ ವಾದ್ಯಗಳ ಮಂಜುಳ ಧ್ವನಿ ಹಿತವಾಗಿ ಕೇಳಿ ಬರುತ್ತಿದೆ.

........ಭದ್ರಯ್ಯ ಮೆಲ್ಲನೆ ತಲೆ ಎತ್ತಿದ. ಆದರೆ ಅಲ್ಲಿ ತಾಯಿ-ದೇವಿ ಇಲ್ಲ! ಆಕೆ ಅದೃಶ್ಯಳಾಗಿದ್ದಾಳೆ!! ಬಿಟ್ಟಕಂಗಳಿಂದ ಸುತ್ತ ನೋಡಿದ ಅವನು.

ಹೌದು, ಬಿಟ್ಟಕಂಗಳಿಂದ ನೋಡಿದ ಭದ್ರಯ್ಯ—ಹಾಸಿಗೆಯಮೇಲೆ !

ಬೆಳಕು ಹರಿದಿದೆ ; ಕನಸು ಕಳೆದಿದೆ ; ಮನಸು ಬದಲಿಸಿದೆ........

ಮನಸ್ಸು ಬದಲಿಸಿದ ಆ ಬಣ್ಣದ ಕನಸಿನ ಚಿತ್ರ ವೈಚಿತ್ರ್ಯ ಇನ್ನೂ ಕಣ್ಣು ಮುಂದೆ ಸ್ಪಷ್ಟವಾಗಿ ನಿಂತಿದೆ. ಆಹ್ ! ಎಂತಹ ಅದ್ಭುತ ಕನಸು !!

ಹಾಸಿಗೆ ಬಿಟ್ಟೆದ್ದ ಭದ್ರಯ್ಯ ನಿತ್ಯಕರ್ಮಗಳನ್ನು ತೀರಿಸಿದ. ಉಪಾ ಹಾರಕ್ಕಾಗಿ ಅಡಿಗೆ ಮನೆಗೆ ಹೋದಾಗ, ತಾಯಿಯ ಮುಖವನ್ನು ನೋಡಲು ಧೈರ್ಯವಾಗದೆ ಮುಖ ತಗ್ಗಿಸಿದ. ಆಕೆ ಕೊಟ್ಟ ರೊಟ್ಟಿಯನ್ನೂ ಕಾಫಿಯನ್ನೂ ಮೌನವಾಗಿ ಮುಗಿಸಿ, ತನ್ನ ಕೋಣೆ ಸೇರಿ ಬಾಗಿಲು ಹಾಕಿಕೊಂಡ—ತಾನು ಮನೆಯಲ್ಲೇ ಇರುವೆನೆಂಬುದು ತಾಯಿಗೂ ತಿಳಿಯದಂತೆ.

'ಶಾಕಿನಿ ಉಪಾಸಕ'ನನ್ನು ಹುಡುಕಿಕೊಂಡು ಬಂದ ಗಿರಾಕಿಗಳು 'ಭದ್ರಯ್ಯ ಮನೆಯಲ್ಲಿಲ್ಲ'ವೆಂಬ ಉತ್ತರ ಪಡೆದು ಹಿಂತಿರುಗಿದರು.

ಕೋಣೆಯಲ್ಲಿ ಕುಳಿತ ಭದ್ರಯ್ಯ ಹಲವಾರು ಬಾರಿ ಹಿಂದಿನ ರಾತ್ರಿಯ ಕನಸನ್ನು ನೆನಪು ಮಾಡಿಕೊಂಡು, ಆ ಬಗ್ಗೆ ದೀರ್ಘವಾಗಿ ಯೋಚಿಸುತ್ತಿದ್ದ. ಹಿಂದಿನ ಸಂಜೆ ತಾನು ಕಾಮಿಸಿದ್ದ ನರಸಮ್ಮ ಇಂದು ಪೂಜಿಸಲ್ಪಡಬೇಕಾದ ದೇವಿಯಾಗಿದ್ದಳು — ಭದ್ರಯ್ಯನಿಗೆ. ಅವನ ಮನಸ್ಸು ಅವಳನ್ನು ಕಾಣಲು

ಕಾತರಿಸುತ್ತಿತ್ತು. ಕಂಡು, ಕಾಲಿಗೆ ಬಿದ್ದು ಕ್ಷಮೆ ಕೇಳುವ ಹಂಬಲ ಕ್ಷಣ ಕ್ಷಣಕ್ಕೆ ಹೆಚ್ಚಾಯಿತು.

ಸಂಜೆ ನಾಲ್ಕು ಗಂಟೆಯಾದಾಗ, ಭದ್ರಯ್ಯ ಕೋಣೆಯಿಂದ ಹೊರಗೆ ಬಂದ. ಅವನ ತಾಯಿ ಇನ್ನೂ ಮಧ್ಯಾಹ್ನದ ನಿದ್ರೆಯಲ್ಲಿ ಮೈಮರೆತಿದ್ದಳು. ಶಬ್ದವಾಗದಂತೆ ಬೀದಿಗಡಿಯಿಟ್ಟ ಭದ್ರಯ್ಯ ನೇರವಾಗಿ ವೆಂಕಟೇಶಯ್ಯನ ಮನೆ ಸೇರಿದ.

ಮಕ್ಕಳು ಶಾಲೆಗೆ ಹೋಗಿದ್ದವು. ವೆಂಕಟೇಶಯ್ಯನೂ ಆಗತಾನೆ ಹೊರಗೆ ಹೋಗಿದ್ದ. ಮನೆಯಲ್ಲಿ ನಿಶ್ಶಬ್ದತೆ ನೆಲೆಯೂರಿತ್ತು.

ಸದ್ದು ಮಾಡದೆ, ಮೆಲ್ಲಮೆಲ್ಲನೆ ಅಡಿಯಿಡುತ್ತಿದ್ದ ಭದ್ರಯ್ಯ ವೆಂಕಟೇಶಯ್ಯನ ಮನೆಯ ಒಳ ಅಂಗಳಕ್ಕೆ ಬಂದು ನಿಂತ. ಯಾರೂ ಕಾಣಿಸಲಿಲ್ಲ. ಎದುರಿಗೆ ಕಾಣುತ್ತಿದ್ದ ಅಡಿಗೆ ಮನೆಯ ಕಡೆಗೆ ನಿಟ್ಟಿಸಿದ. ಅಲ್ಲಿಯೂ ಯಾರ ಸುಳಿವೂ ಕಾಣಲಿಲ್ಲ. ಹಾಗೆಯೇ ಬದಿಗೆ ಸರಿದು ಕೋಣೆಯಲ್ಲಿ ಇಣಿಕಿದ....ಅಯ್ಯೋ! ಅಲ್ಲಿ ಕಂಡದ್ದೇನು........

ಚಾವಣಿಯ ದೂಲಕ್ಕೆ ಕಟ್ಟಿದ ಹಗ್ಗದಲ್ಲಿ ತನ್ನ ಕೊರಳನ್ನು ಬಿಗಿದು ಕೊಳ್ಳುತ್ತಿದ್ದಾಳೆ ನರಸಮ್ಮ! ಪಾತಿವ್ರತ್ಯ ರಕ್ಷಣೆಗಾಗಿ ಪ್ರಾಣತ್ಯಾಗ ಮಾಡಲು ನಿಶ್ಚಲ ಮನಸ್ಸಿನಿಂದ ನಿಂತು, ನೇಣನ್ನು ಜೀರಿಕೊಳ್ಳುತ್ತಿದ್ದಾಳೆ!!

"ಅವ್ವಾ....ನನ್‌ತಾಯಿಯಾ....ನನ್ನಮ್ಮಾ"

ಎಂದು ಕೂಗುತ್ತಾ ಭದ್ರಯ್ಯ ಕೋಣೆಗೆ ನುಗ್ಗಿದ. ಸದಾ ತನ್ನ ಉಡಿದಾರದಲ್ಲಿ ಕಟ್ಟಿರುತ್ತಿದ್ದ ಚಾಕುವನ್ನು ತಟ್ಟನೆ ತೆಗೆದು ಹಗ್ಗವನ್ನು ಕತ್ತರಿಸಿದ. ನರಸಮ್ಮ ದಿಗ್ಭ್ರಮೆಗೊಂಡು ಅವನನ್ನೇ ನೋಡಿದಳು. ಜೀರಿಕೊಳ್ಳ ಬೇಕೆಂದಿದ್ದ ಹಗ್ಗ ಇನ್ನೂ ಅವಳ ಕೊರಳಿನಲ್ಲಿಯೇ ತೂಗಾಡುತ್ತಿತ್ತು.

ಭದ್ರಯ್ಯ ನರಸಮ್ಮನ ಕಾಲುಗಳನ್ನು ಭದ್ರವಾಗಿ ಹಿಡಿದುಕೊಂಡು—

"ಅವ್ವಾ ತೆಪ್ಪಾಯ್ತು ಕಾಣ್ರವ್ವಾ....ಅಡ್ಡ ಬಿದ್ದೆ....ನಾನ್ ನಿಮ್ಮಗ ತಾಯಿಯಾ........"

—ಎಂದಾಗ ಅವನ ಕಣ್ಣಹನಿ ಅವಳ ಕಾಲ ಮೇಲೆ ತೊಟ್ಟಿಕ್ಕಿತು.

ಇದ್ದಕ್ಕಿದ್ದಂತೆ ಪರಿವರ್ತನೆಗೊಂಡ ಭದ್ರಯ್ಯನನ್ನು ಕಂಡು ನರಸಮ್ಮ ಅಚ್ಚರಿಗೊಂಡಳು. 'ದೇವರ ಲೀಲೆ' ಎಂದರೆ ಇದೇ ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡಳು.

"ಇದೇನಿದು, ಏಳಿ ಭದ್ರಯ್ಯನವರೆ. ನನ್ನ ಕಾಲಿಗೇಕೆ ಬೀಳುತ್ತೀರಿ?"

"ನೀವೇ ನನ್ ತಾಯಿ ಕಾಣ್ರವ್ವಾ....ನನ್ನಪ್ಪ....ನನ್‌ದೇವಿ....ಸರಿಯಾಗಿ ತಿಳುಕೊಣ್ದೆ ಕೆಣಕ್ಬುಟ್ಟೆ....ಈ ಮಗನ ತಿಪ್ಪು ಹೊಟ್ಯಾಗ್ ಆಕ್ಕೊಂಡು ಮರ್ತುಬಿಡ್ರವ್ವ"

—ಎನ್ನುತ್ತಾ ಭದ್ರಯ್ಯ ಎದ್ದು, ವಿನಯದ್ಯೋತಕವಾಗಿ ಕೈಜೋಡಿಸಿ, ತಲೆತಗ್ಗಿಸಿ ನಿಂತುಕೊಂಡ.

"ಪರವಾಗಿಲ್ಲ ಹೋಗಿ ಭದ್ರಯ್ಯನವರೆ. ದೇವರು ನಿಮಗೆ ಇಷ್ಟು ಸದ್ಬುದ್ಧಿ ಕೊಟ್ಟನಲ್ಲಾ—ಅದೇ ನನಗೆ ಸಂತೋಷ. ನಂಬಿದವರನ್ನು ಆ ಪರಮಾತ್ಮ ಎಂದಿಗೂ ಕೈ ಬಿಡುವುದಿಲ್ಲ"

"ನಾನಿನ್ನ ಓಯ್ತಾನಿ ಕಣ್ರವ್ವಾ"

"ಒಳ್ಳೆಯದಪ್ಪಾ. ಹೋಗಿ ಬನ್ನಿ"

ಎಂದು ಬೀಳ್ಕೊಟ್ಟಳು ನರಸಮ್ಮ.

ಅವಳ ಪಾತಿವ್ರತ್ಯ ಉಳಿದಿತ್ತು; ಪ್ರಾಣ ಉಳಿದಿತ್ತು. ಆ ಅಚ್ಚರಿಯ ಪ್ರಸಂಗವನ್ನು ಎಂದೂ ಮರೆಯಲಾರಳು ನರಸಮ್ಮ.

ಅಂದಿನಿಂದ ವೆಂಕಟೇಶಯ್ಯನ ಕುಟುಂಬದೊಡನೆ ಭದ್ರಯ್ಯನ ಬಳಕೆ-ಬಾಂಧವ್ಯ ಹೆಚ್ಚಾಯಿತು. 'ಶಾಕಿನಿ'ಯ ನೆರವಿನಿಂದ ವೆಂಕಟೇಶಯ್ಯನ ಉತ್ಕರ್ಷ ಮತ್ತೆ ಆರಂಭವಾಯಿತು. ನಾಲ್ಕಾರು ಮನೆಗಳಲ್ಲಿ ಸಂಗೀತ ಪಾಠ ದೊರೆಯಿತು. ಸಂಪಾದನೆ ಸಂಸಾರಕ್ಕೆ ಸಾಕಾಗುವಷ್ಟಾಯಿತು. ಭದ್ರಯ್ಯನೂ ಕುಟುಂಬದ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಾ, ಭಕ್ತಿಯಿಂದ ನರಸಮ್ಮನನ್ನು ಕಾಣುತ್ತಾ, ಬೇಕಾದ ನೆರವು ನೀಡುತ್ತಿದ್ದನು. ಬಡತನದಿಂದ ನರಕವಾಗಿದ್ದ ವೆಂಕಟೇಶಯ್ಯನ ಸಂಸಾರ ಸ್ವರ್ಗವಾಗಿ ಪರಿವರ್ತಿತವಾಯಿತು.

ಆದರೆ ಭದ್ರಯ್ಯನ ಮೃಗಹೃದಯ ಮಣಿದಿತ್ತೇ ವಿನಃ ಇತರ ಹೆಣ್ಣು ಮಕ್ಕಳ ವಿಷಯದಲ್ಲಿ ಅವನ ಪಶುವೃತ್ತಿ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಅವನ 'ಕಾಮಿಸಿ ಬಯಕೆ' ದಿನದಿನಕ್ಕೆ ಅಧಿಕವಾಗುತ್ತಲೇ ಇದ್ದಿತು. ನರಸಮ್ಮನಿಗೆ ತೋರಿಸಿದ ರಿಯಾಯಿತಿಯನ್ನು ಇತರ ಹೆಣ್ಣುಗಳ ಬಗೆಗೆ ತೋರಲು ಅವನ ಮನಸ್ಸು ಸರ್ವಥಾ ಒಪ್ಪುತ್ತಿರಲಿಲ್ಲ. ಆದರೂ ನರಸಮ್ಮನನ್ನು ಆತ ಸಂಪೂರ್ಣವಾಗಿ ಮರೆಯುವುದು ಸಾಧ್ಯವಾಗಿರಲಿಲ್ಲ. ಕುಡಿದು ಅಮಲೇರಿ

ದಾಗ, ಆಕೆಯ ನೆನಪು ತಾನಾಗಿಯೇ ಕೆರಳಿ, ಅವಳನ್ನು ಕೂಡುವ ಬಯಕೆ ಉಗ್ರವಾಗುತ್ತಿತ್ತು. ಉನ್ಮತ್ತ ಮನಸ್ಸು 'ನರಸಮ್ಮನನ್ನು ಪಡೆಯದೆ ಇರುವುದು ಸಾಧ್ಯವೇ ಇಲ್ಲ. ಹೇಗಾದರೂ ಸರಿಯೇ–ಅವಳನ್ನು ಪಡೆದೇ ಪಡೆಯಬೇಕು'—ಎಂದು ಉದ್ದೀಪ್ತವಾಗಿ ಹಾತೊರೆಯುತ್ತಿತ್ತು. ಅಮಲಿಳಿದ ಬಳಿಕ ನರಸಮ್ಮ ಅವನ ಕಣ್ಣುಗಳಿಗೆ 'ದೇವಿ'ಯಾಗಿಯೇ ಕಾಣುತ್ತಿದ್ದಳು—ಹತ್ತಿರದಿಂದ. ದೂರದಿಂದ ಆಕೆ ನರಸಮ್ಮನೇ—ಹೆಣ್ಣುತನ ಕುಣಿದು ಕರೆಯುವ ನರಸಮ್ಮನೇ ಆಗುತ್ತಿದ್ದಳು!....ಅಂತೂ ಬಯಸಿದ ಹೆಣ್ಣು ಬೇಕೇ ಬೇಕು. ಆ ಆಸೆ ಪೂರೈಸಿಕೊಳ್ಳಲು, 'ಶಾಕಿನಿ' ತನ್ನ 'ಶಕ್ತಿ' ಯನ್ನು ಧಾರೆಯೆರೆಯಲು ಸದಾ ಸಿದ್ಧಳಾಗಿಯೇ ನಿಂತಿರುತ್ತಿದ್ದಳು.

ಭದ್ರಯ್ಯನಿಗೆ ವೆಂಕಟೇಶಯ್ಯನ ಗೆಳೆತನವೂ ಲಾಭದಾಯಕವಾಗಿಯೇ ಇತ್ತು. ಒಂದು ಕಾಲದಲ್ಲಿ ತನ್ನ ರಸಿಕತೆಯನ್ನು ಮೆರೆಸಿದ್ದ ವೆಂಕಟೇಶಯ್ಯ ಹೆಣ್ಣುಗಳ ವಿಷಯದಲ್ಲಿ ಉತ್ತೇಜಕ ಮಾತುಗಳನ್ನು ಹೇಳುತ್ತಾ ಭದ್ರಯ್ಯನ ರಂಜನೆ ಮಾಡುತ್ತಿದ್ದ. ಕೆಲವೊಮ್ಮೆ ಬೇಸರವಾದಾಗ ಭದ್ರಯ್ಯ ವೆಂಕಟೇಶಯ್ಯನ ಪಿಟೀಲು ವಾದನವನ್ನು ಕೇಳುತ್ತಾ ಮೈಮರೆತು ಕೂಡುವುದೂ ಉಂಟು.

ಒಂದು ದಿನ ವೆಂಕಟೇಶಯ್ಯ ಪಿಟೀಲಿನಲ್ಲಿ 'ಚಕ್ರವಾಕ' ರಾಗವನ್ನು ನುಡಿಸುತ್ತಿದ್ದಾನೆ. ಪ್ರಣಯ ಸಂಬಂಧಿನಿಯಾದ ಆ ರಾಗದಲ್ಲಿ ಭದ್ರಯ್ಯ ಮೈಮರೆತಿದ್ದಾನೆ. ಶೃಂಗಾರ-ಪ್ರಣಯ ಪ್ರಿಯನಾದ ವೆಂಕಟೇಶಯ್ಯನೂ ಪಿಟೀಲಿನಲ್ಲಿಯೇ ತನ್ನ ಮೈ ಮನಸ್ಸುಗಳನ್ನು ತಲ್ಲೀನಗೊಳಿಸಿದ್ದಾನೆ. ಮನೆಯಲ್ಲಿ ನಿಶ್ಶಬ್ದತೆ ನೆಲೆಯೂರಿದೆ. ರಾಗವಾಹಿನಿ ಅಲೆಅಲೆಯಾಗಿ ಬರುತ್ತಾ ಮನೆಯನ್ನೆಲ್ಲಾ ತುಂಬಿಕೊಂಡಿದೆ. ಆ ಸಮಯದಲ್ಲಿ ವೆಂಕಟೇಶಯ್ಯನ ಮಗ ಓಡೋಡಿ ಬಂದು—

"ಅಪ್ಪಾ....ಅಪ್ಪಾ...."

ಎಂದು ಗಾಬರಿಯಿಂದ ಕೂಗಿಕೊಂಡ.

ಅದೇ ಸಮಯಕ್ಕೆ 'ಠಣೀರ್' ಎಂದು ಶಬ್ದವಾಯಿತು.

ಠೇಂಕಾರಕ್ಕೆ ಎಚ್ಚೆತ್ತ ವೆಂಕಟೇಶಯ್ಯ ಅಚ್ಚರಿಯಿಂದ ನೋಡುತ್ತಾನೆ–ಪಿಟೀಲಿನ ತಂತಿ ಕಡಿದು ಇಬ್ಭಾಗವಾಗಿದೆ. ಎದುರಿಗೆ ತನ್ನ ಮಗ ನಿಂತಿದ್ದಾನೆ.

"ಅಪ್ಪಾ, ಅಪ್ಪಾ, ಅಮ್ಮ ಬಚ್ಚಲು ಮನೆಯಲ್ಲಿ ಬಿದ್ದು ಬಿಟ್ಟಳು........

ರಕ್ತ....ರಕ್ತ "

ಮಗನ ಮಾತು ಕೇಳಿ ಗಾಬರಿಗೊಂಡ ವೆಂಕಟೇಶಯ್ಯ, ಕೂಡಲೇ ಕಡಿದ ತಂತಿಯ ಪಿಟೀಲನ್ನು ಕೆಳಗೆ ಬಿಸುಟು ತನ್ನ ಮನೆಯ ಕಡೆಗೆ ಧಾವಿಸಿದ. 'ಚಕ್ರವಾಕ' ರಾಗವನ್ನು ಸವಿಯುತ್ತ ಸವಿಯುತ್ತ ಭದ್ರಯ್ಯನಿಗೆ ನಿದ್ದೆಯೇ ಬಂದಿತ್ತು.

ಮನೆಗೆ ಬಂದ ವೆಂಕಟೇಶಯ್ಯ ಹೆಂಡತಿಯನ್ನು ಮೆಲ್ಲನೆ ಅಂಗಳಕ್ಕೆ ಕರೆತಂದು ತಲೆಗೆ ಬಟ್ಟೆ ಕಟ್ಟಿದ. ಹೊಸಲಿಗೆ ಬಲವಾಗಿ ಬಡಿದ ನರಸಮ್ಮನ ತಲೆಗೆ ತುಂಬಾ ಪೆಟ್ಟು ಬಿದ್ದಿತ್ತು. ರಕ್ತ ಅಧಿಕವಾಗಿ ಹೊರ ಬಂದಿತ್ತು.

ವೆಂಕಟೇಶಯ್ಯ ಹೆಂಡತಿಯನ್ನು ಮಲಗಿಸಿ, ತಾನೂ ಅವಳ ಪಕ್ಕದಲ್ಲಿಯೇ ಕುಳಿತು ಸ್ವಲ್ಪಹೊತ್ತು ಚಿಂತಾಕ್ರಾಂತನಾದ. ಮನಸ್ಸು ಸಮಾಧಾನಗೊಳ್ಳಲಿಲ್ಲ. ಕೂಡಲೇ ಎದ್ದು ಹೋಗಿ ಡಾಕ್ಟರನ್ನು ಕರೆತಂದ.

ನರಸಮ್ಮನನ್ನು ಪರೀಕ್ಷಿಸಿದ ಡಾಕ್ಟರು 'ಏನೂ ಭಯವಿಲ್ಲ' ವೆಂದರು. ತಲೆಗೆ ಮುಲಾಮು ಹಚ್ಚಿ, ಪಟ್ಟಿ ಕಟ್ಟಿ ಹಿಂತಿರುಗಿದರು.

ಆದರೆ ಮರುದಿನ ಪರಿಸ್ಥಿತಿ ಭಯಾನಕವಾಗಿತ್ತು. ನರಸಮ್ಮನ ಮೈ ಕೆಂಡದಂತೆ ಸುಡುತ್ತಿತ್ತು. ಅವಳ ನರಳಿಕೆಯ ಧ್ವನಿ ಕರುಳು ಹಿಚುಕುತ್ತಿತ್ತು.

ಮತ್ತೆ ಡಾಕ್ಟರು ಬಂದರು. ಆಗಲೂ 'ಭಯಪಡಬೇಕಾಗಿಲ್ಲ' ವೆಂದರು. ಔಷಧಿಕೊಟ್ಟು ಮರಳಿದರು.

ಮಧ್ಯಾಹ್ನದ ವೇಳೆಗೆ ನರಸಮ್ಮನ ಕೈಕಾಲು ಸೆಳೆಯಿತು. ಮುಖ ಬಣ್ಣಗೆಟ್ಟಿತು. ಉಸಿರು ನಿಧಾನವಾಗಿ ಆಡುತ್ತಿತ್ತು.

ಅನ್ನ ಬೇಡವೆಂದಳು; ನೀರು ಒಲ್ಲೆನೆಂದಳು–ನರಸಮ್ಮ.

"ಗಂಜಿಯಾದರೂ ಸ್ವಲ್ಪ ಕುಡಿ ನರಸಾ"

ಬೇಡವೆಂಬಂತೆ ತಲೆಯಲುಗಿಸಿದಳು ಗಂಡನ ಮಾತಿಗೆ.

ದಿಕ್ಕು ತೋಚದಂತಾಯಿತು ವೆಂಕಟೇಶಯ್ಯನಿಗೆ.

ಭದ್ರಯ್ಯನೂ ಬಂದು ಆ ಸಾಧ್ವಿಯನ್ನು ನೋಡಿದ. ಏನೋ ಕೆಟ್ಟ ಕೆಲಸ ಮಾಡಿದವನಂತೆ ಮನಸ್ಸು ಅಳುಕಿತು. ಹೃದಯ ಕಲ್ಲೋಲವಾಯಿತು. ಆದರೂ ಅದಾವುದನ್ನೂ ತೋರ್ಪಡಿಸದೆ–'ಇದು ದುಷ್ಟ ಗ್ರಹದ ಕೈವಾಡವಲ್ಲ ಸ್ವಾಮಿ' ಎಂದು ಹೇಳಿ, ಹೆಚ್ಚುಹೊತ್ತು ಅಲ್ಲಿ ನಿಲ್ಲದೆ ತನ್ನ ಪಾಡಿಗೆ ತಾನು ಹೊರಟುಹೋದ. ಹೋಗುವಾಗ—

"ಎಷ್ಟು ದುಡ್ಡು ಖರ್ಚಾದ್ರೂ ನಾ ಕೊಡ್ತೀನಿ ಸ್ವಾಮಿ. ಎದರ್ ಕೊಣ್ ಬ್ಯಾಡಿ. ಒಳ್ಳೆ ಡಾಕ್ಟರ್ನ ಕರೆದು ತೋರಿಸಿ. ಅವ್ವಾವ್ರಿಗೆ ಗುಣ ಆದ್ರೆ ಅಷ್ಟೇ ನನಗ್ ಸಂತೋಸ" ಎಂದ.

'ಆಗಲಿ' ಎಂಬಂತೆ ತಲೆಗಮುಕು ಹಾಕಿದ ವೆಂಕಟೇಶಯ್ಯ.

ಹತ್ತಿರದಲ್ಲಿ ತನ್ನವರೆಂಬುವರು ಯಾರೂ ಇರಲಿಲ್ಲ ಅವನಿಗೆ–ಮಕ್ಕಳನ್ನು ಬಿಟ್ಟು. ಅವೂ ಅರಿಯದ ಮಕ್ಕಳು.

ವೆಂಕಟೇಶಯ್ಯನಿಗೆ ಕೂಡಲೇ ತನ್ನ ಚಿಕ್ಕಮ್ಮನ ಮನೆಯ ನೆನಪಾಯಿತು. 'ಈಗಲೇ ಬರುತ್ತೇನೆಂದು' ನರಸಮ್ಮನಿಗೆ ಹೇಳಿ, ಸಿಟಿ ಬಸ್ಸು ಹತ್ತಿ ಮಲ್ಲೇಶ್ವರ ಸೇರಿದ.

ಅಪರೂಪಕ್ಕೆ ಬಂದ ವೆಂಕಟೇಶಯ್ಯನನ್ನು ಕಂಡು ಅವನ ವೃದ್ಧ ಚಿಕ್ಕಮ್ಮ, ಕಮಲಮ್ಮನವರು ಕುಶಲವನ್ನು ವಿಚಾರಿಸಿದರು. ಅಷ್ಟರಲ್ಲಿ ಅವರ ಮಗ ಸಭಾಪತಿಶಾಸ್ತ್ರಿಗಳೂ ಅಲ್ಲಿಗೆ ಬಂದು ಸೋದರನನ್ನು ಕಂಡು ಅಚ್ಚರಿಗೊಂಡರು.

ನರಸಮ್ಮನ ಕಾಯಿಲೆಯನ್ನು ವಿವರಿಸಿ ಹೇಳುವಾಗ ವೆಂಕಟೇಶಯ್ಯನಿಗೆ ಅಳು ಬರುವಂತಾಯಿತು.

"ಹತ್ತಿರದಲ್ಲಿ 'ನನ್ನವರು' ಎನ್ನುವವರು ಯಾರಿದ್ದಾರೆ ಚಿಕ್ಕಮ್ಮ?"

"ನಾವೆಲ್ಲಾ ಇಲ್ಲವೇ ವೆಂಕಟೇಶೂ. ಕಣ್ಣೀರು ಹಾಕಬೇಡ ಸುಮ್ಮನಿರಪ್ಪ."

"ಇದ್ದಕ್ಕಿದ್ದಂತೆ ನರಸುವಿಗೆ ಹೀಗಾಗುತ್ತದೆಂದು ನಾನು ನೆನಸಿರಲಿಲ್ಲ ಚಿಕ್ಕಮ್ಮ."

"ನೆನಸದಿರುವುದೇ ಯಾವಾಗಲೂ ನಡಿಯುವುದಪ್ಪ!"

"ನೀನೀಗಲೇ ನನ್ನ ಜೊತೆಯಲ್ಲಿ ಬರುತ್ತೀಯಾ ಚಿಕ್ಕಮ್ಮ?"

ಅಷ್ಟರಲ್ಲಿ ಸಭಾಪತಿ ಶಾಸ್ತ್ರಿಗಳು—

"ಡಾಕ್ಟರಿಗೆ ತೋರಿಸಿದೆಯಾ ವೆಂಕಟೇಶ?"

ಎಂದು ಕೇಳಿದರು.

"ತೋರಿಸಿದ್ದಾಯಿತು"

"ಏನೆಂದರು?"

"ಅವರೇನೂ ಭಯವಿಲ್ಲವೆಂತಲೇ ಹೇಳುತ್ತಿದ್ದಾರೆ."

" ಮತ್ತೇಕೆ ನಿನಗೆ ಗಾಬರಿ ? "

" ಆದರೂ ನನಗೆ ಮನಸ್ಸು ಸಮಾಧಾನವಿಲ್ಲ ಅಣ್ಣಯ್ಯ "

" ಆಗಲಪ್ಪ. ದೇವರಿದ್ದಾನೆ ಸುಮ್ಮನಿರು "

ಎಂದರು ಕಮಲಮ್ಮ.

ಎರಡು ಕ್ಷಣ ಮೌನವಾಗಿದ್ದ ವೆಂಕಟೇಶಯ್ಯ—

" ಚಿಕ್ಕಪ್ಪ ಎಲ್ಲಿಗೆ ಹೋದರು ಅಣ್ಣಯ್ಯ ? "

ಎಂದು ಕೇಳಿದ.

" ಒಳಗಿದ್ದಾರೆ "

ಎಂದರು ಸಭಾಪತಿಶಾಸ್ತ್ರಿಗಳು.

ಶಂಕರಶಾಸ್ತ್ರಿಗಳು ಪೂಜಾಮಗ್ನರಾಗಿ ದೇವರ ಕೋಣೆಯಲ್ಲಿ ಕುಳಿತು ಆಗಲೇ ಒಂದು ಗಂಟೆ ಕಳೆದಿತ್ತು. ಯಾವಾಗಲೂ ಹಾಗೆಯೇ ಅವರು. ಶೈವಾಗಮನ ರೀತ್ಯಾ 'ಉಮಾಶಂಕರನಿಗೆ' ಪೂಜೆ ಸಲ್ಲಿಸಿ ಹೊರಗೆ ಬರಬೇಕಾದರೆ ಕೊನೆಯ ಪಕ್ಷ ಎರಡು ಗಂಟೆಗಳಾದರೂ ಬೇಕು. ಕೆಲವೊಮ್ಮೆ ಧ್ಯಾನಾಸಕ್ತರಾಗಿ ಕುಳಿತರಂತೂ ಗಂಟೆಗಟ್ಟಲೆ ಕಳೆದುಹೋಗುತ್ತಿತ್ತು. ಎಷ್ಟೋಬಾರಿ ಗಂಡನಿಗಾಗಿ ಕಾಯುತ್ತಾ ಕಮಲಮ್ಮ ಇಡೀ ದಿವಸ ಉಪವಾಸ ಮಾಡಿದ ಸಂದರ್ಭಗಳೂ ಉಂಟು.

ಶಂಕರಶಾಸ್ತ್ರಿಗಳಿಗೆ ಆರು ಮಂದಿ ಮಕ್ಕಳು. ಐದು ಹೆಣ್ಣು, ಒಂದು ಗಂಡು–ಅವರೇ ಸಭಾಪತಿಶಾಸ್ತ್ರಿಗಳು. ಬೆಂಗಳೂರಿಗೆ ಇಪ್ಪತ್ತು ಮೈಲಿ ದೂರದಲ್ಲಿ ಅವರಿಗೆ ಒಂದು ಜೋಡಿಗ್ರಾಮವಿದ್ದುದರಿಂದ ಜೀವನಕ್ಕೆ ಕೊರತೆಯಿರಲಿಲ್ಲ. ಅಲ್ಲದೆ ಮತ್ತಿಗೆ ಹಳ್ಳಿಯ ಅದ್ವೈತಾನಂದ ಸ್ವಾಮಿಗಳ ಮಠಕ್ಕೆ ಏಜೆಂಟರಾಗಿದ್ದುದರಿಂದ ಅವರ ಗೌರವ ಪ್ರತಿಷ್ಠೆಗಳೂ ಹೆಚ್ಚಾಗಿ ಬೆಳೆದಿದ್ದವು.

ಸಭಾಪತಿಶಾಸ್ತ್ರಿಗಳೂ ತಂದೆಯಂತೆಯೇ ಸಂಸ್ಕೃತಾಧ್ಯಯನ ಮಾಡಿ, ವೇದಾದಿ ಗ್ರಂಥಗಳ ಸಾರಸರ್ವಸ್ವವನ್ನೂ ಅರೆದು ಕುಡಿದಿದ್ದರು. ಕೆಲಕಾಲ ಮತ್ತಿಗೆ ಹಳ್ಳಿಯ ಮಠದಲ್ಲಿಯೇ ವಾಸಿಸುತ್ತಾ ಸ್ವಾಮಿಗಳ ಶಿಷ್ಯವೃಂದಕ್ಕೆ ಸಂಸ್ಕೃತ ಪಾಠ ಹೇಳಿ ಕೊಡುತ್ತಿದ್ದರು. ಆದರೆ ವೃದ್ಧರಾದ ಶಂಕರಶಾಸ್ತ್ರಿಗಳು ಮನೆಯ ಆಡಳಿತದಲ್ಲಿ ಅನಾಸಕ್ತರಾಗಿ ಸದಾ ಅಧ್ಯಾತ್ಮ ಚಿಂತನೆಯಲ್ಲಿಯೂ, ದೇವರ ಪೂಜೆಯಲ್ಲಿಯೂ ಕಾಲ ಕಳೆಯತೊಡಗಿದಾಗ, ಸಭಾಪತಿಶಾಸ್ತ್ರಿಗಳು ಮತ್ತಿಗೆ ಹಳ್ಳಿಯ ಮಠದಿಂದ ಹಿಂತಿರುಗಿ ಬಂದು ಮನೆಯ

ಯಾಜಮಾನ್ಯವನ್ನು ವಹಿಸಿಕೊಂಡರು.

ಶಾಸ್ತ್ರಿಗಳ ಐದು ಮಂದಿ ಸೋದರಿಯಲ್ಲಿ ನಾಲ್ಕುಮಂದಿಗೆ ವಿವಾಹವಾಗಿ, ಅವರೆಲ್ಲರೂ ಗಂಡಂದಿರ ಮನೆಯಲ್ಲಿ ಸುಖವಾಗಿದ್ದರು. ಶಾಸ್ತ್ರಿಗಳಿಗೂ ಮದುವೆಯಾಗಿ, ಪತ್ನಿ ಸೌಭಾಗ್ಯಮ್ಮ ಮನೆಗೆ ಬಂದು, ಒಂದು ಗಂಡು ಮಗುವಿನ ತಾಯಿಯಾಗಿ ಐದು ವರ್ಷಗಳಾಗಿತ್ತು. ಶಾಸ್ತ್ರಿಗಳ ಕೊನೆಯ ತಂಗಿಯಾದ ರುಕ್ಮಿಣಿಗೆ ಇನ್ನೂ ವಿವಾಹವಾಗಿರಲಿಲ್ಲ. ಆಕೆಗೆ ಹದಿನೈದು ತುಂಬಿತ್ತು. ಆಗಲೇ ಶಾಸ್ತ್ರಿಗಳು, ತಾಯಿ ಕಮಲಮ್ಮನವರ ಕಾಟವನ್ನು ತಡೆಯಲಾರದೆ ವರನ ತರದೂದು ನಡೆಸಿದ್ದರು.

ವೈದಿಕರ ಮನೆಯ ಹುಡುಗಿಯಾದರೂ ರುಕ್ಮಿಣಿ ಆಧುನಿಕಕಾಲಕ್ಕೆ ಒಪ್ಪುವಂತೆ, ನಡೆ-ನುಡಿಗಳಲ್ಲಿ ನಾಗರೀಕತೆ ಬೆಳಸಿಕೊಂಡಿದ್ದಳು. ತಾಯಿ ಕಮಲಮ್ಮ ಮಗಳ ರೀತಿ-ನೀತಿಗಳಿಗೆ ಯಾವ ವಿಧದಲ್ಲಿಯೂ ಅಡ್ಡಿ ಬರದೆ, ಅವಳು ಹೈಸ್ಕೂಲಿಗೆ ಹೋಗಿಬರಲೂ ಅನುಮತಿಕೊಟ್ಟಿದ್ದರು.

" ಚಿಕ್ಕಮ್ಮ , ರುಕ್ಕು ಎಲ್ಲಿ ಕಾಣಲೇ ಇಲ್ಲವಲ್ಲ ? "

ಎಂದ ವೆಂಕಟೇಶಯ್ಯ-ಮಾತಿಗೆ ಬೇರೆ ವಿಷಯ ತೋಚದೆ.

" ಇದ್ದಾಳಪ್ಪ. ಹಿತ್ತಲಿನಲ್ಲಿ ಬಟ್ಟೆ ಒಗೆಯುತ್ತಿದ್ದಾಳೆ "

ಎಂದರು ಕಮಲಮ್ಮ.

ಅಷ್ಟರಲ್ಲಿ ಸಭಾಪತಿಶಾಸ್ತ್ರಿಗಳು—

" ಏಳು ವೆಂಕಟೇಶ, ಊಟ ಮಾಡೋಣ " ಎಂದರು.

" ನನಗೆ ಊಟವೇ ಬೇಕಾಗಿಲ್ಲಣ್ಣ. ನರಸುವಿಗೆ ಗುಣವಾಗುವವರೆಗೆ ನನಗೆ ಮನಸ್ಸೇ ಸಮಾಧಾನವಿಲ್ಲ. "

" ಇದೇನು ಹುಚ್ಚು ವೆಂಕಟೇಶ ! ನೀನು ಊಟ ಮಾಡದಿದ್ದರೆ ನಿನ್ನ ಹೆಂಡತಿಗೆ ಗುಣವಾಗಿಬಿಡುತ್ತದೆಯೆ ?"

ಕೊನೆಗೆ ಸಭಾಪತಿಶಾಸ್ತ್ರಿಗಳ ಬಲವಂತಕ್ಕೆ ವೆಂಕಟೇಶಯ್ಯ ಊಟ ಮಾಡಿದ.

" ಚಿಕ್ಕಮ್ಮಾ , ನಾನಿನ್ನು ಹೋಗುತ್ತೇನೆ. ಮನೆಯಲ್ಲಿ ಯಾರೂ ದಿಕ್ಕಿಲ್ಲ. ಆ ಮಕ್ಕಳು ಏನು ಮಾಡಿಕೊಂಡಿವೆಯೋ ಏನೋ...."

" ಆ ಮಕ್ಕಳನ್ನಾದರೂ ಇಲ್ಲಿಗೆ ಕರೆದುಕೊಂಡು ಬರಬಾರದಾಗಿತ್ತೇನೋ ವೆಂಕಟೇಶೂ ? ನರಸುವಿಗೆ ಗುಣವಾಗುವವರೆಗೂ ಇಲ್ಲಿಯೇ ಬಿಟ್ಟ

ದ್ದರೆ ನಿನ್ನ ಗಂಟು ಏನು ಹೋಗುತ್ತಿತ್ತು "

"ಪರವಾಗಿಲ್ಲ ಚಿಕ್ಕಮ್ಮ. ಅವುಗಳದ್ದೇನೂ ಅಷ್ಟು ತಾಪತ್ರಯವಿಲ್ಲ"

"ಸರಿಯಪ್ಪ. ನಿನ್ನಿಷ್ಟ "

"ನೀವು ಬರುವುದಿಲ್ಲವೇ ಚಿಕ್ಕಮ್ಮ? ನಿಮ್ಮನ್ನು ಕರೆದುಕೊಂಡು ಹೋಗುವುದಕ್ಕೇ ನಾ ಬಂದಿದ್ದು"

"ಆಗಲಪ್ಪ, ಬರುತ್ತೇನೆ. ನಿಮ್ಮ ಚಿಕ್ಕಪ್ಪ ಇನ್ನೂ ಊಟಕ್ಕೇ ಎದ್ದಿಲ್ಲವಲ್ಲ "

"ಅಣ್ಣಯ್ಯನಾದರೂ ಬಂದಿದ್ದರೆ ಚೆನ್ನಾಗಿತ್ತು "

ಎನ್ನುತ್ತಾ ವೆಂಕಟೇಶಯ್ಯ ಸಭಾಪತಿ ಶಾಸ್ತ್ರಿಗಳ ಮುಖ ನೋಡಿದ.

"ನಾಲ್ಕು ಗಂಟೆ ಹೊತ್ತಿಗೆ ಅಮ್ಮನನ್ನು ಕರೆದುಕೊಂಡು ನಾನು ಬರುತ್ತೇನೆ ವೆಂಕಟೇಶ"

"ಜೊತೆಯಲ್ಲಿ ಅತ್ತಿಗೆಯನ್ನು ಕರೆದುಕೊಂಡು ಬಾ "

"ಅವಳೆಲ್ಲಿ ಬರುವುದಕ್ಕಾಗುತ್ತೆ ಮಗುವನ್ನು ಕಟ್ಟಿಕೊಂಡು "

ಎಂದರು ಸಭಾಪತಿಶಾಸ್ತ್ರಿಗಳು.

ವೆಂಕಟೇಶಯ್ಯ ಹೊರಟೊರಟ. ಅಷ್ಟರಲ್ಲಿ ಏನನ್ನೋ ಜ್ಞಾಪಿಸಿಕೊಂಡವನಂತೆ ಕಮಲಮ್ಮ ಅವನನ್ನು ಕರೆದರು.

"ಒಂದು ನಿಮಿಷ ಇರು ವೆಂಕಟೇಶೂ "

ಎನ್ನುತ್ತಾ ಅಡಿಗೆ ಮನೆಗೆ ಹೋದರು. ಹಿಂತಿರುಗುವಾಗ ಒಂದು ಟಿಫನ್ ಕ್ಯಾರಿಯರನ್ನು ತಂದು ವೆಂಕಟೇಶಯ್ಯನ ಕೈಯ್ಯಲ್ಲಿಟ್ಟರು.

"ಇದೇನು ಚಿಕ್ಕಮ್ಮ?"

"ಮಕ್ಕಳು ಹಸಿದುಕೊಂಡಿರುತ್ತವೇನೋ – ಪಾಪ....ಒಂದೊಂದು ತುತ್ತು ಅನ್ನವಿಟ್ಟಿದ್ದೇನೆ–ಅಷ್ಟೇಪ್ಪಾ "

—ಚಿಕ್ಕಮ್ಮನ ಅಂತಃಕರಣವನ್ನು ಕಂಡು ವೆಂಕಟೇಶಯ್ಯನ ಹೃದಯ ತುಂಬಿತು. ಮುಂದೆ ಮಾತನಾಡಲಾಗದೆ ಮನೆಗೆ ಮರಳಿದ.

ನರಸಮ್ಮನ ಸ್ಥಿತಿ ಇದ್ದ ಹಾಗೆಯೇ ಇದ್ದಿತು. ಹೆಚ್ಚೂ ಇಲ್ಲ–ಕಡಿಮೆಯೂ ಇಲ್ಲ. ಮೂರು ಮಕ್ಕಳೂ ಹಸಿದುಕೊಂಡೇ ಶಾಲೆಗೆ ಹೋಗಿದ್ದವು. ತೊಟ್ಟಿಲಲ್ಲಿದ್ದ ಕೈಗೂಸು ನಿಶ್ಚಿಂತೆಯಿಂದ ನಿದ್ರಿಸುತ್ತಿತ್ತು.

"ನರಸಾ....ನರಸಾ...."

ಗಂಡನ ಕರೆಗೆ, ಮೆಲ್ಲನೆ ಮಗ್ಗುಲು ಹೊರಳಿ ನೋಡಿದಳು ನರಸಮ್ಮ.

“ ಒಂದೇ ಒಂದು ತುತ್ತು ಊಟ ಮಾಡುತ್ತೀಯಾ ? ”

ನರಸಮ್ಮ ನಾಲಿಗೆಯಿಂದ ತುಟಿ ಸವರಿಕೊಂಡಳು.

ವೆಂಕಟೇಶಯ್ಯ ಟಿಫನ್ ಕ್ಯಾರಿಯರಿನಿಂದ ಅನ್ನತೆಗೆದು, ಚಿಕ್ಕ ತಟ್ಟೆಯಲ್ಲಿ ಹಾಕಿ ಕಲಸಿಕೊಟ್ಟ. ಎರಡು ತುತ್ತು ತಿಂದು, ಕಾಯಿಸಿದ ಉಳಿದ ನೀರನ್ನು ಕುಡಿದು ಮತ್ತೆ ಮಲಗಿದಳು.

ಶಾಲೆಯ ಮಧ್ಯಾನ್ಹದ ವಿರಾಮ ಸಮಯದಲ್ಲಿ ಮನೆಗೆ ಬಂದ ಮಕ್ಕಳು ಅನ್ನವನ್ನು ಊಟಮಾಡಿ, ತೆಪ್ಪನೆ ಹಿಂತಿರುಗಿದವು.

ಸುಮಾರು ನಾಲ್ಕು ಗಂಟೆಯ ವೇಳೆಗೆ ಸಭಾಪತಿಶಾಸ್ತ್ರಿಗಳು ತಾಯಿಯನ್ನು ತಂಗಿಯನ್ನೂ ಕರೆದುಕೊಂಡು ವೆಂಕಟೇಶಯ್ಯನ ಮನೆಗೆ ಬಂದರು. ದಾರಿಯಲ್ಲೇ ಭದ್ರಯ್ಯನ ಸಂದರ್ಶನವಾದರೂ ಅವರು ಅವನನ್ನು ಗಮನಿಸಿರಲಿಲ್ಲ. ಅವನು ಹಿಂಬಾಲಿಸಿ ಬಂದುದೂ ಅವರಿಗೆ ತಿಳಿಯದು. ಆದರೆ ಅವರು ಮನೆಯೊಳಗೆ ಅಡಿಯಿಡುವ ಮುನ್ನ, ಗಟ್ಟಿಯಾಗಿ ಕೆಮ್ಮಿ, ಗಂಟಲು ಸರಿಪಡಿಸಿಕೊಳ್ಳುವ ಶಬ್ದ ಕೇಳಿಸಿತು. ಸಹಜವಾಗಿ ಎಲ್ಲರೂ ಹಿಂತಿರುಗಿ ನೋಡಿದರು. ಭದ್ರಯ್ಯ ತನ್ನ ಮೀಸೆಯ ಮೇಲೆ ಕೈಯ್ಯಾಡಿಸುತ್ತಾ ರುಕ್ಮಿಣಿಯನ್ನೇ ನೋಡಿ ಶಬ್ದವಿಲ್ಲದಂತೆ ನಕ್ಕ. ಆ ದೃಶ್ಯವನ್ನು ಕಂಡ ಸಭಾಪತಿಶಾಸ್ತ್ರಿಗಳು ತುಂಬಾ ಕಸಿವಿಸಿಗೊಂಡರು.

ವೆಂಕಟೇಶಯ್ಯನ ಮನೆಗೆ ಬಂದ ಶಾಸ್ತ್ರಿಗಳ ಚಿತ್ತ ಚಂಚಲವಾಗಿತ್ತು. ಆದರೂ ಅದನ್ನು ತೋರ್ಪಡಿಸಿಕೊಳ್ಳದೆ ನರಸಮ್ಮನ ಬಳಿಗೆ ಬಂದು ನೋಡಿದರು.

“ ಈಗ ಹೇಗಿದೆಯಮ್ಮಾ ನರಸೂ ?”

—ಕಮಲಮ್ಮ ಕೇಳಿದರು.

ನರಸಮ್ಮ ಉತ್ತರಿಸದೆ ಅವರ ಮುಖವನ್ನು ನೋಡಿದಳು.

ಕಮಲಮ್ಮ ಅವಳ ಹಣೆಯಮೇಲೆ ಕೈಯಿಟ್ಟು ಮೃದುವಾಗಿ ಸವರಿದರು.

“ ಹೊಟ್ಟೆಗೆ ಏನೂ ಸೇರಲಿಲ್ಲವೇ ವೆಂಕಟೇಶೂ ?”

“ ನೀವು ಕೊಟ್ಟಿದ್ದ ಅನ್ನ ಒಂದು ತುತ್ತು ತಿಂದಳು ಚಿಕ್ಕಮ್ಮ”

—ಎಂದ ವೆಂಕಟೇಶಯ್ಯ.

“ ಡಾಕ್ಟರು ಏನಾದರೂ ಔಷಧಿ ಕೊಟ್ಟಿದ್ದಾರೆಯೆ ವೆಂಕಟೇಶ ?”

—ಎಂದು ಸಭಾಪತಿಶಾಸ್ತ್ರಿಗಳು ಕೇಳಿದರು.

" ಇಲ್ಲಣ್ಣ "

" ಅವರು ಏನೂ ಹೇಳಲಿಲ್ಲವೆ ?"

" ಏನೂ ಭಯವಿಲ್ಲವೆಂದರು ಅಷ್ಟೆ "

" ಔಷಧಿ....?"

" ಸಂಜೆಗೆ ಬರುತ್ತೇನೆ ಎಂದು ಹೇಳಿ ಹೋಗಿದ್ದಾರೆ "

ಸಭಾಪತಿಶಾಸ್ತ್ರಿಗಳಿಗೇಕೋ ಅನುಮಾನವಾಯಿತು. ಡಾಕ್ಟರು ಬಂದು ನೋಡಿ, ಔಷಧಿ ಕೊಡದೆ ಹೋಗುವುದುಂಟೆ ?- ಎಂದು ಸಂದೇಹ ಅವರಿಗೆ. ಬಹುಶಃ ವೆಂಕಟೇಶಯ್ಯ ಹಣದ ಮುಗ್ಗಟ್ಟಿನಿಂದ ಔಷಧಿ ತರದೆ ಹೀಗೇ ನಾದರೂ ಹೇಳುತ್ತಿರುವನೇನೋ ಎಂದೆನಿಸಿತು.

" ಮನೆಯಿಂದ ಸ್ವಲ್ಪ ಕಾಫಿ ತಂದಿದ್ದರೆ ಅತ್ತಿಗೆಗೆ ಕೊಡಬಹುದಾಗಿ ತ್ತಮ್ಮ " ಎಂದಳು ತಾಯಿಯ ಬಳಿ ಕುಳಿತಿದ್ದ ರುಕ್ಮಿಣಿ.

' ಕಾಫಿ ' ಎಂದೊಡನೆ ನರಸಮ್ಮ ತನ್ನ ನಾದಸಿಯ ಕಡೆಗೆ ನೋಡಿ ದಳು. ಆ ನೋಟದಲ್ಲಿ ' ಕಾಫಿಯ ಬಯಕೆ ' ಸ್ಪಷ್ಟವಾಗಿ ಕಾಣುತ್ತಿತ್ತು. ಕಾಫಿಯನ್ನು ಕಂಡರೆ ಮೊದಲಿನಿಂದಲೂ ನರಸಮ್ಮ ತುಂಬ ಇಷ್ಟಪಡುತ್ತಿದ್ದು ದನ್ನು ತಿಳಿದಿದ್ದ ರುಕ್ಮಿಣಿ ಆ ಮಾತನ್ನು ಬೇಕೆಂದೇ ಆಡಿದ್ದಳು.

" ಹೌದಮ್ಮ , ತಂದಿದ್ದರೆ ಚೆನ್ನಾಗಿತ್ತು. ನರಸೂಗೆ ಕಾಫಿ ಕಂಡರೆ ತುಂಬಾ ಇಷ್ಟ "

—ಎಂದು ದನಿಗೂಡಿಸಿದರು ಕಮಲಮ್ಮ.

ವೆಂಕಟೇಶಯ್ಯ ಸದ್ದುಮಾಡದೆ ಅಡಿಗೆಯ ಕೋಣೆಗೆ ಹೋಗಿ, ಒಲೆ ಹೊತ್ತಿಸತೊಡಗಿದ. ಅವನು ಹೊರಬಾರದಿದ್ದನ್ನು ಕಂಡು—

" ಏನು ಮಾಡುತ್ತಿದ್ದೀಯೋ ವೆಂಕಟೇಶೂ ?"

—ಎಂದರು ಕಮಲಮ್ಮ. ಉತ್ತರ ಬರಲಿಲ್ಲ. ತಾವೇ ಎದ್ದು ಹೋಗಿ ನೋಡಿದರು. ವೆಂಕಟೇಶಯ್ಯ ಕಾಫಿ ತಯಾರಿಸಲು ತರದೂದು ಮಾಡುತ್ತಿದ್ದುದು ಗೊತ್ತಾಯಿತು. ಕೂಡಲೇ ರುಕ್ಮಿಣಿಯನ್ನು ಕರೆದು—

" ಅವನು ಕೈ ಮೈ ಸುಟ್ಟುಕೊಂಡಾನು. ನೀನೇ ಹೋಗಿ, ಒಂದೇ ಒಂದು ಲೋಟ ಕಾಫಿ ಮಾಡಿ ನಿಮ್ಮತ್ತಿಗೆಗೆ ತಂದುಕೊಡಮ್ಮ "

ಎಂದರು. ರುಕ್ಮಣಿ ಅಡಿಗೆಮನೆಯನ್ನು ಹೊಕ್ಕಳು.

ಮುರಳಿ ತನ್ನ ಬಳಿಗೆ ಬಂದು ಕುಳಿತ ವೆಂಕಟೇಶಯ್ಯನನ್ನು—
"ನಿಮ್ಮ ಮನೆ ಪಕ್ಕದ ಮನೆಯಲ್ಲಿದ್ದಾನಲ್ಲಾ ಅವನು ಯಾರು ?"
ಎಂದು ಕೇಳಿದರು ಸಭಾಪತಿಶಾಸ್ತ್ರಿಗಳು.

"ಎಡಗಡೆಯೋ—ಬಲಗಡೆಯೋ ?"

"ಬಲಗಡೆ"

"ಅವನು 'ಭದ್ರಯ್ಯ' ಅಂತ...."

"ಏನು ಕೆಲಸ ಅವನಿಗೆ ?"

"ಅವನು ಶಕ್ತೀ ಉಪಾಸಕ. ಮಾಯ, ಮಾಟ, ಶೂನ್ಯ ಮೊದಲಾದ ವಿದ್ಯೆಗಳನ್ನೆಲ್ಲಾ ಕಲಿತಿದ್ದಾನೆ. ತುಂಬಾ ಒಳ್ಳೆಯವನು. ನಮಗೆ ಅವನಿಂದ ತುಂಬಾ ಸಹಾಯವಾಗಿದೆ"

ಒಮ್ಮೆಗೇ ಆ ಮಾತಿನ ಸತ್ಯತೆಯನ್ನು ಸಭಾಪತಿಶಾಸ್ತ್ರಿಗಳು ನಂಬಲಿಲ್ಲ.

"ನೀನು ಯಾರ ವಿಷಯ ಹೇಳುತ್ತಿದ್ದೀ ವೆಂಕಟೇಶ ?"

"ಅದೇ ನಮ್ಮ ಮನೆಯ ಬಲಗಡೆ ಪಕ್ಕದ ಮನೆಯಲ್ಲಿರುವ ಭದ್ರಯ್ಯನ ವಿಷಯ—ಮೀಸೆ ಬಿಟ್ಟುಕೊಂಡು, ಆಳು ಒಳ್ಳೆಯ ದಪ್ಪದಪ್ಪವಾಗಿದ್ದಾನಲ್ಲಾ ಅವನು. ಮನೆಯ ಮುಂದೆಯೇ 'ಶಕ್ತಿ ಪೂಜಾಮಂದಿರ' ಎಂದು ಬೋರ್ಡು ಹಾಕಿದ್ದಾನಲ್ಲಾ—ನೋಡಲಿಲ್ಲವೇ ?"

"ಓಹೋ !" ಎಂದಷ್ಟೇ ಹೇಳಿ ಸುಮ್ಮನಾದರು ಸಭಾಪತಿಶಾಸ್ತ್ರಿಗಳು.

ರುಕ್ಮಿಣಿ ಕಾಫಿ ಮಾಡಿ ತಂದು ನರಸಮ್ಮನಿಗೆ ಕೊಟ್ಟಳು.

"ಚೆನ್ನಾಗಿದೆಯಾ ಅತ್ತಿಗೆ ?"

ನರಸಮ್ಮ ಒಂದು ಗುಟುಕು ಕುಡಿದು, ಬಾಯಿ ಚಪ್ಪರಿಸಿದಳು. ತನ್ನ ಮೆಚ್ಚುಗೆಯನ್ನು ಕಣ್ಣುಗಳಲ್ಲಿಯೇ ಸೂಚಿಸಿದಳು.

"ಇನ್ನೂ ಮಿಕ್ಕಿದ್ದರೆ ನಿಮ್ಮಣ್ಣಂದಿರಿಗೆ ತಂದುಕೊಡಮ್ಮ"

ಕಮಲಮ್ಮ ಮಗಳಿಗೆ ಸೂಚಿಸಿದರು.

ರುಕ್ಮಿಣಿ ಎರಡು ಚಿಕ್ಕ ಬಟ್ಟಲುಗಳಲ್ಲಿ ಕಾಫಿಯನ್ನು ತಂದು ಸಭಾಪತಿ ಶಾಸ್ತ್ರಿಗಳಿಗೂ ವೆಂಕಟೇಶಯ್ಯನಿಗೂ ಕೊಟ್ಟಳು.

"ಪರವಾಗಿಲ್ಲ, ರುಕ್ಕು ಕಾಫಿ ಚೆನ್ನಾಗಿ ಮಾಡ್ತಾಳೆ"

ಎಂದ ವೆಂಕಟೇಶಯ್ಯ.

"ಸರಿ, ಕಾಫಿ ಮಾಡುವುದೇ ಬರದಿದ್ದರೆ, ನಾಳೆ ಗಂಡನ ಮನೆಯಲ್ಲಿ

ಹ್ಯಾಗೆ ನಿಭಾಯಿಸ್ತಾಳೋ!"

ಕಮಲಮ್ಮ ನಕ್ಕು ನುಡಿದರು. ನಾಚಿದ ರುಕ್ಮಿಣಿ ಅಡಿಗೆಮನೆಗೆ ಧಾವಿಸಿದಳು. ಮಿಕ್ಕಿದ್ದ ಕಾಫಿಯನ್ನು ತಾನು ಕುಡಿದು ಹೊರಗೆ ಬಂದಳು. ನರಸಮ್ಮನ ಹೊದಿಕೆ ಸರಿಪಡಿಸಿ, ಅವಳ ಪಕ್ಕದಲ್ಲಿಯೇ ಕುಳಿತಳು.

ಅದೇ ಸಮಯಕ್ಕೆ—

"ಯಂಕ್ಟೇಶಯ್ಯನೋರೇ........"

ಎಂದು ಕೂಗುತ್ತಾ ಭದ್ರಯ್ಯ ಒಳಗೆ ಬಂದಿದ್ದ.

"ಬನ್ನಿ ಭದ್ರಯ್ಯನವರೆ ಬನ್ನಿ....ಕೂತುಕೊಳ್ಳಿ"

ವೆಂಕಟೇಶಯ್ಯ ಆದರದಿಂದ ಸ್ವಾಗತಿಸಿದ.

ಭದ್ರಯ್ಯ ಕುಳಿತುಕೊಳ್ಳದೆ, ಹಾಗೆಯೇ ನಿಂತು ರುಕ್ಮಿಣಿಯತ್ತ ಕಣ್ಣು ಹರಿಸಿದ—ಆಸೆಯ ಕಣ್ಣು. ಸಭಾಪತಿಶಾಸ್ತ್ರಿಗಳು ಅದನ್ನು ಗಮನಿಸಿದರು. ಸೂಕ್ಷ್ಮಪರಿತ ಕಮಲಮ್ಮ—

"ರುಕ್ಮಿಣೀ, ಒಳಗೆ ಹೋಗಿ ನಿಮ್ಮತ್ತಿಗೆಗೆ ಸ್ವಲ್ಪ ಬಿಸಿನೀರು ಕಾಯಿಸಮ್ಮ – ಕುಡಿಯುವುದಕ್ಕೆ"

ಎಂದರು. ರುಕ್ಮಿಣಿ ಅಡಿಗೆಮನೆ ಸೇರಿದಳು.

ಭದ್ರಯ್ಯನಿಗೆ ಮುಖ್ಯವಾಗಿ ತಾನು ಬಯಸಿದ ಆ 'ಹುಡುಗಿ'ಯ ಹೆಸರು ತಿಳಿದುಕೊಳ್ಳಬೇಕಾಗಿತ್ತು. ಅದೀಗ ಹೆಚ್ಚು ಶ್ರಮವಿಲ್ಲದೆ ತಾನಾಗಿಯೇ ತಿಳಿಯಿತು!

"ಇದೇಕೆ, ನಿಂತೇ ಇದ್ದೀರಲ್ಲ ಭದ್ರಯ್ಯನವರೆ? ಕೂತುಕೊಳ್ಳಿ"

"ಇಲ್ಲ ಸ್ವಾಮಿ, 'ದಂಡ್'ಕ ಓಗ್ಬೇಕು. ಅಂಗೇ ಅವ್ವಾವ್ರನ್ನ ನೋಡ್ಕಂಡ್ ಓಗಾವ ಅಂತ ಬಂದೆ"

"ಅವ್ವಾವ್ರು ಇದ್ದಹಾಗೆ ಇದ್ದಾರೆ....ಹೆಚ್ಚೂ ಇಲ್ಲ, ಕಮ್ಮಿಯೂ ಇಲ್ಲ"

ನಿರಾಶೆಯ ಧ್ವನಿಯಲ್ಲಿ ನುಡಿದ ವೆಂಕಟೇಶಯ್ಯ.

"ಡಾಕ್ಟರು ಬರ್‌ಲಿಲ್ವಾ ಸ್ವಾಮಿ ಇನ್ನೊಂದ್ ಕಿತ್ತಾ?"

"ಈಗ್ ಬರ್ತೀನಿ ಅಂತ ಹೇಳಿ ಹೋಗಿದ್ದಾರೆ....ಇನ್ನೇನು ಬರಬಹುದು"

"ದುಡ್ಡೆಷ್ಟಾನಾ ಖರ್ಚಾಗ್ಲಿ – ಒಳ್ಳೇ ಔಸ್ದಿ ಕೊಡಿ ಅನ್ನಿ ಸ್ವಾಮಿ"

"ಸದ್ಯ, ದುಡ್ಡಿನ ಮಾತಿರಲಿ ಭದ್ರಯ್ಯನೋರೆ. ಅವಳಿಗೆ ಗುಣವಾದರೆ

ಸಾಕು....ಎಷ್ಟು ಬೇಕಾದರೂ ಕೊಟ್ಟೇನು"

ಭದ್ರಯ್ಯ ಅಡಿಗೆ ಕೋಣೆಯತ್ತ ದೃಷ್ಟಿ ಹರಿಸಿದ. ರುಕ್ಮಿಣಿ ಕಾಣಿಸುತ್ತಾಳೇನೋ ಎಂಬುದು ಅವನ ಆಸೆ. ಆದರೆ ಆಕೆ ಕಾಣಿಸುವ ಸಂಭವವಿರಲಿಲ್ಲ.

"ಸರಿ, ನಾನಿನ್ನ ಓಯ್ತಾನಿ ಸ್ವಾಮಿ"

ಭದ್ರಯ್ಯ ಭಾರವಾದ ಹೆಜ್ಜೆಯಿಡುತ್ತಾ ಹೊರಹೊರಟ. ಬಾಗಿಲ ಬಳಿಗೆ ಬಂದಾಗ, ಇನ್ನೊಮ್ಮೆ ತಿರುಗಿ ನೋಡಿದ. ರುಕ್ಮಿಣಿ ಕಾಣಿಸಲಿಲ್ಲ. ವೆಂಕಟೇಶಯ್ಯ ಬೀದಿಯುವರೆಗೂ ಅವನನ್ನು ಹಿಂಬಾಲಿಸಿದ.

"ಯಾರ್ಸ್ವಾಮಿ ನೆಂಟರು ಬಂದವ್ರೆ ?"

"ನನ್ನ ಚಿಕ್ಕಮ್ಮನೂ ಅವರ ಮಕ್ಕಳೂ ಬಂದಿದ್ದಾರೆ"

"ಎಲ್ ನಿಂಕ"

"ಮಲ್ಲೇಶ್ವರದಿಂದ"

"ಮಲ್ಲೇಸ್ವರದಲ್ಲಿ ಎಲ್ಲಿ ಸ್ವಾಮಿ ?"

"ಗಣೇಶನ ಗುಡಿ ಹತ್ತಿರಾನೇ ಇದೆ ಅವರ ಮನೆ—ಭದ್ರಯ್ಯನವರೆ"

"ಓಹೋ....!"

ಆಶ್ಚರ್ಯ ಸೂಚಿಸುತ್ತಾ ಭದ್ರಯ್ಯ ವೆಂಕಟೇಶಯ್ಯನ ಮುಖವನ್ನು ನೋಡಿ—"ದುಡ್‌ಗಿಡ್ ಬೇಕಾಗಯ್ತಾ ಸ್ವಾಮಿ ?" ಎಂದು ಕೇಳಿದ.

"ಬೇಡಾ ಭದ್ರಯ್ಯನವರೆ. ಸದ್ಯಕ್ಕೆ ನನ್ನ ಹತ್ತಿರ ಇದೆ"

"ಅಂಗಾದ್ರೆ ನಾನ್ ಓಗ್ಲಾ ?"

"ಒಳ್ಳೇದು ಹೋಗಿಬನ್ನಿ" ಎನ್ನುತ್ತಾ ವೆಂಕಟೇಶಯ್ಯ ಒಳಗೆ ಬಂದ.

ಸ್ವಲ್ಪ ಹೊತ್ತಿನ ಬಳಿಕ ಡಾಕ್ಟರು ಬಂದರು.

"ಜ್ವರ ಈಗ ಹೇಗಿದೆ ?"

"ಹಾಗೆಯೇ ಇದೆ ಸಾರ್"

"ಆಹಾರ....?"

"ಮಧ್ಯಾಹ್ನ ಒಂದು ತುತ್ತು ತಿಂದಳು. ಈಗ ಸ್ವಲ್ಪ ಕಾಫಿ ಕುಡಿದಳು"

ಡಾಕ್ಟರು ಉಷ್ಣಮಾಪಕದಿಂದ ಜ್ವರವನ್ನು ಅಳೆದರು.

"ಇಷ್ಟೊಂದು ಜ್ವರವಿದೆ. ಅನ್ನ ಹೇಗೆ ಸೇರಿತು ?....ಬಾಯಿ ಕೆಟ್ಟಿಲ್ಲವೇನಮ್ಮ ?"

'ಇಲ್ಲ'ವೆಂಬಂತೆ ತಲೆಯಾಡಿಸಿದಳು ನರಸಮ್ಮ.

"ಒಂದು ಇಂಜಕ್ಷನ್ ಕೊಟ್ಟು ನೋಡೋಣವೇ ವೆಂಕಟೇಶಯ್ಯ?"

ವೆಂಕಟೇಶಯ್ಯ ಸಭಾಪತಿಗಳ ಮುಖ ನೋಡಿದ.

"ಕೊಡಿ ಡಾಕ್ಟರೆ" ಎಂದರು ಶಾಸ್ತ್ರಿಗಳು.

ನರಸಮ್ಮನ ತೋಳಿಗೆ ಇಂಜಕ್ಷನ್ ಕೊಟ್ಟು—

"ರಾತ್ರಿ ಎಂಟು ಗಂಟೆ ಹೊತ್ತಿಗೆ ಈ ಔಷಧಿ ಕುಡಿಸಿ"

ಎಂದು ಹೇಳಿ ಡಾಕ್ಟರು ಹಿಂತಿರುಗಿದರು.

"ಈ ಕೆಲಸವನ್ನು ನೀನು ಬೆಳಿಗ್ಗೆಯೇ ಮಾಡಿಸಬೇಕಾಗಿತ್ತು"

ಎಂದರು ಸಭಾಪತಿಶಾಸ್ತ್ರಿಗಳು.

ಹತ್ತು ನಿಮಿಷಗಳ ಬಳಿಕ ನರಸಮ್ಮ ಪ್ರಯಾಸದಿಂದ ಏಳಲು ಪ್ರಯತ್ನಿಸಿದಳು. ಕಮಲಮ್ಮ ಆಸರೆಕೊಟ್ಟು ಅವಳನ್ನು ಹಾಸಿಗೆಯ ಮೇಲೆ ಕೂಡಿಸಿದರು. ಕುಳಿತೊಡನೆ ನರಸಮ್ಮ ವಾಂತಿಮಾಡಿದಳು. ಸ್ವಲ್ಪಹೊತ್ತಿಗೆ ಮುಂಚೆ ಕುಡಿದಿದ್ದ ಕಾಫಿ, ಮಧ್ಯಾಹ್ನ ತಿಂದಿದ್ದ ಅನ್ನ – ಎಲ್ಲಾ ಹೊರಗೆ ಬಂದವು.

ಬಿಸಿನೀರಿನಿಂದ ಬಾಯಿ ತೊಳೆದುಕೊಂಡು ಮತ್ತೆ ಮಲಗಿದಳು ನರಸಮ್ಮ. ಮೊದಲಿಗಿಂತ ಹೆಚ್ಚು ನಿಶ್ಯಕ್ತಳಾಗಿದ್ದಳು ಆಕೆ.

ಆ ಸ್ಥಳವನ್ನು ಶುಚಿಮಾಡಿದ ರುಕ್ಮಿಣಿ, ಅತ್ತಿಗೆಯ ಸ್ಥಿತಿಯನ್ನು ಕಂಡು ತುಂಬಾ ಕಳವಳಗೊಂಡಿದ್ದಳು. ಅಷ್ಟರಲ್ಲಿ ಅಳತೊಡಗಿದ್ದ ತೊಟ್ಟಿಲ ಕೂಸನ್ನು ಎತ್ತಿಕೊಂಡು ಆಕೆ ನರಸಮ್ಮನ ಬಳಿ ಬಂದು ಕುಳಿತಳು.

ಶಾಲೆಗೆ ಹೋಗಿದ್ದ ನರಸಮ್ಮನ ಮೂರು ಮಕ್ಕಳೂ ಒಟ್ಟಿಗೇ ಹಿಂತಿರುಗಿದವು. ಅವನ್ನು ಕಂಡಾಗ ಕಮಲಮ್ಮನವರಿಗೆ ಏಕೋ ಕರುಳು 'ಚುರ್' ಎಂದಿತು.

"ಪಾಪ, ಆ ಮಕ್ಕಳಿಗಾದರೂ ಒಂದಿಷ್ಟು ಕಾಫಿ ಇಟ್ಟೆಯೇನೇ ರುಕ್ಕೂ?"

ತಾಯಿಯ ಮಾತು ಕೇಳಿ, ತನ್ನ ತಪ್ಪನ್ನರಿತುಕೊಂಡ ರುಕ್ಮಿಣಿ, ಕಾಫಿ ಮಿಗಿಸಿಡದಿದ್ದುದಕ್ಕಾಗಿ ಪಶ್ಚಾತ್ತಾಪ ಸೂಚಿಸಿದಳು.

"ಒಳಗೆ ಹೋಗಿ, ಬೇಗ ಒಂದಿಷ್ಟು ಅಕ್ಕಿ ತೊಳೆದಿಡು. ಪಾಪ, ಆ ಕಂದಗಳಿಗೆ ಎಷ್ಟು ಹಸಿವೋ ಏನೋ"

ಎನ್ನುತ್ತಾ ಕಮಲಮ್ಮ ಮಗಳ ಕೈಯ್ಯಿಂದ ಮಗುವನ್ನು ಕರೆದುಕೊಂಡು,

ಆಕೆಯನ್ನು ಅಡಿಗೆ ಕೋಣೆಗೆ ಕಳುಹಿದರು.

"ಅಮ್ಮಾ, ನೀನು ಇಲ್ಲೇ ಇದ್ದು ಬಿಡು" ಎಂದರು ಸಭಾಪತಿಶಾಸ್ತ್ರಿಗಳು.

ಮಾತು ಸಮಯೋಚಿತವಾಗಿದ್ದುದರಿಂದ ತಾಯಿ ಒಪ್ಪಿಕೊಂಡರು.

"ರುಕ್ಕು....?"

"ಅವಳನ್ನು ನಾನು ಕರೆದುಕೊಂಡು ಹೋಗುತ್ತೇನೆ"

ರುಕ್ಮಿಣಿ ಅಕ್ಕಿ ತೊಳೆದಿಟ್ಟು ಹೊರ ಬಂದಳು.

ಗೋಡೆಯ ಗಡಿಯಾರ ಆರು ಬಾರಿಸಿತು.

"ನಾವಿನ್ನು ಹೊರಡುತ್ತೇವೆ ವೆಂಕಟೇಶ"

"ನಾಳೆ ಈ ಕಡೆ ಬರುತ್ತೀಯಾ ಅಣ್ಣಾ?"

"ಹ್ನು, ಅಷ್ಟರಲ್ಲಿ ಏನಾದರೂ ಹೆಚ್ಚು-ಕಡಿಮೆಯಾದರೆ ಹೇಳಿ ಕಳಿಸು"

"ಆಗಲಣ್ಣಾ"

"ನಾಳೆ ಬೆಳಿಗ್ಗೆ ಇನ್ನೊಂದು ಸಾರಿ ಡಾಕ್ಟರನ್ನು ಕರೆದುಕೊಂಡು ಬಂದು ತೋರಿಸು."

"ಹ್ನು"

"ಬಾಮ್ಮ ರುಕ್ಮಿಣಿ, ನಾವಿನ್ನು ಹೋಗೋಣ"

'ಹೋಗಿ ಬರುತ್ತೇನೆ' ಎಂದು ಅತ್ತಿಗೆಗೆ ಹೇಳಿ ರುಕ್ಮಿಣಿ ಅಣ್ಣನನ್ನು ಹಿಂಬಾಲಿಸಿದಳು.

ಇಬ್ಬರೂ ಸ್ವಲ್ಪದೂರ ನಡೆದು ಬಂದು, ಅನಂತರ ಮಲ್ಲೇಶ್ವರದ ಬಸ್ಸು ಹತ್ತಿ ಮನೆ ಸೇರಿದರು.

ಮನೆಗೆ ಬರುವ ವೇಳೆಗೆ, ಶಂಕರಶಾಸ್ತ್ರಿಗಳೊಡನೆ ಮಾತಾನಾಡುತ್ತಾ ಸಭಾಪತಿಶಾಸ್ತ್ರಿಗಳ ಆಪ್ತಮಿತ್ರ ಸುದರ್ಶನಯ್ಯಂಗಾರ್‍ಯರು ಕಾದುಕುಳಿತಿದ್ದರು.

"ಅಲಸೂರು ಪೇಟೆಗೆ ಹೋಗಿದ್ದೆಯಂತೆ. ಇಷ್ಟು ಬೇಗ ಬಂದು ಬಿಟ್ಟೆಯಾ ಸಭಾಪತಿ?" ಸುದರ್ಶನಯ್ಯಂಗಾರ್‍ಯರು ಆಶ್ಚರ್‍ಯದಿಂದ ಕೇಳಿದರು.

"ನರಸಮ್ಮ ಹೇಗಿದ್ದಾಳಪ್ಪ?" ತಂದೆ ಶಂಕರಶಾಸ್ತ್ರಿಗಳು ಪ್ರಶ್ನಿಸಿದರು.

"ಜ್ವರ ಬಿಟ್ಟಿಲ್ಲ. ತುಂಬಾ ನಿತ್ರಾಣ. ನಮ್ಮೆದುರಿಗೇ ಡಾಕ್ಟರು ಬಂದು ಇಂಜಕ್ಷನ್ ಕೊಟ್ಟು ಹೋದರು. ಹತ್ತು ನಿಮಿಷಕ್ಕೇ ವಾಂತಿಯಾಗಿ ಇನ್ನಷ್ಟು ಸುಸ್ತು ಮಾಡಿಬಿಟ್ಟಿತು."

"ಪಾಪ, ಏನು ಗ್ರಹಚಾರವಪ್ಪ" ಎನ್ನುತ್ತಾ ನಿಟ್ಟುಸಿರಿಟ್ಟರು ಶಂಕರ

ಶಾಸ್ತ್ರಿಗಳು.

"ಬಂದು ಬಿಟ್ಟೆ ಸುದರ್ಶನಂ. ಸಂಧ್ಯಾವಂದನೆ ಮುಗಿಸಿ ಬರುತ್ತೇನೆ" ಎಂದರು ಸಭಾಪತಿ ಶಾಸ್ತ್ರಿಗಳು ಸುದರ್ಶನಯ್ಯಂಗಾರ್ಯರನ್ನು ಕುರಿತು.

"ಸ್ವಲ್ಪ ಹೊತ್ತೇನು! ನೀನು ಬರುವವರೆಗೂ ಕಾದಿರುತ್ತೇನೆ. ನಿಧಾನವಾಗಿ ಆಗಲಪ್ಪ ನಿನ್ನ ಸಂಧ್ಯಾವಂದನೆ!"

ನಕ್ಕು ನುಡಿದರು ಸುದರ್ಶನಯ್ಯಂಗಾರ್ಯರು.

ಮತ್ತೆ ಶಂಕರಶಾಸ್ತ್ರಿಗಳು ಮಾತು ಆರಂಭಿಸಿದರು—

"ನಿಮ್ಮ ತಂದೆಗೆ ಷಷ್ಠ್ಯಬ್ಧಿಪೂರ್ತಿ ಶಾಂತಿ ಮಾಡಿಸಿದರಲ್ಲಾ — ಆಗ ಯಾರನ್ನು ಕರೆಸಿದ್ದಿರಿ ಪೌರೋಹಿತ್ಯಕ್ಕೆ?"

"ವೇದಾಂತಂ ಕೃಷ್ಣಮಾಚಾರ್ಯರು ಬಂದಿದ್ದರು"

"ಯಾರು—ಆ ಗವೀಪುರದಲ್ಲಿದ್ದಾನಲ್ಲ ಆ ಕೃಷ್ಣಮಾಚಾರೀ ತಾನೆ?"

"ಹ್ಞು....ಯಾಕೆ?"

"ಅಯ್ಯೋ, ಅವನು ಶುದ್ಧ ವಾಮಾಚಾರಿ ಐಂಗಾರ್ಯರೇ!"

"ಸುಳ್ಳು ಸ್ವಾಮಿ. ಯಾರು ಹೇಳಿದರು ನಿಮಗೆ?"

"ನಾನು ಕಾಣೆನೇ ಅವನನ್ನ?"

"ಅಂದರೆ....?"

"ನಮ್ಮ ಮತ್ತಿಗೆ ಹಳ್ಳಿ ಪಕ್ಕದಲ್ಲೇ ಅವನ ಸ್ವಂತ ಸ್ಥಳ"

"ತಾಳೇಪುರ...."

"ಹೌದು, ಅವನು ಆ ತಾಳೇಪುರದಲ್ಲಿದ್ದಾಗಲೇ ನಾನು ಚೆನ್ನಾಗಿ ನೋಡಿದ್ದೇನೆ."

"ನನಗೇನೂ ಹಾಗೆ ಕಾಣಿಸುವುದಿಲ್ಲವಲ್ಲಾ—ಅವನ ನಡತೆ"

"ಹಾಗೆಲ್ಲಾ ಕಾಣಿಸುವುದಿಲ್ಲಾ ಐಂಗಾರ್ಯರೇ ........ ಅವನು 'ಬಿಲ್ವ ಯಕ್ಷಿಣೀದೇವಿ'ಯನ್ನು ಪ್ರಸನ್ನ ಮಾಡಿಕೊಳ್ಳುವುದಕ್ಕೆ ಪಟ್ಟ ಪಾಡನ್ನು ನಾನು ಕಣ್ಣಾರೆ ಕಂಡಿದ್ದೇನೆ!"

"ಹಾಗಾದರೆ ಯಕ್ಷಿಣೀದೇವಿ ಅವರಿಗೆ ಪ್ರಸನ್ನಳಾಗಿದ್ದಾಳೆಯೆ?"

"ಆಗುತ್ತಿದ್ದಳೋ ಏನೋ—ಆದರೆ ಅಷ್ಟರಲ್ಲಿ ಈ ವಿಷಯ ಅವನ ತಂದೆಗೆ ತಿಳಿದು ದೊಡ್ಡ ರಾದ್ಧಾಂತವೇ ಆಯಿತು"

"ಈ ಸಮಾಚಾರ ನಮ್ಮ ಜಾತಿಯವರ್‍ಯಾರಿಗೂ ತಿಳಿದೇ ಇಲ್ಲವಲ್ಲ!"

" ಮುಚ್ಚಿಟ್ಟರೆ ಹೇಗೆ ತಿಳಿಯುತ್ತದೆ ?"

" ಅಂದರೆ, ಆ ಕಾಲದಲ್ಲಿ 'ಗುರುಮನೆ'ಯವರೇ ಮುಚ್ಚಿಟ್ಟರೂ ಅನ್ನಿ.

" ಹೌದು "

" ಯಾವ ಗುರುಗಳು ?"

" ನಿಮ್ಮ ಗುರುಗಳು, ನಮ್ಮ ಗುರುಗಳು—ಎಲ್ಲಾ ಸೇರಿದ್ದರು. "

" ಹಾಗಾದರೆ, ಆಗ ದೊಡ್ಡ ಗಲಾಟೆಯೇ ಆಯಿತೂ ಅನ್ನಿ "

" ಹ್ಞಂ. ಈ ಕೃಷ್ಣಮಾಚಾರೀ ಪ್ರತಿದಿನ ಅರ್ಧರಾತ್ರಿ ಹೊತ್ತಿನಲ್ಲಿ ಊರ ಹೊರಗಡೆ ಇರುವ ಮತ್ತಿಗೆ ಹಳ್ಳಿ ಬಯಲು ಶಿವನ ಗುಡಿ ತೋಪಿಗೆ ಹೋಗಿ, ಗುಂಪಾಗಿದ್ದ ಬಿಲ್ಪತ್ರೆ ಮರ ಹತ್ತಿ ಕೂತುಕೊಳ್ಳುತ್ತಿದ್ದ. ಇವನಿಗೆ 'ಷಾಮಿಾಲು' ನಮ್ಮ ಮಜ್ಜಿಗೆ ಹಳ್ಳಿ ಮುನಿತಾಯಪ್ಪ."

" ಮುನಿತಾಯಪ್ಪ . .....! "

" ಹ್ಞೂಂ. ಯಾಕೆ, ಅವನು ನಿಮಗೆ ಗೊತ್ತೇನು ? "

" ಈಗ ಇಲ್ಲೇ ಮಾವಳ್ಳಿಯಲ್ಲಿ ಮನೆಮಾಡಿಕೊಂಡಿದ್ದಾನಲ್ಲಾ ಸ್ವಾಮಿಾ—ಅವನೇ ? "

" ಹೌದಪ್ಪಾ ಹೌದು ! ನಿಮಗೂ ಅವನ ಗುರ್ತಿದೆ ! "

" ನನಗೂ ಅವನಿಗೂ ತುಂಬಾ ಪರಿಚಯವಿದೆ ಸ್ವಾಮಿ "

" ಸರಿ, ಸರಿ, ಆ ಮುನಿತಾಯಪ್ಪನೇ ಈ ಕೃಷ್ಣಮಾಚಾರೀಗೆ ಗುರು "

" ಮುನಿತಾಯಪ್ಪನಿಗೆ ಈ ವಾಮಾಚಾರವೆಲ್ಲಾ ಚೆನ್ನಾಗಿ ಗೊತ್ತಿದೆ ಸ್ವಾಮಿ "

" ಅದಕ್ಕೇ ಅವನು ಇವನಿಗೆ ಗುರುವಾದ !....ಕೃಷ್ಣಮಾಚಾರೀಗೆ ಅವನೇ ಪ್ರತಿದಿನ ಒಂದು ಕೋಳೀಮರಿ, ಒಂದು ಬುಡೀ ಹೆಂಡ ಒದಗಿಸುತ್ತಿದ್ದ."

" ಹಾಗಾದರೆ ಕೃಷ್ಣಮಾಚಾರ್ಯರು........"

" ಛೆ, ಛೆ, ಮುಂದೆ ಹೇಳಬೇಡ. ಮನಸ್ಸಿನಲ್ಲೇ ತಿಳುಕೋ ! ಮಾಡಿದವರ ಪಾಪ ಆಡಿದವರ ಬಾಯಲ್ಲಂತೆ !! "

—ಶಂಕರಶಾಸ್ತ್ರಿಗಳಿಗೆ ನಗು ಬಂದಿತ್ತು.

" ಹೇಳಿ ಸ್ವಾಮಿಾ, ತುಂಬಾ ಸ್ವಾರಸ್ಯವಾಗಿದೆ "

—ಎಂದರು ಸುದರ್ಶನಯ್ಯಂಗಾರ್ಯರು.

" ಆ ಮುನಿತಾಯಪ್ಪ ಹೇಳಿಕೊಟ್ಟ ಮಂತ್ರವನ್ನ ಮೂರು ಸಾವಿರ ಸಾರಿ ಉಚ್ಚರಿಸಿ, ಮರದ ಮೇಲೆಯೇ ಕೋಳಿಯನ್ನು ಕುಯ್ದು, ಅದರ ಮಾಂಸವನ್ನೂ, ಹೆಂಡವನ್ನೂ, 'ಯಕ್ಷಿಣೀದೇವಿ'ಗೆ ನೈವೇದ್ಯ ಮಾಡಿ–ಅವನೂ ನೈವೇದ್ಯ ಮಾಡಿಕೊಳ್ಳುತ್ತಿದ್ದ ! "

" ರಾಮ ರಾಮ ! ಬ್ರಾಹ್ಮಣ–ಅದರಲ್ಲಿಯೂ ಇವತ್ತು ಪುರೋಹಿತನಾಗಿ ಮೆರೆಯುತ್ತಿರುವವನು ಆಗ ಕೋಳಿ ತಿಂದು ಹೆಂಡ ಕುಡಿಯುತ್ತಿದ್ದನೆ ?"

" ಹೋಗಲಿ ಬಿಡಿ ಐಂಗಾರ್‍ಯರೆ, ಅವನು ಏನಾದರೂ ಮಾಡಿಕೊಳ್ಳಲಿ–ನಮಗೇನು ? " ಎನ್ನುತ್ತಾ ಶಂಕರಶಾಸ್ತ್ರಿಗಳು ಮುಂದುವರಿಸಿದರು.

" ಹೀಗೇ ಒಂದು ತಿಂಗಳು ಸಾಧನೆ ಮಾಡಬೇಕು ಅಂತ ಹೇಳಿದ್ದ ಮುನಿತಾಯಪ್ಪ. ಆದರೆ ಅಷ್ಟರಲ್ಲೇ ಬಂತು ಕೃಷ್ಣಮಾಚಾರೀಗೆ ಪೀಕಲಾಟ !"

" ಏನಾಯಿತು ಸ್ವಾಮಿ ? "

" ಒಂದು ದಿನ ನಮ್ಮ ಗುರುಗಳು ಏಕಾಂತವನ್ನರಸುತ್ತಾ ಆ ತೋಪಿಗೆ ಬಂದರು. ಯಾವುದಾದರೂ ಲೌಕಿಕ ಚಿಂತೆ ಅನವಶ್ಯಕವಾಗಿ ಅವರನ್ನು ಮುತ್ತಿ ಬಾಧಿಸತೊಡಗಿದರೆ, ಸಮಯ ಸಂದರ್ಭಗಳನ್ನು ನೋಡದೆ ಎಲ್ಲಿಂದರಲ್ಲಿಗೆ ಏಕಾಂತ ವಾಸಕ್ಕೆ ಹೊರಟುಬಿಡುತ್ತಾರೆ. ಆ ದಿನ ಅರ್ಧ ರಾತ್ರಿಯಾಗಿದ್ದಾಗ ಶಿವನ ಗುಡಿ ತೋಪಿಗೆ ಬಂದು ತಿರುಗಾಡುತ್ತಿದ್ದರು. ತಿರುಗಾಡುತ್ತಾ ಬಿಲ್ಪತ್ರೆಮರದ ಬಳಿಗೆ ಬಂದಾಗ–' ಓಂ ಹ್ರೀಂ ಕ್ಲೀಂ ಐಂ ಶ್ರೀಂ ಮಹಾಯಕ್ಷಿಣ್ಯೈ ಸರ್ವೈಶ್ವರ್ಯ ಪ್ರದಾತ್ರ್ಯೈ ನಮಃ'–ಎಂದು ಮಂತ್ರ ಜಪಿಸುತ್ತಿದ್ದುದು ಸ್ಪಷ್ಟವಾಗಿ ಕೇಳಿಬಂದಿತು. ಗುರುಗಳು ಸುತ್ತುಮುತ್ತ ನೋಡಿದರು. ಯಾರೂ ಕಾಣಿಸಲಿಲ್ಲ. ಹಾಗೆಯೇ ನಿಂತು ಇನ್ನೊಂದು ಸಾರಿ ಆ ಮಂತ್ರವನ್ನು ಸರಿಯಾಗ ಆಲಿಸಿದರು. " ಇದು ' ರುದ್ರಯಾಮಾಳತಂತ್ರ 'ದಲ್ಲಿ ಹೇಳಲ್ಪಟ್ಟ ಮಂತ್ರ ಯಾವುದೋ ಯಕ್ಷಿಣೀದೇವತೆಯನ್ನು ಪ್ರಸನ್ನ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಂತಿದೆ. ಆದರೆ ಈ ಸಾಧನೆ ಮಾಡುತ್ತಿರುವವರು ಯಾರು ? " ಎಂದು ಮನಸ್ಸಿನಲ್ಲಿಯೇ ಯೋಚಿಸುತ್ತಾ ಬಿಲ್ವಪತ್ರೆ ಮರದ ಕೆಳಗೇ ನಿಂತರು. ಯಾವುದೋ ಲೌಕಿಕ ಚಿಂತೆಯನ್ನು ಮರೆಯಲು ಬಂದವರಿಗೆ ಈ ಮತ್ತೊಂದು ಚಿಂತೆ ಬೇರೆ ಅಂಟಿಕೊಂಡಿತು. ಸ್ವಲ್ಪ ಹೊತ್ತಿನ ನಂತರ ಮಂತ್ರ ಕೇಳಿಬರುವುದು ನಿಂತಿತು. ಗುರುಗಳಂತೂ ಹಾಗೆಯೇ ನಿಂತಿದ್ದರು. ಆಷ್ಟರಲ್ಲಿ ಅವರ ತಲೆಯಮೇಲೆ ಬಳಬಳನೆ ಏನೋ

ತೊಟ್ಟಿಟ್ಟಂತಾಯಿತು. ಮುಂಡನ ಮಾಡಿಕೊಂಡ ತಲೆಯ ಮೇಲೆ ಕೈಯಿಟ್ಟು ನೋಡಿದರು....ಕೈಯೆಲ್ಲಾ ರಕ್ತ ! ಅರಿಷಡ್ವರ್ಗಗಳನ್ನು ತ್ಯಜಿಸಿದ್ದ ಗುರುಗಳಿಗೆ ಕೂಡಲೇ ಕೋಪ ಬಂದಿತು ! 'ಎಲಾ, ಯಾರಲ್ಲಿ ? ಕೆಳಗಿಳಿ' ಎಂದು ರೋಷ ದಿಂದ ಕೂಗಿಕೊಂಡರು. ಅಷ್ಟಕ್ಕೇ ಕೃಷ್ಣಮಾಚಾರೀಗೆ ಜಂಘಾಬಲ ಉಡುಗಿ ಹೋಯಿತು. ತನ್ನ ಸಾಧನೆಯನ್ನು ಯಾರೋ ಪತ್ತೆ ಹಚ್ಚಿಬಿಟ್ಟರಲ್ಲಾ ಎಂದು ಗಾಬರಿಯಾಯಿತು. 'ಇಳಿದೆಯೋನೋ ಚಂಡಾಲಾ ! ಮಾತ್ರ ಗಾಮಿ !!' ಎಂದು ಇನ್ನೊಂದುಸಾರಿ ಗುರುಗಳು ಅಬ್ಬರಿಸಿದರು. 'ಮಾತ್ರ ಗಾಮಿ' ಎಂದೊಡನೆ ಯಾರೋ ಸಂಸ್ಕೃತ ಬಲ್ಲವರೇ ಇರಬೇಕು ಎಂದು ಕೃಷ್ಣಮಾಚಾರಿ ತರ್ಕಿಸಿದ. ಆ ಸುತ್ತುಮುತ್ತ ಸಂಸ್ಕೃತ ಬಲ್ಲವರೆಂದರೆ ನಮ್ಮ ತಂದೆ, ಕೃಷ್ಣಮಾಚಾರಿಯ ತಂದೆ ಮತ್ತು ಗುರುಗಳು. ಆ ಹೊತ್ತಿ ನಲ್ಲಿ ಕೃಷ್ಣಮಾಚಾರೀಗೆ ನಮ್ಮ ತಂದೆಯ ನೆನಪಾಯಿತು. ಆದರೆ ಧ್ವನಿ ಅವರದ್ದಲ್ಲವಲ್ಲಾ ಎಂದು ಅನುಮಾನ. ಅಲ್ಲದೆ ಅಷ್ಟು ಹೊತ್ತಿನಲ್ಲಿ ನಮ್ಮ ತಂದೆ ಅಲ್ಲಿಗೆ ಬರಲಾರರೆಂದು ಅವನಿಗೆ ತಿಳಿದಿತ್ತು. 'ಹಾಗಾದರೆ ಇನ್ನಾರು? ಗುರುಗಳೇ....? ಇದ್ದರೂ ಇರಬಹುದು !' ಎಂದುಕೊಂಡ. ಮೈನಡುಗಿತು. ಇಳಿಯುವುದಕ್ಕೇ ಹೆದರಿಕೆ. ಹಾಗೆಯೇ ಮರದ ಮೇಲೆಯೇ ಕುಳಿತು ಬಿಟ್ಟ !...."

"ಕೊನೆಗೂ ಇಳಿಯಲೇ ಇಲ್ಲವೇ ?"

"ಇಳಿಯದಿದ್ದರೆ ಗುರುಗಳು ಬಿಡುತ್ತಾರೆಯೆ ? ಅವರೂ ನಮ್ಮ ಹಾಗೆಯೇ ಚಿಕ್ಕಂದಿನಲ್ಲಿ 'ಮರಕೋತಿ' ಆಡಿದ್ದವರು ! ಮರ ಹತ್ತುವುದಕ್ಕೂ ಚೆನ್ನಾಗಿ ಬರುತ್ತಿತ್ತು. ಕೃಷ್ಣಮಾಚಾರಿ ಎಷ್ಟು ಹೊತ್ತಾದರೂ ಇಳಿಯದಿ ದ್ದುದನ್ನು ಕಂಡು ಗುರುಗಳು ತಾವೇ ಮರಹತ್ತಿಬಿಟ್ಟರು !"

"ಚೆನ್ನಾಯಿತು !"

ಎನ್ನುತ್ತಾ ಸುದರ್ಶನಯ್ಯಂಗಾರ್ಯರು ಚಪ್ಪಾಳೆ ತಟ್ಟಿ ನಕ್ಕರು.

"ಕೃಷ್ಣಮಾಚಾರಿಯ ಗುಂಡಿಗೆ ಬಡಿದುಕೊಂಡಿತು. ಅವನು ತುಟ್ಟ ತುದೀಕೊಂಬೆಗೆ ಹತ್ತಿ ಕುಳಿತುಬಿಟ್ಟ. ಗುರುಗಳೂ ಅಲ್ಲಿಗೇ ಹತ್ತಿಹೋದರು. ಕೃಷ್ಣಮಾಚಾರಿ ಕೂಡಲೇ ಕಪಿಯಂತೆ ಕೆಳಗಿನ ಕೊಂಬೆಗೆ ನೆಗೆದ. ಗುರುಗಳೂ ನೆಗೆದರು. ಅವನು ಸರಸರನೆ ಮರದಿಂದಿಳಿದು ಮನೆಯ ಕಡೆಗೆ ಓಡಿದ. ಗುರು ಗಳೂ ಕೆಳಗೆ ಧುಮುಕಿ ಅವನ ಹಿಂದೆಯೇ ಓಡಿದರು. ಆ ಕತ್ತಲೆಯಲ್ಲಿ

ಇಬ್ಬರೂ ಒಂದೇಸಮನೆ ಓಡಿದರು. ಕೃಷ್ಣಮಾಚಾರಿ ಮನೆಯ ಹತ್ತಿರ ಬಂದು ಆತುರಾತುರದಿಂದ 'ಡಬಡಬ'ನೆ ಬಾಗಿಲುತಟ್ಟಿದ. ಒಳಗಿನಿಂದ ಅವನ ತಾಯಿ ಬಂದು ಬಾಗಿಲು ತೆಗೆದರು. ಅಷ್ಟರಲ್ಲಿ ಗುರುಗಳೂ ಅಲ್ಲಿಗೆ ಬಂದು ಬಿಟ್ಟರು ! "

" ಅಂತೂ ಸಿಕ್ಕಿ ಹಾಕಿಕೊಂಡು ಬಿಟ್ಟನಲ್ಲಾ !"

" ಇನ್ನೂ ಎಲ್ಲಿ ಬಂತು !....ಇಲ್ಲೇ ಇರುವುದು ಸ್ವಾರಸ್ಯ !! "

—ಜೋಮು ಹಿಡಿದ ಕಾಲನ್ನು ನೀಟಿ, ಗೋಡೆಗೊರಗಿ ಕುಳಿತು, ಮತ್ತೆ ಮುಂದುವರಿಸಿದರು ಶಂಕರಶಾಸ್ತ್ರಿಗಳು:

" ಬಾಗಿಲು ತೆಗೆದ ಕೃಷ್ಣಮಾಚಾರಿಯ ತಾಯಿ 'ಯಾಕೋ ಮಗು ಹೀಗೆ ಓಡಿ ಬಂದೆ? ಮೇಲುಸಿರು ಬಿಡುತ್ತಿದ್ದೀಯಲ್ಲೋ ಕೃಷ್ಣ ' ಎಂದು ಕೇಳಿದರು. ಒಳಗೆ ನುಗ್ಗಿದ ಕೃಷ್ಣಮಾಚಾರಿ, ಕೂಡಲೇ ಬಾಗಿಲು ಹಾಕಿ, ಸರಿಯಾಗಿ ಭದ್ರಪಡಿಸಿದ. ತಾಯಿ—ಮಗ ಒಳಗೆ ಹೋಗುವಷ್ಟರಲ್ಲಿ ಗುರುಗಳು ಜೋರಾಗಿ ಬಾಗಿಲು ತಟ್ಟಿದರು. 'ಯಾರು ? ' ಎನ್ನುತ್ತಾ ತಾಯಿ ಬಾಗಿಲು ತೆಗೆಯಲು ಹೋಗುವಷ್ಟರಲ್ಲಿ ಕೃಷ್ಣಮಾಚಾರಿ ಆಕೆಯನ್ನು ತಡೆದು —' ಬಾಗಿಲು ತೆಗೆಯ ಬೇಡಮ್ಮ. ಅದು ಬ್ರಹ್ಮರಾಕ್ಷಸ! ನನ್ನನ್ನ ಒಂದೇ ಸಮನಾಗಿ ಅಟ್ಟಿಸಿಕೊಂಡು ಬಂದಿದೆ. ಈಗ ಒಳಗೆ ನುಗ್ಗುವುದಕ್ಕೆ ಬಾಗಿಲು ತಟ್ಟುತ್ತಿದೆ' ಎಂದ. ಆ ಮಾತು ಕೇಳಿ ತಾಯಿ ಕಿಟಾರನೆ ಕಿರಿಚಿಕೊಳ್ಳ ಬೇಕೆಂದಿದ್ದಳು. ಅಷ್ಟರಲ್ಲಿ ಕೃಷ್ಣಮಾಚಾರಿ ಆಕೆಯ ಬಾಯಿಗೆ ಕೈಯ್ಯಿಟ್ಟು ಮುಚ್ಚಿ, ಒಳಗೆ ಕರೆದುಕೊಂಡು ಹೋಗಿ ಮಲಗಿಸಿದ. 'ಮಗೂ, ನಿನ್ನ ತಂದೇನ ಎಬ್ಬಿಸಿ, ಹೇಳೋ' ಎಂದರು ತಾಯಿ. 'ಬೇಡಮ್ಮ, ಇಷ್ಟು ಹೊತ್ತಿನಲ್ಲಿ ಹೊರಗಡೆ ಹೋಗಿದ್ದಕ್ಕೆ ಅವರು ನನ್ನನ್ನೇ ಬೈಯ್ತಾರೆ' ಎಂದು ಸಮಾಧಾನ ಹೇಳಿದ ಕೃಷ್ಣಮಾಚಾರಿ. ಗುರುಗಳು ಇನ್ನೂ ನಾಲ್ಕಾರು ಬಾರಿ ಬಾಗಿಲು ಬಡಿದು ಬೇಸರಗೊಂಡರು. ಕೊನೆಗೆ ಬಾಗಿಲ ಬಳಿಯೇ ಕುಳಿತು ಬಿಟ್ಟರು! ರಾತ್ರಿಯೆಲ್ಲಾ ಕೃಷ್ಣಮಾಚಾರಿಯ ಜೀವ 'ಪುಕಪುಕ' ಎನ್ನುತ್ತಿತ್ತು. ನಿದ್ರೆಬಾರದೆ, ಸುಮ್ಮನೆ ಹೊರಳಾಡಿ ಹೊರಳಾಡಿ ರಾತ್ರಿಯನ್ನು ಕಳೆದ. ಬೆಳಗಿನ ಝಾವದಲ್ಲಿ ಎಂದಿನಂತೆ ಎದ್ದ ಕೃಷ್ಣಮಾಚಾರಿಯ ತಂದೆ ಷಟಗೋಪಾಲಾಚಾರ್ಯರು ಬಾಗಿಲು ತೆಗೆದುಕೊಂಡು ಹೊರಬಂದರು. ಯಾರೋ ಹೊಸಲಿನ ಬಳಿಯೇ ಕುಳಿತು ತೂಕಡಿಸುತ್ತಿದ್ದುದು ಕಾಣಿಸಿತು.

ತಲೆಯೆಲ್ಲಾ ರಕ್ತದಿಂದ ಕೆಂಪಾಗಿತ್ತು. ಹೊದಿಕೆಯ ಬಟ್ಟೆಯ ಮೇಲೂ ರಕ್ತದ ಕಲೆಗಳು ಇದ್ದವು. ಆಚಾರ್ಯರು ಹತ್ತಿರ ಹೋಗಿ ಮುಖವನ್ನು ನೋಡಿದರು....ಗುರುಗಳು !...... .ಮತ್ತಿಗೆ ಹಳ್ಳಿ ಮಠದ ಗುರುಗಳು !! ತಮ್ಮ ಕಣ್ಣನ್ನು ತಾವೇ ನಂಬದಾದರು ಆಚಾರ್ಯರು ! ಅಷ್ಟರಲ್ಲಿ ಎಚ್ಚೆತ್ತ ಗುರುಗಳು ದುರುಗುಟ್ಟಿಕೊಂಡು ಆಚಾರ್ಯರನ್ನೇ ನೋಡಿದರು. 'ಬೆಳಗಾಗ ಇದೇನು ಗ್ರಹಚಾರವೋ' ಎಂದು ಮನಸ್ಸಿನಲ್ಲಿಯೇ ಅಂದುಕೊಂಡ ಆಚಾರ್ಯರು ಗುರು ದೃಷ್ಟಿಯನ್ನು ಎದುರಿಸಲಾರದೆ ಕಂಪಿಸಿದರು. ಹಲ್ಲು ಮುಡಿ ಕಟ್ಟಿದ ಗುರು ಗಳು—'ಪಟಗೋಪಾಲಾಚಾರ್ಯರೇ........' ಎಂದು ಕೂಗಿದರು. 'ಮಹಾ ಸ್ವಾಮಿಾ' ಎನ್ನುತ್ತಾ ನಡುಗುವ ಕಾಲುಗಳಿಂದ ಹತ್ತಿರ ಬಂದರು ಆಚಾರ್ಯರು. 'ಕರೀರಿ ನಿಮ್ಮಗನನ್ನ'—ಎಂದು ಅಬ್ಬರಿಸಿದರು ಗುರುಗಳು. ಅಂಜುತ್ತಂಜುತ್ತಾ ಒಳಗೆ ನಡೆದು ಆಚಾರ್ಯರು, ಮಗನನ್ನು ಬಲವಂತದಿಂದ ಎಬ್ಬಿಸಿ, ಅವನ ರೆಟ್ಟೆ ಹಿಡಿದು ಹೊರಗೆ ಕರೆತಂದರು. ಕೃಷ್ಣಮಾಚಾರಿ ತಲೆ ತಗ್ಗಿಸಿಕೊಂಡು ನಿಂತ. 'ಬ್ರಹ್ಮರಾಕ್ಷಸನನ್ನು ನೋಡು—ಎಂದು ಹೇಳಿ ನಿಮ್ಮ ಕುಮಾರ ಕಂಠೀರವನಿಗೆ'—ಎಂದರು ಗುರುಗಳು. ದಿಗ್ಭ್ರಮೆ ಗೊಂಡ ಆಚಾರ್ಯರು ಸುತ್ತಲೂ ನೋಡಿದರು. ಯಾರೂ ಕಾಣಿಸಲಿಲ್ಲ. 'ಇದೋ ಇಲ್ಲಿ !' ಎಂದು ತಮ್ಮನ್ನೇ ತೋರಿಸಿಕೊಂಡು ಹೇಳಿದರು ಗುರುಗಳು. ತಮ್ಮ ಮಗನಿಂದ ಏನೋ ಅನಾಹುತ ನಡೆದಿದೆ – ಆಗಬಾರದ ಕೆಲಸ ಆಗಿದೆ – ಎಂದು ಆಚಾರ್ಯರಿಗೆ ಹೊಳೆಯಿತು. 'ಏನು ಮಾಡಿ ಬಿಟ್ಟೆಯೋ ಚಂಡಾಲ ? ಬಾಯಿ ಬಿಡೋ....ನಿಜ ಹೇಳೋ....ಇಲ್ಲದಿದ್ದರೆ ಇವತ್ತು ನಿನ್ನ ಕೋದಂಡ ಹಾಕಿ ಬಿಡುತ್ತೇನೆ' ಎಂದು ಆಚಾರ್ಯರು ಮಗನನ್ನು ಹೆದರಿಸಿದರು. ಕುಮಾರ ಕಂಠೀರವ ಬಾಯೇ ಬಿಡಲಿಲ್ಲ ! ನಡೆದ ಸಂಗತಿಯನ್ನು ಗುರುಗಳೇ ವಿವರಿಸಿದರು. ಮಗನ ಅನೀತಿ – ದುರ್ನಡತೆ ಗಳನ್ನು ಆ ಹಿರಿಯರ ಬಾಯಿಂದ ಕೇಳಿದ ಆಚಾರ್ಯರು ಕುಗ್ಗಿಹೋದರು. ಹಾಗೆಯೇ ಗುರುಗಳ ಕಾಲು ಹಿಡಿದುಕೊಂಡು 'ಅರಿಯದೆ ಆಗಿ ಹೋದ ಅಪರಾಧ. ತಾವು ದೊಡ್ಡವರು. ದೊಡ್ಡ ಮನಸ್ಸಿನಿಂದ ನಮ್ಮನ್ನು ಮನ್ನಿಸಿ ಕಾಪಾಡಬೇಕು. ತಾವು ಅಭಯ ಕೊಟ್ಟ ಹೊರತು ನಾನು ಈ ಪಾದಗಳನ್ನು ಬಿಡುವುದಿಲ್ಲ' – ಎಂದು ಗೋಳಾಡಿದರು. ಮಗನ ದುರ್ನಡತೆಗೂ ಜಾತಿ ಭ್ರಷ್ಟತೆಗೂ ಕೂಡಲೇ ಮಠದ ಗುರುಗಳನ್ನು ಕರೆಸಿ ಪ್ರಾಯಶ್ಚಿತ್ತ ಮಾಡಿಸ

ಬೇಕೆಂದೂ, ತಮ್ಮ ಪ್ರಾಯಶ್ಚಿತ್ತಕ್ಕಾಗಿ ಐದುನೂರು ರೂಪಾಯಿ ದಂಡ ತೆರಬೇಕೆಂತಲೂ ಗುರುಗಳು ತೀರ್ಮಾನ ಹೇಳಿದರು. ಆಚಾರ್ಯರಿಗೆ 'ಐನೂರು' ಎನ್ನುವುದೇನೂ ಹೆಚ್ಚಾಗಿರಲಿಲ್ಲ. ಕೂಡಲೇ ಕಾಣಿಕೆ ಒಪ್ಪಿಸಿ ಅವರನ್ನು ಕಳುಹಿಸಿಕೊಟ್ಟರು. ಕೃಷ್ಣಮಾಚಾರಿಯನ್ನು ಅಂದಿನಿಂದ ಒಂದು ತಿಂಗಳವರೆಗೆ ಕೊಠಡಿಯಲ್ಲಿ ಕೂಡಿಹಾಕಿ, ಅಳತೆಯಾಗಿ ಊಟ ಕೊಡಿಸಿದರು ಆಚಾರ್ಯರು. ಆಮೇಲೆ ಕೃಷ್ಣಮಾಚಾರೀಗೆ ಬುದ್ಧಿ ಬಂತು ಅಂತ ಕಾಣುತ್ತೆ !"

ಶಂಕರಶಾಸ್ತ್ರಿಗಳು ಕಥೆ ಹೇಳಿ ಮುಗಿಸಿದರು.

"ಚೆನ್ನಾಗಿದೆ ಸ್ವಾಮಿ – ಕೃಷ್ಣಮಾಚಾರ್ಯರ ಚರಿತ್ರೆ !"

ಎಂದರು ಸುದರ್ಶನಯ್ಯಂಗಾರ್ಯರು.

"ಇತ್ತೀಚೆಗೆ, ಮತ್ತೆ ವಾಮಾಚಾರದ ಸಾಧನೆಗೆ ಷುರು ಮಾಡಿದ್ದಾನಂತೆ. ಅದಕ್ಕೇ ನಾನು ನಿಮ್ಮನ್ನು ಕೇಳಿದ್ದು"

"ಆ ವಿಷಯ ನನಗೆ ಗೊತ್ತಿಲ್ಲ ಸ್ವಾಮಿ"

"ವಾಮಾಚಾರ ಕಲಿಯುತ್ತಾ ಪೌರೋಹಿತ್ಯ ಮಾಡುವವನಿಗೂ – ಅವನಿಂದ ಮಾಡಿಸಿಕೊಳ್ಳುವವರಿಗೂ ಯಾವ ಶ್ರೇಯಸ್ಸೂ ಇಲ್ಲ ಐಂಗಾರ್ಯರೆ. ಪುರೋಹಿತನಿಗಂತೂ ರೌರವ ನರಕ ಮೀಸಲಾಗಿಟ್ಟಿದ್ದು !"

"ಈ ವಿಷಯವೆಲ್ಲಾ ನನಗೆ ತಿಳಿಯದು ಸ್ವಾಮಿ. ಮೊದಲೇ ಗೊತ್ತಾಗಿದ್ದರೆ ಅವರನ್ನು ಕರೆಸುತ್ತಲೇ ಇರಲಿಲ್ಲ"

"ಹೋಗಲಿ ಬಿಡಿ. ಆಗಿದ್ದಾಗಿ ಹೋಯಿತು"

ಎಂದು ಮಾತು ಮುಗಿಸಿದರು ಶಂಕರಶಾಸ್ತ್ರಿಗಳು.

ಸಂಧ್ಯಾವಂದನೆ ಮುಗಿಸಿದ ಸಭಾಪತಿಶಾಸ್ತ್ರಿಗಳು ಅಲ್ಲಿಗೆ ಬಂದು ನಿಂತು ಎಷ್ಟೋ ಹೊತ್ತಾಗಿತ್ತು. ಕಥೆ ಕೇಳುವ ಉತ್ಸಾಹದಲ್ಲಿ ಸುದರ್ಶನಯ್ಯಂಗಾರ್ಯರು ಅವರನ್ನು ಗಮನಿಸಿರಲಿಲ್ಲ.

"ನೋಡಿದೆಯಾ ಸುದರ್ಶನ, ಎಂತೆಂತಹ ಜನರಿದ್ದಾರೆ ಈ ಲೋಕದಲ್ಲಿ !"

ಕೃಷ್ಣಮಾಚಾರಿಯ ಕಥೆಯನ್ನು ಸ್ವಲ್ಪಮಟ್ಟಿಗೆ ಕಿವಿಗೆ ಹಾಕಿಕೊಂಡಿದ್ದ ಸಭಾಪತಿಶಾಸ್ತ್ರಿಗಳು ಕೇಳಿದರು.

"ವಿಶಾಲ ಲೋಕ – ವಿಚಿತ್ರ ಜನ"

ಎಂದು ವೇದಾಂತಿಯಂತೆ ನುಡಿಯುತ್ತಾ ಎದ್ದ ಸುದರ್ಶನಯ್ಯಂಗಾರ್ಯರು ಶಂಕರಶಾಸ್ತ್ರಿಗಳಿಗೆ 'ಹೋಗಿ ಬರುತ್ತೇನೆ' ಎಂದು ಹೇಳಿ, ನಮಸ್ಕರಿಸಿ, ಸಭಾಪತಿಶಾಸ್ತ್ರಿಗಳೊಡನೆ ಹೊರಟರು. ಇಬ್ಬರೂ ಮಾತನಾಡುತ್ತಾ ಗಣೇಶನ ಗುಡಿಯ ಪಕ್ಕದಲ್ಲಿ ಉಪವನ ನಿರ್ಮಾಣಕ್ಕೆ ಸಿದ್ಧವಾಗಿದ್ದ ಆಟದ ಬಯಲಿಗೆ ಬಂದು ಕುಳಿತರು.

"ಇವತ್ತು ನನ್ನ ಮನಸ್ಸಿಗೆ ನೆಮ್ಮದಿಯೇ ಇಲ್ಲ ಸುದರ್ಶನ"

ಎಂದರು ಸಭಾಪತಿಶಾಸ್ತ್ರಿಗಳು. ಅವರ ದನಿಯಲ್ಲಿ ಬೇಸರ ಕಾಣುತ್ತಿತ್ತು.

ಮಿತ್ರನ ಮಾತು ಕೇಳಿ ಚಕಿತರಾದ ಸುದರ್ಶನಯ್ಯಂಗಾರ್ಯರು ಕುತೂಹಲದಿಂದ ಕೇಳಿದರು.—

"ಯಾಕೆ ಸಭಾಪತಿ, ಏನಾಯಿತು ಅಂಥಾದ್ದು? ಮೈಯ್ಯಿಗೆ ಸರಿಯಿಲ್ಲವೆ?"

"ಮೈಯ್ಯಿಗೆ ಸರಿಯಿಲ್ಲದೆ ಏನು? ಮನಸ್ಸಿಗೆ ನೆಮ್ಮದಿಯಿಲ್ಲ-ಅಷ್ಟೆ"

"ಅಂದರೆ. ..?"

ಅರ್ಥವಾಗದವರಂತೆ ಸುದರ್ಶನಯ್ಯಂಗಾರ್ಯರು ಬೆರಗುಗಂಗಳಿಂದ ನಿಟ್ಟಿಸಿ ನೋಡಿದಾಗ, ಸಭಾಪತಿಶಾಸ್ತ್ರಿಗಳು ಅಂದು ವೆಂಕಟೇಶಯ್ಯನ ಮನೆಯ ಬಳಿ ನಡೆದ ಘಟನೆಯನ್ನೂ, ನರಸಮ್ಮನ ಕಾಯಿಲೆಯನ್ನೂ ಕೂಲಂಕಷವಾಗಿ ವಿವರಿಸಿದರು.

ಸುದರ್ಶನಯ್ಯಂಗಾರ್ಯರಿಗೆ ಏಕೋ ಮಾತು ಹೊರಡಲಿಲ್ಲ. ಅವರು ಚಿತ್ರದ ಗೊಂಬೆಯಂತೆ ಸುಮ್ಮನೆ ಕುಳಿತುಬಿಟ್ಟಿದ್ದರು.

"ಪರಿಸ್ಥಿತಿ ಹೀಗೆ ಇದ್ದರೆ ನನ್ನ ತಲೆ ಸಿಡಿದು ಹೋಗುತ್ತದೆ ಸುದರ್ಶನ"

ಮಿತ್ರನಿಂದ ಉತ್ತರವೇ ಬರಲಿಲ್ಲ.

"ಯಾಕೆ ಸುದರ್ಶನ – ನನ್ನೊಬ್ಬನನ್ನೇ ಒಂದು ಕಡೆ ಬಿಟ್ಟುಬಿಟ್ಟೆಯಲ್ಲ. ನನ್ನ ಮಾತು ನಿನಗೂ ಬೇಜಾರಾಯಿತೆ?"

"ಛೆ, ಎಂಥಾ ಮಾತಾಡ್ತೀ ಸಭಾಪತಿ! ನೀನು ಏನು ಮಾತಾಡಿದರೂ ನನಗೆ ಬೇಜಾರಿಲ್ಲ. ಆದರೆ ಪ್ರಂಪಚದ ವಿಷಯಕ್ಕೆ ನನಗೆ ತುಂಬಾ ಬೇಜಾರು ಬಂದಿದೆ"

"ಯಾಕೆ ಸುದರ್ಶನ?"

"ಹೌದು. ಇತ್ತೀಚೆಗಂತೂ ಈ ವಾಮಾಚಾರಿಗಳ, ಮಂತ್ರಗಾರರ

ಪ್ರಾಬಲ್ಯ ಹೆಚ್ಚಿಹೋಗಿದೆ. 'ತಾಯಿ' ಎಂದು ಭಾವಿಸಬೇಕಾದ ಕಡೆ 'ಹೆಂಡತಿ' ಎಂದು ಕಾಮಿಸುತ್ತಾರೆ....ದೇವರು ಯಾಕಾದರೂ ಈ ವಿದ್ಯೆಯನ್ನು ಸೃಷ್ಟಿಸಿದನೋ ಅನಿಸುತ್ತದೆ"

"ದೇವರನ್ನೇಕೆ ನಿಂದಿಸಬೇಕು ಸುದರ್ಶನ? ಅವನು ಸಮಸ್ತವನ್ನೂ ಕೇವಲ ತನ್ನ ವಿನೋದಕ್ಕಾಗಿ ಸೃಷ್ಟಿಸಿಕೊಂಡಿದ್ದಾನೆ"

"ಅವನ ವಿನೋದ ಪ್ರಾಪಂಚಿಕರಿಗೆ ಪ್ರಾಣಸಂಕಟ"

"ಅದು ತಪ್ಪು ಭಾವನೆ. 'ಅತಿ ಆಸೆ ಗತಿಗೇಡು' ಎನ್ನುವ ಹಾಗೆ ಮನುಷ್ಯ ಬಯಸಬಾರದ್ದನ್ನು ಬಯಸಿ ಪ್ರಾಣಸಂಕಟ ತಂದುಕೊಳ್ಳುತ್ತಾನೆ. ಅದಕ್ಕೆ ಬದಲು ಸೃಷ್ಟಿಕರ್ತನ ವಿನೋದದಲ್ಲಿ ನಾವೂ ಭಾಗಿಗಳಾಗಿ ಸಂತೋಷ ಸುಖವನ್ನು ಅನುಭವಿಸಿದರೆ, ಬೇಡವೆಂದು ತಡೆಯುತ್ತಾನೆಯೆ ದೇವರು ?"

"ಅದೇನೋ ನಿಜ. ಆದರೆ ಅಷ್ಟು ತಿಳಿವು ಎಲ್ಲರಿಗೂ ಬರಬೇಕಲ್ಲಾ !"

"ಅಲ್ಲೇ ಬಂದಿರುವುದು ತೊಡಕು !"

ಎಂದು ನಕ್ಕರು ಸಭಾಪತಿಶಾಸ್ತ್ರಿಗಳು. ಸುದರ್ಶನಯ್ಯಂಗಾರ್ಯರಿಗೂ ನಗು ಬಂದಿತು.

ಎರಡು ಕ್ಷಣ ಮಿತ್ರರಿಬ್ಬರೂ ಮೌನವಾಗಿದ್ದರು. ಅನಂತರ ಸಭಾಪತಿ ಶಾಸ್ತ್ರಿಗಳೇ ಮಾತು ಆರಂಭಿಸಿದರು—

"ಈಗ ರುಕ್ಕೂದೇ ಒಂದು ದೊಡ್ಡ ಯೋಚನೆಯಾಗಿದೆಯಲ್ಲಪ್ಪ ನನಗೆ. ಮದುವೆ ಮಾಡಿಬಿಡೋಣವೆಂದರೆ ವರನೂ ಸಿಕ್ಕಲಿಲ್ಲ."

"ರುಕ್ಕಮ್ಮನ ಮದುವೆ ಹಾಗಿರಲಪ್ಪ. ಭದ್ರಯ್ಯನ ವಿಚಾರ ಹೇಳು"

"ಆ ವಿಚಾರ ನಾನೇನು ಹೇಳಲಿ ಸುದರ್ಶನ? ಅವನ ಕೆಟ್ಟಕಣ್ಣು ಚುಚ್ಚುವುದಕ್ಕೆ ನನ್ನಿಂದಾಗುತ್ತದೇನು ?"

"ಹಾಗೆಂದು ಸುಮ್ಮನೆ ಬಿಟ್ಟುಬಿಡುವುದಕ್ಕಾಗುತ್ತದೇನು ?"

"ನನಗೂ ವಾಮಾಚಾರವೋ—ಮಂತ್ರವಿದ್ಯೆಯೋ ಬಂದಿದ್ದರೆ, ಕಚ್ಚೆ ಕಟ್ಟಿ ಒಂದು ಕೈ ತೋರಿಸಿಬಿಡುತ್ತಿದ್ದೆ" ಎಂದರು ಸಭಾಪತಿಶಾಸ್ತ್ರಿಗಳು.

ಸುದರ್ಶನಯ್ಯಂಗಾರ್ಯರು ಸ್ವಲ್ಪ ಹೊತ್ತು ಯೋಚಿಸಿ—

"ಸಭಾಪತಿ, ನನಗೊಂದು ಯೋಚನೆ ಹೊಳೆದಿದೆ....ಮಾವಳ್ಳಿಯಲ್ಲಿ ನನಗೆ ತಿಳಿದವನು ಒಬ್ಬ ಇದ್ದಾನೆ—ಮುನಿತಾಯಪ್ಪ ಅಂತ. ಮತ್ತಿಗೆಹಳ್ಳಿ

ಯಲ್ಲಿದ್ದಾಗ ನಿಮ್ಮ ತಂದೆಗೂ ಅವನ ಪರಿಚಯವಿತ್ತಂತೆ. ಅವನನ್ನು ಹೋಗಿ ಹಿಡಿದರೆ, ಭದ್ರಯ್ಯನ ಕಣ್ಣು ಚುಚ್ಚುವುದಕ್ಕೆ ಅನುಕೂಲವಾಗಬಹುದು"

"ಕಂಡವರನ್ನು ಮುಂದಕ್ಕೆ ತಳ್ಳಿ ಆಳ ನೋಡುವುದು ಸರಿಯೆ ಸುದರ್ಶನ ?"

"ಅಸ್ತ್ರವನ್ನೆದುರಿಸಲು ಇನ್ನೊಂದು ಅಸ್ತ್ರ ಬಿಡಲೇಬೇಕಲ್ಲವೇ ?"

"ಅದು ನಿಜ"

"ಅದಕ್ಕೋಸ್ಕರವೇ ಭದ್ರಯ್ಯನನ್ನು ಎದುರಿಸಲು ಮುನಿತಾಯಪ್ಪ !"

"ಹಾಗಾದರೆ ಅವನನ್ನು ಯಾವಾಗ ನೋಡೋಣ ?"

"ನಿನಗೆ ಪುರಸತ್ತಾದಾಗ"

"ನಾಳೆ ಬೆಳಿಗ್ಗೆ ಹೋಗೋಣವೇ ?"

"ಆಗಲಿ" ಎಂದರು ಸುದರ್ಶನಯ್ಯಂಗಾರ್ರು.

ಮಿತ್ರರಿಬ್ಬರೂ ತಮ್ಮ ತಮ್ಮ ಮನೆ ಸೇರಿದರು.

ಮರುದಿನ ಬೆಳಗಾದೊಡನೆ ವೆಂಕಟೇಶಯ್ಯ ಓಡಿಬಂದಿದ್ದ—ಸಭಾಪತಿ ಶಾಸ್ತ್ರಿಗಳ ಮನೆಗೆ. ಶಂಕರಶಾಸ್ತ್ರಿಗಳು ಜನಿವಾರಕ್ಕೆ ತಕಲಿ ನೂಲುತಾ ಜಗುಲಿಯ ಮೇಲೆ ಕುಳಿತಿದ್ದರು.

"ಚಿಕ್ಕಪ್ಪಾ, ಅಣ್ಣಯ್ಯ ಇಲ್ಲವೆ ?"

"ಸ್ನಾನ ಮಾಡ್ತಾ ಇದ್ದಾನೆ. ಒಳಗೆ ಬಾಪ್ಪ"

ವೆಂಕಟೇಶಯ್ಯ ಜಗುಲಿಯ ಕಂಭಕ್ಕೆ ಒರಗಿ ಕುಳಿತು ನಿಟ್ಟುಸಿರುಬಿಟ್ಟ.

"ನಿನ್ನ ಹೆಂಡತಿಗೆ ಹೇಗಿದೆಯಪ್ಪಾ ಈಗ ?"

"ಮೇಲ್ಗಣ್ಣು - ತೇಲ್ಗಣ್ಣಾಗಿದೆ ಚಿಕ್ಕಪ್ಪ. ನನಗಂತೂ ತುಂಬಾ ಗಾಬರಿಯಾಗಿದೆ. ಅದಕ್ಕೇ ಅಣ್ಣಯ್ಯನನ್ನು ಕರೆದುಕೊಂಡು ಹೋಗೋಣಾಂತ ಬಂದೆ"

"ಡಾಕ್ಟರು ಏನು ಹೇಳಿದರು ?"

"ಅವರೇನು ಹೇಳುತ್ತಾರೆ? ತಮಗೆ ತೋಚಿದ್ದೆಲ್ಲಾ ಮಾಡಿ ತೆಪ್ಪಗಾಗಿದ್ದಾರೆ"

ಅಷ್ಟರಲ್ಲಿ ಹೊರಗಡೆ ಬಂದ ಸಭಾಪತಿಶಾಸ್ತ್ರಿಗಳಿಗೂ ಆ ಮಾತು ಕೇಳಿಸಿತು.

"ಹಾಗಾದರೆ ಸಭಾಪತಿ ಬಂದು ಏನು ಮಾಡುವ ಹಾಗಿದೆಯಪ್ಪಾ

ವೆಂಕಟೇಶೂ ?"

" ಹಾಗಲ್ಲ ಚಿಕ್ಕಪ್ಪ, ಅಣ್ಣಯ್ಯ ಬಂದರೆ ನನಗೆ ಎಷ್ಟೋ ಧೈರ್‍ಯ ಬಂದ ಹಾಗೆ"

ಕೂಡಲೇ ಸಭಾಪತಿಶಾಸ್ತ್ರಿಗಳು—

" ವೆಂಕಟೇಶಾ, ಬೇಗ ಮನೆಗೆ ಹೋಗಿ, ದೇವರ ಮುಂದೆ ತುಪ್ಪದ ದೀಪ ಹಚ್ಚಿಬಿಟ್ಟು ನಮಸ್ಕಾರ ಮಾಡು. ಈಗ ನನ್ನ ಸ್ನೇಹಿತರೊಬ್ಬರು ಇಲ್ಲಿಗೆ ಬರುತ್ತೇನಂತ ಹೇಳಿದ್ದಾರೆ. ಅವರನ್ನೂ ಜೊತೆಯಲ್ಲಿ ಕರೆದುಕೊಂಡು ಅಲ್ಲಿಗೆ ಬರುತ್ತೇನೆ "

ಎಂದು ಆತ್ಮ ವಿಶ್ವಾಸದಿಂದ ನುಡಿದರು.

" ಆಗಲಣ್ಣ, ಹಾಗೇಮಾಡುತ್ತೇನೆ. ನೀನು ಮಾತ್ರ ಬೇಗ ಬಂದು ಬಿಡು "

" ಖಂಡಿತ ಬರುತ್ತೇನಪ್ಪ. ನೀನೇನೂ ಹೆದರಬೇಡ "

ಶಾಸ್ತ್ರಿಗಳ ಮಾತಿನಿಂದ ತುಸು ಧೈರ್‍ಯಗೊಂಡ ವೆಂಕಟೇಶಯ್ಯ ಹಿಂತಿರುಗಿದ.

ನೂಲುತ್ತಿದ್ದ ಶಂಕರ ಶಾಸ್ತ್ರಿಗಳು—

" ನಮ್ಮ ಜನದ ಹಾಸ್ಟಲಿನಲ್ಲಿ ಬೈಲೂರಿನ ಒಬ್ಬ ಹುಡುಗ ಇದ್ದಾನಂತೆ. ಅವನನ್ನು ನೋಡಿದ್ದೀಯಾ ? "

ಎನ್ನುತ್ತಾ ಮಗನ ಮುಖವನ್ನು ನೋಡಿದರು.

" ನೋಡಿದೆನಪ್ಪ. ನಮ್ಮದೂ ಅವನದೂ ಒಂದೇ ಗೋತ್ರ "

—ಎಂದು ನಿರಾಶೆಯ ದನಿಯಲ್ಲಿ ಉತ್ತರಿಸಿದರು ಸಭಾಪತಿಶಾಸ್ತ್ರಿಗಳು.

ಎರಡು ಕ್ಷಣ ತಕಲಿಯ ತಿರುಗನ್ನು ನಿಲ್ಲಿಸಿ—

" ಹ್ಞಾಂ. ಲಭ್ಯವಿಲ್ಲ-ಬಿಡು "

ಎಂದು ನಿಟ್ಟುಸಿರಿಬಿಟ್ಟರು ಶಂಕರಶಾಸ್ತ್ರಿಗಳು.

ಬಾಗಿಲ ಬಳಿ ನಿಂತಿದ್ದ ಸಭಾಪತಿಶಾಸ್ತ್ರಿಗಳು ಭಾರವಾದ ಹೆಜ್ಜೆಯನ್ನು ಇಕ್ಕುತ್ತಾ ಒಳಗೆ ನಡೆದರು.

ಸೌಭಾಗ್ಯಮ್ಮ ಗಂಡನಿಗೆ ಉಪ್ಪಿಟ್ಟಿನ ಉಪಹಾರವನ್ನು ತಂದುಕೊಟ್ಟರು.

" ಮಗುವಿಗೆ ಕೊಟ್ಟೆಯಾ ಸೌಭಾಗ್ಯಾ ? "

" ಹ್ಞಾಂ "

" ರುಕ್ಕೂಗೆ ? "

" ಅವಳೂ ತಿನ್ನುತ್ತಿದ್ದಾಳೆ ಅಡಿಗೆ ಮನೆಯಲ್ಲಿ "

ಸ್ವಲ್ಪ ತಡೆದು ಸಭಾಪತಿಶಾಸ್ತ್ರಿಗಳು ಬಲವಂತದಿಂದ ಎಂಜಲು ನುಂಗುತ್ತಾ— "ಸೌಭಾಗ್ಯೂ...." ಎಂದು ಕೂಗಿದರು.

" ಏನೂಂದ್ರೆ ? "

" ಬಾ ಈ ಕಡೆ "

" ಗಂಡನ ಅಂದಿನ ನಡವಳಿಕೆಯನ್ನು ಕಂಡು ವಿಸ್ಮಯಗೊಂಡ ಸೌಭಾಗ್ಯಮ್ಮ ಶಾಸ್ತ್ರಿಗಳ ಬಳಿಗೆ ಬಂದು ನಿಂತರು.

ಸಭಾಪತಿಶಾಸ್ತ್ರಿಗಳು ಮೆಲ್ಲದನಿಯಲ್ಲಿ, ಹಿಂದಿನ ನಡೆದ ಘಟನೆಗಳನ್ನು ಹೆಂಡತಿಗೆ ಅರ್ಥವಾಗುವಂತೆ ವಿವರಿಸಿ—

" ರುಕ್ಕೂನ ಜೋಪಾನವಾಗಿ ನೋಡಿಕೋ. ಅವಳನ್ನು ಹೊರಗಡೆ ಬಿಡಬೇಡ. ಏನಾದರೂ ಹೆಚ್ಚುಕಮ್ಮಿಯಾದರೆ ತುಂಬಾ ಕಷ್ಟ "

ಎಂದರು. ಅನಂತರ ರುಕ್ಮಿಣಿಯನ್ನು ಕರೆದು—

" ಇವತ್ತು ಮನೇಲ್ಲೇ ಇರಮ್ಮ. ಸ್ಕೂಲಿಗೂ ಬೇಡ-ಎಲ್ಲಿಗೂ ಬೇಡ "

ಎಂದು ಮೃದುವಾಗಿ ಆಜ್ಞಾಪಿಸಿದರು.

ಅಷ್ಟರಲ್ಲಿ ಸುದರ್ಶನಯ್ಯಂಗಾರ್ಯರು ಬಂದುದರಿಂದ, ಸೌಭಾಗ್ಯಮ್ಮನವರೂ ರುಕ್ಮಿಣಿಯೂ ಒಳಗೆ ಹೋದರು.

" ಇನ್ನೂ ಮುಗಿಯಲಿಲ್ಲವೇನಯ್ಯಾ ನಿಂದು ? "

" ಮುಗಿಯುತ್ತಿದೆಯಪ್ಪಾ ! " ನಗುತ್ತಾ ಸಭಾಪತಿಶಾಸ್ತ್ರಿಗಳು ಸುದರ್ಶನಯ್ಯಂಗಾರ್ಯರಿಗೆ ಉತ್ತರಿಸಿದರು.

ಶಾಸ್ತ್ರಿಗಳ ಮಗ ಐದು ವರ್ಷದ ಪುಟ್ಟ ಗಣೇಶ ಉಪ್ಪಿಟ್ಟಿನ ತಟ್ಟೆಯನ್ನು ತಂದು ಸುದರ್ಶನಯ್ಯಂಗಾರ್ಯರಿಗೆ ನೀಡುತ್ತಾ—

" ತಗೊಳ್ಳಿ ಮಾಮಾ" ಎಂದ.

ಸುದರ್ಶನಯ್ಯಂಗಾರ್ಯರು ತಟ್ಟೆಯೊಡನೆ ಗಣೇಶನನ್ನೂ ಬರ ಸೆಳೆದು ಕೊಂಡು, ಅವನನ್ನು ತೊಡೆಯ ಮೇಲೆ ಕೂಡಿಸಿಕೊಂಡರು. ಒಂದು ಸಾರಿ ಪ್ರೀತಿಯಿಂದ ಮಗುವಿನ ಕೆನ್ನೆಗೆ ಮುತ್ತಿಟ್ಟು—

" ನೀನು ತಿನ್ನೋಲ್ವೇ ಗಣೂ ? "

ಎಂದು ಮುದ್ದಾಗಿ ಕೇಳಿದರು.

" ತಿಂದೆ ಮಾಮಾ–ನೀವು ತಿನ್ನಿ "

" ಇರಲಿ, ಇನ್ನೂ ಸ್ವಲ್ಪ ತಿನ್ನು....ನೀನು ಗಣೇಶ ಅಲ್ವೇ ! "

ಎಂದು ನಗುತ್ತಾ ಸುದರ್ಶನಯ್ಯಂಗಾರ್ಯರು ಹುಡುಗನ ಕೈಗೆ ಸ್ವಲ್ಪ ಉಪ್ಪಿಟ್ಟಿಟ್ಟರು. ಅವನು ಬಾಯಿಗಿಟ್ಟುಕೊಳ್ಳುವುದನ್ನೇ ನೋಡಿ ಆನಂದ ದಿಂದ ಹಿಗ್ಗಿದರು. ಆ ಹಿಗ್ಗಿನಲ್ಲಿ ಗಣೇಶನ ಇನ್ನೊಂದು ಕೆನ್ನೆಗೂ ಮುತ್ತಿ ಟ್ಟರು.

" ಏನು ಸುದರ್ಶನ ಮುತ್ತೆಲ್ಲಾ ಇಲ್ಲೇ ಖರ್ಚುಮಾಡುತ್ತಿರುವ ಹಾಗಿದೆ! ವೈದೇಹಮ್ಮನವರ ಮೇಲಿನ ಕೋಪಕ್ಕೋ ಅಥವಾ ನಿನ್ನ ಮೇಲಿನ ಕೋಪಕ್ಕೆ ಅವರು ಮುಖ ತಿರುಗಿಸಿಕೊಂಡುದಕ್ಕೋ ? "

ನಗು ನಗುತ್ತಾ ಕೇಳಿದರು ಸಭಾಪತಿಶಾಸ್ತ್ರಿಗಳು. ನಿಜ ಸಂಗತಿ ಅವರಿಗೆ ತಿಳಿದಿತ್ತಾದರೂ ಮಿತ್ರನನ್ನು ಹಾಸ್ಯಮಾಡಲು ಹಾಗೆ ಕೇಳಿದ್ದರು.

" ಇಬ್ಬರಿಗೂ ಕೋಪ ಬಂದಿದೆಯಪ್ಪ ! ಅವಳಿಗೆ ನನ್ನ ಮೇಲೆ–ನನಗೆ ಅವಳ ಮೇಲೆ !! ದೇವರು ನಮ್ಮಿಬ್ಬರಿಗೂ ಯಾವಾಗ ರಾಜಿ ಮಾಡುತ್ತಾ ನೆಯೋ ಕಾಣೆ !!! "

" ನಮ್ಮ 'ಗಣೇಶನ' ಅವತಾರವಾದ ಹಾಗೆ ನಿಮ್ಮ ಮನೆಯಲ್ಲಿ 'ನಾರಾಯಣನ' ಅವತಾರವಾದರೆ ಎಲ್ಲಾ ಸರಿಹೋಗುತ್ತದಪ್ಪ ! "

" ಅಯ್ಯೋ ! ಆ ಭಾಗ್ಯ ನಾವು ಕೇಳಿಕೊಂಡು ಬಂದಿದ್ದೇವೆಯೇ ಸಭಾಪತಿ ? "

—ಸುದರ್ಶನಯ್ಯಂಗಾರ್ಯರು ನಿರಾಶೆಯಿಂದ ನಿಟ್ಟುಸಿರಿಡುತ್ತಾ ಹೇಳಿ ದರು.

ಮಿತ್ರನ ಅಂತರಂಗದ ಅಳಲನ್ನು ಕಂಡು ಸಭಾಪತಿಶಾಸ್ತ್ರಿಗಳಿಗೂ 'ಅಯ್ಯೋ ಪಾಪ !' ಎನ್ನಿಸಿತ್ತು.

" ಯಾವತ್ತಿಗೂ ಕಾಲ ಹೀಗೆಯೇ ಇರುತ್ತದೆಯೆ ಸುದರ್ಶನ ? ಇಷ್ಟು ನಿರಾಸೆಪಟ್ಟರೆ ಹೇಗೆ ? ನೀನೆ ಇಷ್ಟು ಮನಸ್ಸಿಗೆ ಹಚ್ಚಿಕೊಂಡರೆ ಇನ್ನು ವೈದೇಹಮ್ಮನವರ ಗತಿ ಏನು ? ಹೆಣ್ಣೊಡಲಿನ ಬಯಕೆ ನಿನಗಿಂತಲೂ ದೊಡ್ಡದು "

ಸುದರ್ಶನಯ್ಯಂಗಾರ್ಯರು ಸುಮ್ಮನೆ ಕುಳಿತಿದ್ದರು. ಅವರ ತೊಡೆಯ ಮೇಲಿಂದ ಗಣೇಶ ಎದ್ದುಹೋಗಿದ್ದ.

" ಬೇಗ ಉಪ್ಪಿಟ್ಟು ಮುಗಿಸಪ್ಪ. ಸುಮ್ಮನೆ ಯೋಚಿಸಬೇಡ. ಒಂದಲ್ಲ ಒಂದು ದಿನ ನಿನ್ನ ಮನೆಯಂಗಳದಲ್ಲಿಯೂ ರಂಗವಲ್ಲಿ ಅಳಿಸುವ ' ಶ್ರೀರಂಗನಾಥ ' ಅಂಬೆಗಾಲಿಟ್ಟುಕೊಂಡು ಆಟವಾಡುತ್ತಾನೆ "

—ಶಾಸ್ತ್ರಿಗಳ ಮಾತು ಕೇಳಿ ಸುದರ್ಶನಯ್ಯಂಗಾರ್ಯರ ತುಟಿಯಲ್ಲಿ ಮಂದಹಾಸ ತುಳುಕಿತು.

" ನಿನ್ನ ಮಾತು ನಿಜವಾಗಲಿ ಸಭಾಪತಿ"

ಎನ್ನುತ್ತಾ ಅವರು ಉಪ್ಪಿಟ್ಟಿನ ತಟ್ಟೆಗೆ ಕೈಹಾಕಿದರು.

ರುಕ್ಮಿಣಿ ಇಬ್ಬರಿಗೂ ಕಾಫಿ ತಂದಿಟ್ಟು ಹೋದಳು.

ಗೂಡಿನಲ್ಲಿದ್ದ ಅಲಾರಂ ಗಡಿಯಾರ ಒಂಬತ್ತು ಗಂಟೆ ತೋರಿಸುತ್ತಿತ್ತು.

ಮಿತ್ರರಿಬ್ಬರೂ ಕಾಫಿ ಮುಗಿಸಿ, ಸೊಸೈಟಿಯ ಬಳಿಗೆ ಬಂದು, ಗಾಂಧೀ ಬಜಾರ್‌ನಲ್ಲಿ ಬಸ್ಸು ಹತ್ತಿ, ಮಿನರ್ವಾ ಚೌಕದಲ್ಲಿಳಿದು ಮಾವಳ್ಳಿ ವಿಸ್ತರಣದ ಒಳಹೊಕ್ಕರು.

ಸುದರ್ಶನಯ್ಯಂಗಾರ್ಯರು ಬರುತ್ತಿರುವುದನ್ನು ದೂರದಿಂದಲೇ ಗುರುತಿಸಿದ ಮುನಿತಾಯಪ್ಪ, ಧಾವಿಸಿ ಬಂದು ದಾರಿಯಲ್ಲಿಯೇ ಮಿತ್ರರಿಬ್ಬರನ್ನೂ ಎದುರುಗೊಂಡ.

" ಸ್ವಾಮಿಗಳು ಇಷ್ಟುದೂರ ದಯಮಾಡಿಸಿಬಿಟ್ರಿ "

—ನಸುನಕ್ಕ ಮುನಿತಾಯಪ್ಪ.

" ದೂರವೇನು-ಹತ್ತಿರವೇನು ! ಬೇಕಾದಾಗ ಎಲ್ಲಿದ್ದರೂ ನಿನ್ನ ಹತ್ತಿರ ಓಡಿ ಬರಬೇಕಲ್ಲಪ್ಪಾ !! "

—ಸುದರ್ಶನಯ್ಯಂಗಾರ್ಯರೂ ನಕ್ಕು ನುಡಿದರು.

" ಅಂಥಾ ದೊಡ್ಡ ಮಾತು ಬೇಡಿ ಸ್ವಾಮಿ. ನೀವು ಕರೆದರೆ ನಾನೇ ಓಡಿಬರ್ತೀನಿ " ಎಂದ ಮುನಿತಾಯಪ್ಪ.

ಸಭಾಪತಿಶಾಸ್ತ್ರಿಗಳು ಒಂದು ಮಾತೂ ಆಡದೆ ಸುಮ್ಮನಿದ್ದುದನ್ನು ಕಂಡು ಸುದರ್ಶನಯ್ಯಂಗಾರ್ಯರು ಅವರನ್ನು ಮುನಿತಾಯಪ್ಪನಿಗೆ ಪರಿಚಯ ಮಾಡಿಸಿದರು. ಮುನಿತಾಯಪ್ಪ ಶಾಸ್ತ್ರಿಗಳಿಗೆ ಕೈಮುಗಿದ. ಸುದರ್ಶನಯ್ಯಂಗಾರ್ಯರು ಶಂಕರಶಾಸ್ತ್ರಿಗಳ ಹೆಸರು ಹೇಳಿ, ಮತ್ತಿಗೆ ಹಳ್ಳಿಯಲ್ಲಿದ್ದಾಗಿನ ಪರಸ್ಪರ ಪರಿಚಯವನ್ನು ಜ್ಞಾಪಿಸಿದರು.

ಶಂಕರಶಾಸ್ತ್ರಿಗಳ ಹೆಸರನ್ನು ಕೇಳಿದೊಡನೆ—

" ದೊಡ್ಡಸ್ವಾಮಿಗಳು ನಿಜವಾಗಲೂ ಪುಣ್ಯಾತ್ಮರು ಸ್ವಾಮಿ. ದೇವರು ಅಂದರೆ ಸಾಕು–ಅವರಿಗೆ ಊಟವೂ ಬೇಡ, ನಿದ್ದೆಯೂ ಬೇಡ. ಅಷ್ಟೊಂದು ಭಕ್ತಿ. ಅವರ ಮನಸ್ಸೂ ಅಷ್ಟೆ–ಶಾನೆ ದೊಡ್ಡದು. ' ಬೇಕು ' ಅಂತ ಕೈಯೊಡ್ಡಿದರೆ ' ಇಲ್ಲಾ ' ಅಂತ ಅವರ ಬಾಯಿಂದ ಬಂದಿದ್ದು ನನ್ನ ಜನ್ಮದಲ್ಲೇ ಕಾಣೆ. ಮತ್ತಿಗೇಹಳ್ಳೀನಲ್ಲಿದ್ದಾಗ ಊರಿಗೇ ತಾಯಿ-ತಂದೆಯ ಹಾಗಿದ್ದರು ಸ್ವಾಮಿ ಅವರು. ತಂಪುಹೊತ್ತಿನಲ್ಲಿ ನೆನಸಬೇಕು ಪುಣ್ಯಾತ್ಮರನ್ನ "

—ಎಂದು ಅಭಿಮಾನದಿಂದ ಹೇಳಿದ ಮುನಿತಾಯಪ್ಪ.

" ಅಂಥಾ ಪುಣ್ಯಾತ್ಮರ ಸಂಸಾರಕ್ಕೇ ಈಗ ದೊಡ ಕುತ್ತು ಬಂದಿದೆಯಲ್ಲಾ ಮುನಿತಾಯಪ್ಪ "

—ಸುದರ್ಶನಯ್ಯಂಗಾರ‍್ಯರು ನೇರವಾಗಿ ವಿಷಯಕ್ಕೆ ಬಂದರು.

ಗಾಬರಿಗೊಂಡ ಮುನಿತಾಯಪ್ಪ ಸ್ತಬ್ಧನಾಗಿ ನಿಂತು–

" ಅದೇನು ಸ್ವಾಮಿ ಅಂಥಾದ್ದು ? " ಎಂದು ಕೇಳಿದ.

" ಮನೆಗೆ ನಡಿ, ಹೇಳುತ್ತೇನೆ "

" ಮನೆಗೆ ಬೇಡ ಸ್ವಾಮಿ. ಲಾಲ್‌ಬಾಗ್‌ಗೆ ಹೋಗೋಣ "

" ಯಾಕಪ್ಪಾ, ಮನೆಗೆ ಬರಲಿಸುವುದಿಲ್ಲವೆ ನಮ್ಮನ್ನ ? "

" ಇಲ್ಲ ಸ್ವಾಮಿ, ಇವತ್ತು ಬರಲಿಸುವುದಿಲ್ಲ ! "

—ಮುನಿತಾಯಪ್ಪ ನಗುತ್ತಾ ಹೇಳಿದ.

" ಯಾಕೆ ? "

"........ಏನೋ ಇವತ್ತು ಮನೇಲ್ಲಿ ' ನಾವು ತಿನ್ನೋದು ' ಮಾಡ್ತಾ ಇದ್ದಾರೆ. ನಿಮ್ಮಂಥಾ ಬ್ರಾಹ್ಮಣರು ಬಂದು ಆ ವಾಸನೆ ಯಾಕೆ ಕುಡೀಬೇಕೂಂತ !"—ಸಂಕೋಚಪಡುತ್ತಾ ಮುನಿತಾಯಪ್ಪ ಹೇಳಿದಾಗ ಮಿತ್ರರಿಬ್ಬರೂ ಮೆಲುನಗೆ ನಕ್ಕರು.

ಮೂವರೂ ಲಾಲ್‌ಬಾಗ್ ಸೇರಿ, ಹುಲ್ಲು ಹಸುರಿನ ಮೇಲೆ ಕುಳಿತರು. ತಾವು ಬಂದ ಉದ್ದೇಶವನ್ನು ಸುದರ್ಶನಯ್ಯಂಗಾರ‍್ಯರೇ ವಿವರಿಸಿ. ಎಲ್ಲವನ್ನೂ ಹೇಳಿದರು. ಕೊನೆಗೆ—

" ಈಗ ಎಲ್ಲಾ ನಿನ್ನ ಕೈಯಲ್ಲಿದೆಯಪ್ಪ ಏನು ಮಾಡುತ್ತೀಯೋ ಮಾಡು " ಎಂದರು. ತಮ್ಮದೂ ಅದೇ ಮಾತು ಎನ್ನುವಂತೆ ಸಭಾಪತಿಶಾಸ್ತ್ರಿಗಳೂ ಮುನಿತಾಯಪ್ಪನನ್ನೇ ನೋಡಿದರು.

" ಆಸಾಮಿಾನ, ಅವನ ವಿದ್ಯೇನ ನೋಡಿ, ಆಮೇಲೆ ಮುಂದಿನ ಕೆಲಸ ಮಾಡಬೇಕು ಸ್ವಾಮಿ "

" ಹಾಗೇ ಮಾಡು "—ಎಂದರು ಸುದರ್ಶನಯ್ಯಂಗಾರ್ಯರು.

" ಈಗ ನಮ್ಮ ಜೊತೆಯಲ್ಲಿ ಬಂದರೆ ಆ ಆಸಾಮಿಾನ ನೋಡಬಹುದು" —ಎಂದರು ಸಭಾಪತಿಶಾಸ್ತ್ರಿಗಳು.

ಸ್ವಲ್ಪ ಹೊತ್ತು ಯೋಚಿಸಿ—

" ಆಗಲಿ ಸ್ವಾಮಿ. ನಡೀರಿ, ನೋಡೇಬಿಡೋಣ "

—ಎಂದು ಹುಮ್ಮಸ್ಸಿನಿಂದ ಎದ್ದ ಮುನಿತಾಯಪ್ಪ.

ಮೂವರೂ ನಡೆದುಕೊಂಡೇ ಅಲಸೂರು ಪೇಟೆ ಸೇರಿದರು. ವೆಂಕಟೇಶಯ್ಯನ ಮನೆ ಹೊಕ್ಕಾಗ ಸನಿಯದ ಪೋಲೀಸುಠಾಣೆಯಲ್ಲಿ ಹನ್ನೊಂದು ಗಂಟೆ ಬಾರಿಸಿತು.

" ಎಷ್ಟು ಹೊತ್ತು ಮಾಡಿಬಿಟ್ರೆ ಅಣ್ಣಯ್ಯ "

ಎಂದು ಬಾಗಿಲಿನಲ್ಲಿಯೇ ನಿಂತಿದ್ದ ವೆಂಕಟೇಶಯ್ಯ, ಕೂಡಲೇ ಒಳಗೆ ಹೋಗಿ ಚಾಪೆ ಹಾಸಿದ. ಎಲ್ಲರೂ ಕುಳಿತರು.

ಒಳಗಡೆ ಇದ್ದ ಕಮಲಮ್ಮನವರು ತಮ್ಮ ಮಗ ಬಂದ ಸುಳಿವನ್ನರಿತು ಹೊರಗಡೆ ಬಂದರು. ಅವರನ್ನು ಕಂಡೊಡನೆ ಸುದರ್ಶನಯ್ಯಂಗಾರ್ಯರು–

" ಓಹೋ ! ಅಮ್ಮಾವರು ಇಲ್ಲೇ ಇದ್ದಾರೆ!! "

ಎಂದು ಆಶ್ಚರ್ಯ ಸೂಚಿಸಿದರು.

" ಇದ್ದೇನಪ್ಪಾ, ಇಲ್ಲೇ ಇದ್ದೇನೆ. ಯಾರಿದ್ದರೇನಪ್ಪ—ಮುಖ್ಯ ದೇವರದಯೆ ಇಲ್ಲದ ಮೇಲೆ "

ಬೇಸರದ ಮಾತನ್ನು ಕಸಿಕರದ ಕಂಠದಲ್ಲಿ ನುಡಿದರು ಕಮಲಮ್ಮ.

ಎಲ್ಲರ ಬಾಯೂ ಕಟ್ಟಿತು.

ಸ್ವಲ್ಪ ಹೊತ್ತಿನ ಬಳಿಕ ಸಭಾಪತಿಶಾಸ್ತ್ರಿಗಳು, ನರಸಮ್ಮನ ಕಾಯಿಲೆ ಆರಂಭವಾದ ಸಂಗತಿಯನ್ನೂ, ಅದರ ಉಲ್ಬಣ ಸ್ಥಿತಿಯನ್ನೂ ತಮ್ಮ ಮಿತ್ರರಿಬ್ಬರಿಗೂ ವಿವರಿಸಿದರು.

ನರಸಮ್ಮನ ಹಣೆ ಕಟ್ಟಿದ ಪಟ್ಟಿಯನ್ನು ನೋಡುತ್ತಾ—

" ಗಾಯ ವಾಸಿಯಾಗಿದೆಯಾ ಸ್ವಾಮಿ ?"

ಎಂದು ಕೇಳಿದ ಮುನಿತಾಯಪ್ಪ.

" ಡಾಕ್ಟರು ಏನೋ ಮುಲಾಮು ಕೊಟ್ಟಿದ್ದಾರೆ. ಅದನ್ನೇ ಹಚ್ಚಿ, ಪಟ್ಟಿ ಕಟ್ಟಿದ್ದೇನೆ. ಈಗ ಸ್ವಲ್ಪ ವಾಸಿ "

" ಜ್ವರ ಬಂದಿದೆಯೇನು ? "

" ವಿಪರೀತ ಜ್ವರ. ದಿನದಿನಕ್ಕೆ ಕಾವು ಏರುತ್ತಲೇ ಇದೆ. ಜೊತೆಗೆ ನಿನ್ನೆ ಸಾಯಂಕಾಲದಿಂದ ತಿಂದ ಅನ್ನ–ಕುಡಿದ ನೀರು ವಾಂತಿಯಾಗುವುದಕ್ಕೆ ಷುರು ಆಗಿದೆ. ಮಗ್ಗುಲು ಹೊರಳುವುದಕ್ಕೂ ಆಗದಷ್ಟು ಸುಸ್ತು ಜೇರೆ "

ವೆಂಕಟೇಶಯ್ಯನ ವಿವರಣೆ ಮುನಿತಾಯಪ್ಪನ ಆಸಕ್ತಿಯನ್ನು ಕೆರಳಿಸಿತ್ತು. ಅವನು ನಿಸ್ಸಂಕೋಚವಾಗಿ ಎದ್ದು ಹೋಗಿ, ನರಸಮ್ಮನನ್ನು ಎರಡು ಕ್ಷಣ ನಿಟ್ಟಿಸಿ ನೋಡಿದ. ಏನೂ ಮಾತನಾಡದೆ, ಮತ್ತೆ ತನ್ನ ಜಾಗಕ್ಕೆ ಬಂದು ಕುಳಿತ.

ಅವನ ಮೌನವನ್ನು ಕಂಡು, ' ಏನಾದರೂ ಹೇಳುವುದಕ್ಕೆ ಯೋಚಿಸುತ್ತಿದ್ದಾನೇನೋ ' ಎಂದು ಉಳಿದವರು ಭಾವಿಸಿದರು. ಆದರೆ ಮುನಿತಾಯಪ್ಪ ತನ್ನ ಮೌನವನ್ನು ಮುರಿಯಲಿಲ್ಲ.

ಕಮಲಮ್ಮ ಕಾಫೀ ಮಾಡಿ ತಂದುಕೊಟ್ಟರು. ಸಭಾಪತಿಶಾಸ್ತ್ರಿಗಳೂ ಸುದರ್ಶನಯ್ಯಂಗಾರ್ಯರೂ ಒಂದೊಂದು ಬಟ್ಟಲನ್ನು ಕೈಗೆ ತೆಗೆದುಕೊಂಡರು. ಮುನಿತಾಯಪ್ಪ ಮಾತ್ರ ಸುಮ್ಮನೆ ಕುಳಿತುಬಿಟ್ಟಿದ್ದ.

ಅಷ್ಟರಲ್ಲಿ ಭದ್ರಯ್ಯ ಒಳಗಡೆ ಬಂದಿದ್ದ. ಎಲ್ಲರೂ ಅವನ ಕಡೆಗೆ ತಿರುಗಿ ನೋಡಿದರು. ವೆಂಕಟೇಶಯ್ಯ ರೂಢಿಯಂತೆ ಸ್ವಾಗತೋಪಚಾರ ಮಾಡಿದ.

" ಅವ್ವಾವ್ರಿಗೆ ಒಸಿ ಮೇಲಾ ಸ್ವಾಮಿ "

" ಇಲ್ಲಪ್ಪ "

" ಕೊಳ್ಳಿ ಸ್ವಾಮಿ. ಈ ಯಂತ್ರ ಕಟ್ಟಿ ಅವ್ವಾವ್ರ ಕೈಗೆ. ಗರ–ಗಿರ ಬಡಿದಿದ್ರೆ ವಾಸಿ ಆಯ್ತದೆ. ಅವ್ವಾವ್ರನ್ನ ನೋಡಿದರೆ ಅಂಗೇನೂ ಕಾಣಾಕಿಲ್ಲ. ಎಂಗಾರ ಇರ್ಲಿ—ಕಟ್ಟಿ ಇದನ್ನ "

ವೆಂಕಟೇಶಯ್ಯ ಕೈ ನೀಡಿದ.

" ಇವತ್ತು ಮಧ್ಯಾನ್ನಿಂದ ಆಚೆ ನಾನು ಊರಾಗ ಇರಾಕಿಲ್ಲ ಸ್ವಾಮಿ.... ಬರೋದು ನಾಳೇನೇ........"

" ಒಳ್ಳೇದು ಭದ್ರಯ್ಯನವರೆ........ಈ ಯಂತ್ರದಿಂದಲಾದರೂ ಗುಣ

ವಾದರೆ ನನ್ನ ಪುಣ್ಯ"

ಕುಳಿತಿದ್ದ ಮೂವರ ಕಡೆಗೂ ಒಮ್ಮೆ ದೃಷ್ಟಿ ಬೀರಿ, ಭದ್ರಯ್ಯ ಹೊರ ಹೊರಟ, ಅವನು ಹೋದ ಎರಡು ನಿಮಿಷಗಳ ಬಳಿಕ ಮುನಿತಾಯಪ್ಪ ಸುದರ್ಶನಯ್ಯಂಗಾರ್ಯರ ಕಿವಿಯಲ್ಲಿ ಏನೋ ಹೇಳಿದ; ಅವರು ಸಭಾಪತಿ ಶಾಸ್ತ್ರಿಗಳ ಕಿವಿಯಲ್ಲಿ ಪಿಸುಗುಟ್ಟಿದರು.

"ವೆಂಕಟೇಶಾ, ಆ ಯಂತ್ರ ನೋಡೋಣ—ತಾ ಇಲ್ಲಿ"

ಎಂದರು ಸಭಾಪತಿಶಾಸ್ತ್ರಿಗಳು. ವೆಂಕಟೇಶಯ್ಯ ತನ್ನ ಕೈಯಲ್ಲಿದ್ದುದನ್ನು ಅವರ ಕೈಯಲ್ಲಿಟ್ಟ. ಅನಂತರ ಅದು ಮುನಿತಾಯಪ್ಪನ ಕೈ ಸೇರಿತು. ಕೂಡಲೇ ಎಂಜಲು ಉಗುಳಿ ಬರುವ ನೆಪದಲ್ಲಿ ಅವನು ಹೊರಗೆ ಹೋದ. ಐದು ನಿಮಿಷವಾಯಿತು, ಹತ್ತು ನಿಮಿಷವಾಯಿತು. ಮುನಿತಾಯಪ್ಪ ಹಿಂದಿರುಗಲೇ ಇಲ್ಲ. ಅವನಿಗಾಗಿ ಇಟ್ಟಿದ್ದ ಕಾಫಿ, ಆರಿ ತಣ್ಣಗಾಯಿತು.

ಸುದರ್ಶನಯ್ಯಂಗಾರರೂ ಎದ್ದರು. ಅವರನ್ನನುಸರಿಸಿ ಸಭಾಪತಿ ಶಾಸ್ತ್ರಿಗಳೂ ಚಾಪೆ ಬಿಟ್ಟರು.

"ಮುನಿತಾಯಪ್ಪ ಯಾಕೋ ಬರಲೇ ಇಲ್ಲ. ನೋಡಿಕೊಂಡು ಬರುತ್ತೇವೆ." ಎನ್ನುತ್ತಾ ಇಬ್ಬರೂ ವೆಂಕಟೇಶಯ್ಯನ ಮನೆಯಿಂದ ಹೊರಟೇ ಬಿಟ್ಟರು.

ಮೊದಲೇ ಪಿಸುಮಾತಿನಲ್ಲಿ ನಿಶ್ಚಯಿಸಿಕೊಂಡಿದ್ದಂತೆ ಮೂವರೂ ಮುನಿಸಿಪಲ್ ಆಫೀಸಿನ ಆವರಣದಲ್ಲಿ ಸೇರಿದರು. ಅಷ್ಟರಲ್ಲಿ ಯಂತ್ರವನ್ನು ಬಿಚ್ಚಿ ನೋಡಿದ್ದ ಮುನಿತಾಯಪ್ಪ ಬೆಸಗೊಂಡಿದ್ದ.

"ಇವತ್ತು ಬೆಳಗಾಗೆದ್ದು ಯಾರ ಮುಖ ನೋಡಿದೆನೋ! .... ಇಷ್ಟು ದಿನಕ್ಕೆ ದೇವರು ನನಗೆ ಒಂದು ಒಳ್ಳೆಯ ಕೆಲಸ ಮಾಡುವುದಕ್ಕೆ ಅವಕಾಶ ಕೊಟ್ಟ ಸ್ವಾಮಿ!!"

"ಏನು ಮುನಿತಾಯಪ್ಪ, ಸಮಾಚಾರ?"

—ಸುದರ್ಶನಯ್ಯಂಗಾರ್ಯರು ಕೇಳಿದರು.

"ನರಸಮ್ಮನೋರ ಕಾಯಿಲೆ ಗುಟ್ಟು ತುಂಬಾ ದೊಡ್ಡದಿದ್ದಹಾಗಿದೆ ಸ್ವಾಮಿ. ನನಗೇ ಸರಿಯಾಗಿ ತಿಳಿದಿಲ್ಲ........"

ಸಭಾಪತಿಶಾಸ್ತ್ರಿಗಳೂ ಸುದರ್ಶನಯ್ಯಂಗಾರ್ಯರೂ ಪರಸ್ಪರ ಮುಖ ನೋಡಿಕೊಂಡರು.

"ಎಂಥಾ ಗುಟ್ಟಿದ್ದರೂ ನಾಳೆ ಇಷ್ಟು ಹೊತ್ತಿಗೆ ತಿಳಿದುಕೊಂಡು ಬಿಡ್ತೀನಿ ಸ್ವಾಮಿ. ಸದ್ಯ, ಈಗ ನರಸಮ್ಮನೋರ ಪ್ರಾಣ ಉಳಿಯೋದು ಮುಖ್ಯ........"

"ಹೌದಪ್ಪ" ಎಂದರು ಸುದರ್ಶನಯ್ಯಂಗಾರ್ಯರು.

"ಪ್ರಾಣಕ್ಕೇ ಸಂಚಕಾರ ಬಂದಿದೆಯೇ ?"

ಎಂದರು ಸಭಾಪತಿಶಾಸ್ತ್ರಿಗಳು ಆಶ್ಚರ್ಯದಿಂದ.

"ಇವತ್ತು – ನಾಳೆ ಕಳೆದಿದ್ದರೆ ನರಸಮ್ಮನೋರ ಗತಿ ಮುಗಿದು ಹೋಗುತ್ತಿತ್ತು !"

"ಆ ಭದ್ರಯ್ಯ ತಂದು ಕೊಟ್ಟನಲ್ಲಾ ಯಂತ್ರ – ಅದೇನು ?"

"ಅದು 'ಪ್ರತಿಶಕ್ತಿ ನಿರೋಧಕ ಯಂತ್ರ' ಅಂತ. ಅದನ್ನ ಅಮ್ಮಾವ್ರಿಗೆ ಕಟ್ಟುಬಿಟ್ಟಿದ್ದರೆ, ಎಂಥಾ ಮಂತ್ರಗಾರ ಬಂದಿದ್ದರೂ ಏನೂ ನಡೆಯುತ್ತಿರಲಿಲ್ಲ. ಪ್ರಾಣ ಉಳಿಸುವ ಆಸೆಯನ್ನೇ ಬಿಟ್ಟು ಬಿಡಬೇಕಾಗಿತ್ತು....ನೋಡಿ, ಏನು ಬರೆದಿದೆ." ಎನ್ನುತ್ತಾ ಮುನಿತಾಯಪ್ಪ ಯಂತ್ರವನ್ನು ತೋರಿಸಿದ.

'ಪ್ರತಿಶಕ್ತಿ ನಿರೋಧಕ ಯಂತ್ರ' – ಎಂದು ಮೇಲ್ಭಾಗದಲ್ಲಿ ಬರೆದು, ಅನಂತರ ಕತ್ತರಿ ಗುರುತು ಹಾಕಿ, ನಾಲ್ಕು ಕಡೆಯೂ ಒಂದೊಂದು ಬೀಜಾಕ್ಷರ ಬರೆಯಲಾಗಿತ್ತು. ಅದರಡಿಯಲ್ಲಿ – 'ಮೃತ್ಯು–ನರಸಮ್ಮ–ಮೃತ್ಯು' ಎಂದೂ, ಪಂಚಲೋಹದ ತಗಡಿನ ಎಡಬಲಗಳಲ್ಲಿಯೂ ಮತ್ತು ಮೇಲು – ಕೆಳ ಭಾಗಗಳಲ್ಲಿಯೂ – 'ಶಾಕಿನಿ–ದುರ್ಗಾಸಖಿ–ಶಾಕಿನಿ' ಎಂದು ನಾಲ್ಕು ಬಾರಿ ಬರೆಯಲಾಗಿತ್ತು.

ಯಂತ್ರವನ್ನು ನೋಡಿದ ಸಭಾಪತಿಶಾಸ್ತ್ರಿಗಳು—

"ಸೃಷ್ಟಿಕರ್ತ ಮಾನವನಿಗೆ ಎಂತೆಂತಹ ಶಕ್ತಿಗಳನ್ನು ದಯಪಾಲಿಸಿದ್ದಾನೆ – ನೋಡಿದೆಯಾ ಸುದರ್ಶನ ?" ಎಂದರು. ಅವರ ಮನಸ್ಸು ವಿಶಾಲ ಪ್ರಪಂಚದ ವೈಚಿತ್ರ್ಯಗಳತ್ತ ಹರಿದಿತ್ತು.

ಸುದರ್ಶನಯ್ಯಂಗಾರ್ಯರು—

"ಈಗೇನು ಮಾಡುತ್ತೀ ಮುನಿತಾಯಪ್ಪ ?"

ಎನ್ನುತ್ತಾ ಅವನ ಮುಖ ನೋಡಿದರು.

"ನೀವಿಬ್ಬರೂ ಇಲ್ಲೇ ಕೂತಿರಿ ಸ್ವಾಮಿ. ನಾನು ಮನೆಗೆ ಹೋಗಿ, ಇನ್ನೊಂದು ಗಂಟೆ ಹೊತ್ತು ಬಿಟ್ಟುಕೊಂಡು ಬರುತ್ತೀನಿ....ಇಲ್ಲೇ ಇರಿ,

ಎಲ್ಲೂ ಹೋಗಬೇಡಿ ”

ಎನ್ನುತ್ತಾ ಮುನಿತಾಯಪ್ಪ, ಅವರಿಬ್ಬರ ಉತ್ತರಕ್ಕಾಗಿ ಕಾಯದೆ ಬೇಗ ಬೇಗನೆ ತನ್ನ ಮನೆಯತ್ತ ಧಾವಿಸಿದ. ಅವನಿಗೆ ಎಂದೂ ಇಲ್ಲದ ಉತ್ಸಾಹ–ಹುಮ್ಮಸ್ಸು ಆ ದಿನ ಬಂದಿದ್ದಿತು. ಮನೆ ಮುಟ್ಟಿದ ಕೂಡಲೇ ತಣ್ಣೀರಿನಲ್ಲಿ ಸ್ನಾನ ಮುಗಿಸಿ, ಗಡಿಬಿಡಿಯಿಂದ ಪೂಜಾ ಸಾಮಗ್ರಿಗಳನ್ನು ಸಿದ್ಧ ಪಡಿಸಿದ. ಮೊದಲು ತನ್ನ ಗುರು ‘ಉಗ್ರಪ್ಪಸ್ವಾಮಿ’ಗಳನ್ನು ನೆನೆದು, ಅವರ ಮೂರ್ತಿಯನ್ನು ಮನಸ್ಸಿನೆದುರಿಗೆ ತಂದುಕೊಂಡು, ಭಕ್ತಿ ವಿನಯಗಳಿಂದ ಕೈ ಮುಗಿದು ತಲೆ ಬಾಗಿದ. ತಟ್ಟನೆ ಅವನ ಮನಸ್ಸಿನಲ್ಲಿ – ಸ್ವಾಮಿಗಳು ಅಭಯಾನುಗ್ರಹ ಮಾಡುವ ಆಶೀರ್‌ಹಸ್ತ ಸ್ಪಷ್ಟವಾಗಿ ಕಾಣಿಸಿತು. ಮೌನದ ಮಾತು ‘ ಕೃತಾರ್ಥನಾದೆ ’ ಎಂದುಕೊಂಡಾಗ ಮುನಿತಾಯಪ್ಪನ ಕಣ್ಣುಗಳಲ್ಲಿ ಹನಿ ತೊಟ್ಟಿಟ್ಟಿತು.

ಪೂಜೆ ಆರಂಭವಾಯಿತು – ಏಕಾಗ್ರ ಚಿತ್ತದ ಸತ್ವ–ರಾಜಸಿಕ ಪೂಜೆ.

ಪೂಜಾದ್ಯೈವಕ್ಕೆ ಪುರಸ್ಕಾರ ಸಲ್ಲಿಸಿದ್ದೂ ಆಯಿತು.

ಮೌನಧ್ಯಾನವೂ ಮುಗಿಯಿತು.

‘ ಮೃತ್ಯುಂಜಯ ಸಮಾನ ಯಂತ್ರ ’ವನ್ನು ಪಂಚಲೋಹದ ತಗಡಿನಲ್ಲಿ ನಿರ್ಮಿಸಿಕೊಂಡಿದ್ದೂ ಆಯಿತು.

ವೃತ್ತಿ ವಿಧಿಗಳೆಲ್ಲ ಮುಗಿದಾಗ ಮುನಿತಾಯಪ್ಪನ ಮನಸ್ಸು ಅಪೂರ್ವ ಗೆಲುವಿನಿಂದ ತುಂಬಿ, ಅವನ ಮುಖ ಅರಳಿ, ಕಾಂತಿಪೂರ್ಣವಾಗಿ ಶೋಭಿಸಿತು.

ಹೆಂಡತಿ ಊಟಕ್ಕೆ ಕರೆದರೂ, ಅತ್ತ ಗಮನವೀಯದೆ, ಉದ್ವೇಗದಿಂದ ನಡೆಯುತ್ತಾ ಮುನಿಸಿಪಲ್ ಕಚೇರಿಯ ಆವರಣವನ್ನು ಹೊಕ್ಕ. ಅವನನ್ನು ಕಂಡೊಡನೆ ಕಾದು ಕುಳಿತಿದ್ದ ಗೆಳೆಯರ ಕುತೂಹಲ ನೂರ್ಮಡಿಯಾಯಿತು.

“ ಸಾಮಿ, ಇನ್ನೇನೂ ಭಯವಿಲ್ಲ. ಆದರೆ ಮುಂದಿನ ಕೆಲಸಗಳೆಲ್ಲ ಉಪಾಯದಿಂದ ನಡೆಯಬೇಕು ”

“ ಓಹೋ ಆಗಲಿ ”

—ಎಂದು ಮಿತ್ರರಿಬ್ಬರೂ ಜೋಡು ಧ್ವನಿಯಲ್ಲಿ ನುಡಿದರು.

ಅನಂತರ ಮೂವರೂ ವೆಂಕಟೇಶಯ್ಯನ ಮನೆಗೆ ಬಂದರು.

ಮುನಿತಾಯಪ್ಪ, ತಾನು ಹೊರಗೆ ಹೋಗಿ ಬರಲು ಅಷ್ಟು ತಡ

ವಾದುದಕ್ಕೆ ಒಂದು 'ಕುಂಟುನೆಪ' ಹೇಳಿ ವೆಂಕಟೇಶಯ್ಯನ ಬಾಯಿ ಮುಚ್ಚಿಸಿದ. ಅನಂತರ—

"ಕೊಳ್ಳಿಸ್ವಾಮಿ. ನೀವು ಕೊಟ್ಟಯಂತ್ರ"

ಎಂದು ವೆಂಕಟೇಶಯ್ಯನ ಕೈಯ್ಯಲ್ಲಿ ಯಂತ್ರವನ್ನಿಟ್ಟ.

"ಈಗಲೇ ಕಟ್ಟಿಬಿಡು ವೆಂಕಟೇಶ"

ಎಂದರು ಸಭಾಪತಿಶಾಸ್ತ್ರಿಗಳು. ವೆಂಕಟೇಶಯ್ಯ ಹಾಗೆಯೇ ಮಾಡಿದ.

ಮುನಿತಾಯಪ್ಪ ಮಿತ್ರರ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಕೂಡಲೇ ಸುದರ್ಶನಯ್ಯಂಗಾರ್ಯ್ರರು ಎದ್ದು ಹೋದರು. ಐದೇ ನಿಮಿಷದಲ್ಲಿ ಟ್ಯಾಕ್ಸಿ ಯೊಂದು ಬಂದು ಮನೆಯ ಮುಂಗಡೆ ನಿಂತಿತು.

ಸಭಾಪತಿಶಾಸ್ತ್ರಿಗಳ ಆಜ್ಞೆಯಂತೆ, ವೆಂಕಟೇಶಯ್ಯ ಪ್ರಯಾಸದಿಂದ ನರಸಮ್ಮನನ್ನು ಟ್ಯಾಕ್ಸಿಯಲ್ಲಿ ಕೂಡಿಸಿದ. ಅವಳ ಪಕ್ಕದಲ್ಲಿ ಆಸರೆಯಾಗಿ ಕಮಲಮ್ಮನವರು ಕೈಕೂಸನ್ನೆತ್ತಿಕೊಂಡು ಕುಳಿತರು. ಮಕ್ಕಳೂ ಜೊತೆಗೆ ಬಂದರು. ವೆಂಕಟೇಶಯ್ಯನೂ, ಸಭಾಪತಿಶಾಸ್ತ್ರಿಗಳೂ ಕುಳಿತನಂತರ ಟ್ಯಾಕ್ಸಿ ಮಲ್ಲೇಶ್ವರದ ಕಡೆಗೆ ಹೊರಟಿತು.

ಶಾಸ್ತ್ರಿಗಳು ರೋಗಿಯೊಡನೆ ಮನೆ ಸೇರಿದಾಗ, ಶಂಕರಶಾಸ್ತ್ರಿಗಳು ಪೂಜಾಮಂದಿರದಲ್ಲಿ ಪ್ರತಿಷ್ಠಿತರಾಗಿ ಬಿಟ್ಟಿದ್ದರು. ಟ್ಯಾಕ್ಸಿಯಿಂದ ನರಸಮ್ಮ ಇಳಿದುದನ್ನು ಕಂಡಕೂಡಲೇ ಸೌಭಾಗ್ಯಮ್ಮನವರು ತಮ್ಮ ಮೆತ್ತನೆಯ ಹಾಸಿಗೆಯನ್ನೇ ಹಾಸಿ ಅಣಿಮಾಡಿದರು. ಅತ್ತಿಗೆಗೂ ತಿಳಿಯದಷ್ಟು ಶೀಘ್ರ ವಾಗಿ ರುಕ್ಮಿಣಿ ಕಾಫಿ ಮಾಡಿ ತಂದಳು. ತಮ್ಮ ಸೊಸೆ ಮತ್ತು ಮಗಳ ಜಾಣತನವನ್ನು ಕಂಡು ಕಮಲಮ್ಮ ಆನಂದದಿಂದ ಉಬ್ಬಿಹೋದರು.

ನರಸಮ್ಮನಿಗೆ ಸ್ವಲ್ಪ ಕಾಫಿ ಕುಡಿಸಿ, ಆಕೆಯನ್ನು ಮಲಗಿಸಿದ್ದಾಯಿತು. ಸೌಭಾಗ್ಯಮ್ಮ ತೊಟ್ಟಿಲು ಸರಿಪಡಿಸಿ, ನರಸಮ್ಮನ ಎಳೆಯ ಕಂದನನ್ನು ಮಲಗಿಸಿದರು. ರುಕ್ಮಿಣಿ ತೊಟ್ಟಿಲು ತೂಗುತ್ತಾ ಅತ್ತಿಗೆಯ ಬಳಿಯೇ ಕುಳಿತುಕೊಂಡಳು.

ಅಷ್ಟರಲ್ಲಾಗಲೇ ವೆಂಕಟೇಶಯ್ಯನ ಮಕ್ಕಳೊಡನೆ ಸ್ನೇಹ ಬೆಳೆಸಿದ್ದ ಗಣೇಶ, ಎಲ್ಲರನ್ನೂ ಕಟ್ಟಿಕೊಂಡು ಅಡಿಗೆ ಮನೆ ಸೇರಿದ್ದ. ಸ್ಟ್ಯಾಂಡಿನಲ್ಲಿದ್ದ ತಟ್ಟೆಗಳನ್ನೆಲ್ಲಾ ತೆಗೆದು ಸಾಲಾಗಿ ಹಾಕಿ, ಅಕ್ಕಪಕ್ಕದಲ್ಲಿದ್ದ ತನ್ನ ಗೆಳೆಯ ರನ್ನು ಕೂಡಿಕೊಂಡು ಲಲ್ಲೆಗೈಯುತ್ತಿದ್ದ ತಮ್ಮ ಮಗನನ್ನು ಕಂಡು

ಸೌಭಾಗ್ಯಮ್ಮ ಸಂತುಷ್ಟಿಗೊಂಡರು. ಅಕ್ಕರೆಯಿಂದ ಮಕ್ಕಳಿಗೆಲ್ಲಾ ಬಡಿಸಿ ಹೊರ ಬಂದು—

"ಕಾದ ನೀರಿದೆ ಅತ್ತೆಮ್ಮ, ಮಡಿ ಉಟ್ಟುಕೊಂಡು ಬಿಟ್ಟಿದ್ದರೆ ಆಗಿತ್ತು" ಎನ್ನುತ್ತಾ ಕಮಲಮ್ಮನವರ ಕಡೆಗೆ ನೋಡಿದರು.

"ಹೌದಮ್ಮ, ಮೂರು ಗಂಟೆಯಾಗುತ್ತಾ ಬಂತು–ಏಳು"

—ಎಂದು ರುಕ್ಮಿಣಿಯೂ ಒತ್ತಾಯ ಪಡಿಸಿದಳು.

"ಮೂರಾದರೇನು – ನಾಲ್ಕಾದರೇನು! ವೈದೀಕರ ಮನೆಯಲ್ಲಿ ಗಂಟೆ ಎಣಿಸಿದರೆ ಆಗುತ್ತದೇನೇ ಹುಡುಗಿ!!"

—ಎಂದು ಮೆಲು ನಗೆ ನಗುತ್ತಾ ಕಮಲಮ್ಮ ಎದ್ದು ಸ್ನಾನಕ್ಕೆ ಹೋದರು.

ಸಿಟಿ ಬಸ್ಸಿನಲ್ಲಿ ಬರುತ್ತೇವೆಂದು ಹೇಳಿದ್ದ ಸುದರ್ಶನಯ್ಯಂಗಾರ್ಯರೂ ಮುನಿತಾಯಪ್ಪನೂ ಸ್ವಲ್ಪ ಹೊತ್ತಿನ ಬಳಿಕ ಬಂದರು. ಶಾಸ್ತ್ರಿಗಳ ಮನೆಯಲ್ಲಿಯೇ ಎಲ್ಲರಿಗೂ ಊಟವಾಯಿತು.

"ಡಾಕ್ಟರನ್ನ ಕರೆಸಿ, ಅಮ್ಮಾವ್ರಿಗೆ ಔಷಧಿ ಕೊಡಿಸಿ ಸ್ವಾಮಿ. ಜ್ವರ ನಿಲ್ಲಲಿ" ಎಂದ ಮುನಿತಾಯಪ್ಪ.

"ಎರಡು – ಮೂರು ದಿನಗಳಿಂದ ಔಷಧಿ ಕುಡಿಸುತ್ತಲೇ ಇದ್ದೇವಲ್ಲ ಮುನಿತಾಯಪ್ಪ....ಏನೂ ಗುಣವೇ ಕಾಣಲಿಲ್ಲ!" ಎಂದರು ಸಭಾಪತಿ ಶಾಸ್ತ್ರಿಗಳು.

"ಇದುವರೆಗೂ ದೇವತೆಯ ಶಕ್ತಿಯಿಂದ ಔಷಧದ ಪ್ರಭಾವ ಏನೂ ನಡೆಯಲಿಲ್ಲ – ಅಷ್ಟೆ. ಆ ಔಷಧಿಗಳು ಮೈಗೆ ಹಿಡಿದಿದ್ದರೆ ತಾನೆ?"

"ಈಗ?"

"ಈಗ ಶಕ್ತಿಗೆ ತಡೆ ಕಟ್ಟಿದ್ದೇನೆ. ಔಷಧಿ ಮೈಗೆ ಹಿಡಿಯುತ್ತದೆ. ನಾಳೆಯೇ ಅದರ ಗುಣ ಕಾಣುತ್ತದೆ!"

ಎಂದು ಹೇಳಿ ಹೊರಡಲುವಾದ ಮುನಿತಾಯಪ್ಪ.

"ಪುನಃ ಯಾವಾಗ ಬರ್ತೀಯಾ ಮುನಿತಾಯಪ್ಪ?"

"ನಾಳೆ ಸಂಜೆಗೆ ಸ್ವಾಮಿ"

ಶಾಸ್ತ್ರಿಗಳಿಗೆ ಉತ್ತರಿಸಿದ ಮುನಿತಾಯಪ್ಪ ವೆಂಕಟೇಶಯ್ಯನ ಕಡೆಗೆ ನೋಡಿ—

"ಈಗ ನೀವು ಹುಷಾರಾಗಿರಬೇಕು ಸ್ವಾಮಿ. ಆ ಭದ್ರಯ್ಯ ಕೇಳಿದರೆ, ತೌರುಮನೆಯವರು ಬಂದು ಅಮ್ಮಾವ್ರನ್ನ ಕರಕೊಂಡುಹೋದರು ಅಂತ ಹೇಳಿಬಿಡಿ. ಇನ್ನೇನು ಕೇಳಿದರೂ ಬಾಯಿ ಬಿಡಬೇಡಿ—ಜೋಕೆ"

ಎಂದು ಎಚ್ಚರಿಸಿದ. 'ಆಗಲಿ' ಎಂಬಂತೆ ವೆಂಕಟೇಶಯ್ಯ ತಲೆ ಗವುಕು ಹಾಕಿದ. ಮುನಿತಾಯಪ್ಪ ತನ್ನ ಮನೆಯ ಕಡೆಗೆ ಹೊರಟ.

ಸಂಜೆ ಸುದರ್ಶನಯ್ಯಂಗಾರ್ಯರು ತಮ್ಮ ಪರಿಚಿತ ಡಾಕ್ಟರ್ ಚಂದ್ರಶೇಖರ್‌ರವರ ಬಳಿ ಔಷಧಿ ತೆಗೆದುಕೊಂಡು ತಂದುಕೊಟ್ಟು ಹೋದರು.

ಮರುದಿನ ಸಂಜೆಯ ವೇಳೆಗೆ ನರಸಮ್ಮನಿಗೆ ಜ್ವರ ಬಿಟ್ಟಿತು. ನಿಶ್ಶಕ್ತಿಯಿಂದಾಗಿ ಹಾಸಿಗೆ ಬಿಟ್ಟೇಳಲು ಆಗುತ್ತಿರಲಿಲ್ಲವಾದರೂ ಆಕೆ ಗೆಲುವಾಗಿದ್ದಳು. ಮೈಮೇಲೆ ಚನ್ನಾಗಿ ಪ್ರಜ್ಞೆ ಇದ್ದುದರಿಂದ, ಸುತ್ತಲಿನ ವಾತಾವರಣವನ್ನು ಕಂಡುಕೊಂಡು, ತನಗೆ ಸಲ್ಲುತ್ತಿದ್ದ ಆದರ - ಉಪಚಾರಗಳಿಗಾಗಿ ಮನಸ್ಸಿನಲ್ಲಿಯೇ ಎಲ್ಲರಿಗೂ ಕೃತಜ್ಞತೆ ಸೂಚಿಸಿದಳು.

ಮಾತು ಕೊಟ್ಟಿದ್ದಂತೆ ಆ ಸಂಜೆ ಮುನಿತಾಯಪ್ಪ ಬಾರದಿದ್ದುದನ್ನು ಕಂಡು ಸಭಾಪತಿಶಾಸ್ತ್ರಿಗಳು ಕಳವಳಗೊಂಡರು. ಆದರೆ ಸುದರ್ಶನಯ್ಯಂಗಾರ್ಯರು—

"ಆ ವಿದ್ಯೆ ಕಲಿತವರ ಪಾಡೆಲ್ಲಾ ಹೀಗೇಯೇ ಸಭಾಪತಿ. ಹೇಳಿದ ಹಾಗೆ ನಡೆದುಕೊಳ್ಳಲು ಅವರಿಗೆ ಅವಕಾಶವಾಗುವುದಿಲ್ಲ. ಮಧ್ಯೆ ಮಧ್ಯೆ ಎಷ್ಟೋ ತಾಪತ್ರಯ!"

ಎಂದು ಮಿತ್ರನನ್ನು ಸಮಾಧಾನಪಡಿಸಿದರು. ಅನಂತರ ಇಬ್ಬರೂ ತಮ್ಮ ನಿತ್ಯದ ಆರಾಮಧಾಮವಾದ ಗಣೇಶನ ಗುಡಿಯ ಬಯಲಿಗೆ ಬಂದರು. ಅಲ್ಲೇ ಇದ್ದ ಶಿಲಾಪೀಠದ ಮೇಲೆ ಕುಳಿತುಕೊಳ್ಳಬೇಕೆಂದಿದ್ದಾಗಲೇ ಸುದರ್ಶನಯ್ಯಂಗಾರ್ಯರ ಸೂಕ್ಷ್ಮನಯನ ಗುಡಿಯ ಮುಂಗಡೆಯ ರಸ್ತೆಯಲ್ಲಿ ಹೋಗುತ್ತಿದ್ದ ಭದ್ರಯ್ಯನನ್ನು ಗುರುತಿಸಿಬಿಟ್ಟಿತು! ಶಾಸ್ತ್ರಿಗಳಿಗೂ ಅವನನ್ನು ತೋರಿಸಿದರು.

ಇಬ್ಬರೂ ಬೇರೆ ಬೇರೆ ದಿಕ್ಕಿನಲ್ಲಿ ಹೊರಟು, ಭದ್ರಯ್ಯನ ಚಲನವಲನಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಲಾರಂಭಿಸಿದರು.

ಭದ್ರಯ್ಯ ಪ್ರತಿಮನೆಯ ಕಡೆಗೂ ನೋಡುತ್ತಾ, ಮುಂದೆ ಮುಂದೆ ನಡೆಯುತ್ತಿದ್ದ. ಹತ್ತಿರದ ಒಂದೆರಡು ರಸ್ತೆಗಳಲ್ಲಿ ತಿರುಗಾಡಿ, ಕೊನೆಗೆ ಮನೆ

ಯೊಂದರ ಮುಂಗಡೆ ನಿಂತಿದ್ದ ವೃದ್ಧರೊಬ್ಬರನ್ನು ಪ್ರಶ್ನಿಸಿದ—

"ಇಲ್ಲಿ ಶಾಸ್ತ್ರಿಗಳ ಮನೆ ಎಲ್ಲಿದಿ ಸ್ವಾಮಿ ?"

"ಯಾವ ಶಾಸ್ತ್ರಿಗಳಪ್ಪ ?"

"ಎಸ್ರು ಮರೆತ್ಬುಟ್ಟೆನ್ನಿ"

"ಇಲ್ಲಿ ಬೇಕಾದಷ್ಟು ಜನ ಶಾಸ್ತ್ರಿಗಳಿದ್ದಾರಪ್ಪ....ಅವರಿಗೇನು ಕೆಲಸ ?"

ಆ ಪ್ರಶ್ನೆಗೆ ಉತ್ತರ ಭದ್ರಯ್ಯನಿಗೆ ತಿಳಿದಿರಲಿಲ್ಲ.

"ಇಲ್ಲೇ ಎಲ್ಲೋ ಅಯ್ತೆ ಅವರ ಮನೇ...."

ಎಂದು ರಾಗವಾಗಿ ಹೇಳುತ್ತಾ ಅಲ್ಲಿಂದ ಮೆಲ್ಲನೆ ಜಾರಿಕೊಂಡ.

ಮತ್ತೆ ನಾಲ್ಕಾರು ಬೀದಿಗಳನ್ನು ಸುತ್ತಿದ್ದಾಯಿತು. ಮಿತ್ರರಿಬ್ಬರೂ ಅವನಿಗೆ ತಿಳಿಯದಂತೆ ಹಿಂದೆ ಹಿಂದೆಯೇ ಬಂದರು. ಕೊನೆಗೆ ನಿರಾಶನಾಗಿ ಬಸ್ಸು ಹತ್ತಿದ ಭದ್ರಯ್ಯ !

"ನೋಡಿದೆಯಾ ಸುದರ್ಶನ, ಆಗಲೇ ಪಿತೂರಿ ಪ್ರಾರಂಭಿಸಿದ ಹಾಗೆ ಕಾಣುತ್ತದೆ !"

"ಹೌದಪ್ಪ, ಈ ಸರ್ಪದ ಹಲ್ಲು ಕಿತ್ತು ಬುಟ್ಟಿಗೆ ಹಾಕದಿದ್ದರೆ ತುಂಬಾ ಕಷ್ಟ."

"ಈ ಕೆಲಸಕ್ಕೆ ಮುನಿತಾಯಪ್ಪನೇ ತಕ್ಕ ಹಾವಾಡಿಗ !"

"ಅವನು ಇವತ್ತು ಬಂದಿದ್ದರೆ ಚೆನ್ನಾಗಿತ್ತು"

"ನಾಳೆ ಬೆಳಗ್ಗೆ ನಾವೇ ಅವನ ಮನೆಗೆ ಹೋಗೋಣ"

"ಆಗಲಿ"—ಎಂದರು ಸುದರ್ಶನಯ್ಯಂಗಾರ್ಯರು.

ಆ ರಾತ್ರಿ ರುಕ್ಮಿಣಿಗೆ ಗ್ರಹಚಾರ ಪ್ರಾರಂಭವಾಯಿತು !

ಊಟ ಮುಗಿಸಿ ಎಲ್ಲರೂ ಮಲಗಿದ ಸ್ವಲ್ಪಹೊತ್ತಿನಲ್ಲಿಯೇ ಮನೆಯಲ್ಲಿ ಗದ್ದಲ ಪ್ರಾರಂಭವಾಯಿತು........

ತಾಯಿಯ ಪಕ್ಕದಲ್ಲಿ ಮಲಗಿದ್ದ ರುಕ್ಮಿಣಿ ಇದ್ದಕ್ಕಿದ್ದಂತೆ ಎದ್ದು— 'ಬರ್ತೀನಿ....ಬರ್ತಿನೀ' ಎಂದು ಕೂಗುತ್ತಾ ಬಾಗಿಲಕಡೆಗೆ ಓಡಿದಳು. ಅವಳ ಚೀರಾಟವನ್ನು ಕೇಳಿ ಎಲ್ಲರಿಗೂ ಎಚ್ಚರಿಕೆಯಾಗಿ ಬಿಟ್ಟಿತು. ಸಭಾಪತಿಶಾಸ್ತ್ರಿಗಳು ಕೂಡಲೇ ದೀಪ ಹೊತ್ತಿಸಿದರು.

ರುಕ್ಮಿಣಿ ಬಾಗಿಲಿನ ಚಿಲಕ ತೆಗೆದು ಇನ್ನೇನು ಓಡುವುದರಲ್ಲಿದ್ದಳು. ಅಷ್ಟರಲ್ಲಿ ಸೌಭಾಗ್ಯಮ್ಮ ಧಾವಿಸಿ, ಅವಳ ರಟ್ಟೆ ಹಿಡಿದು ಒಳಕ್ಕೆ ಎಳೆದರು.

ಆವೇಶಗೊಂಡ ರುಕ್ಮಿಣಿ ಅತ್ತಿಗೆಯನ್ನು ಲೆಕ್ಕಿಸದೆ ಹಿಂದಕ್ಕೆ ನೂಕಿದಳು. ಆ ರಭಸಕ್ಕೆ ಸೌಭಾಗ್ಯಮ್ಮ ಮೂರು ಮಾರು ದೂರದಲ್ಲಿ 'ದೊಪ್ಪನೆ' ಬಿದ್ದರು. ಅದನ್ನು ಕಂಡ ಸಭಾಪತಿಶಾಸ್ತ್ರಿಗಳು ಕೈಗೆ ಸಿಕ್ಕಿದ ಹಗ್ಗವೊಂದನ್ನು ತೆಗೆದು ಕೊಂಡು ರುಕ್ಮಿಣಿಯನ್ನು ಬಲವಾಗಿ ಎಳೆದು ಕಟ್ಟಿ, ಬಾಗಿಲು ಭದ್ರಪಡಿಸಿದರು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ. ಚಂಡಿ ಹಿಡಿದವಳಂತೆ ಒದ್ದಾಡುತ್ತಾ ರುಕ್ಮಿಣಿ ಹಗ್ಗವನ್ನು ತುಂಡುತುಂಡು ಮಾಡಿಬಿಟ್ಟಳು.

ಎಲ್ಲರಿಗೂ ಗಾಬರಿಯಾಯಿತು. ಕಮಲಮ್ಮನವರಂತೂ ಮಗಳಿಗೊದಗಿದ ಸ್ಥಿತಿಯನ್ನು ಕಂಡು ಸ್ಮೃತಿ ತಪ್ಪಿ ಬೀಳುವುದರಲ್ಲಿದ್ದರು. ವೆಂಕಟೇಶಯ್ಯ--'ಇದು ಭದ್ರಯ್ಯನ ಕೆಲಸವೇ ಇರಬಹುದು' ಎಂದು ಊಹಿಸಿಕೊಂಡ. ಆದರೆ ಬಾಯಿ ಬಿಡಲಿಲ್ಲ.

ಹಗ್ಗದಿಂದ ಬಿಡಿಸಿಕೊಂಡು ಓಡತೊಡಗಿದ ರುಕ್ಮಿಣಿಯನ್ನು ಮತ್ತೊಮ್ಮೆ ಪ್ರಯಾಸದಿಂದ ಎಳೆತಂದು, ಕೋಣೆಯಲ್ಲಿ ಕೂಡಿಹಾಕಿ, ಬಾಗಿಲಿಗೆ ಬೀಗ ಹಾಕಿದರು ಸಭಾಪತಿಶಾಸ್ತ್ರಿಗಳು. ಆದರೂ ಒಂದೇ ಸಮನೆ ಬಾಗಿಲು ಬಡಿದಳು ರುಕ್ಮಿಣಿ.

ಮನೆಯವರಿಗೆಲ್ಲಾ ಜೀವದಲ್ಲಿ ಜೀವವಿರಲಿಲ್ಲ. ಎಲ್ಲರೂ ಹೆದರಿ 'ಗಡ ಗಡ'ನೆ ನಡಗುತ್ತಿದ್ದರು, ಇಷ್ಟಾದರೂ ವೃದ್ಧ ಶಂಕರಶಾಸ್ತ್ರಿಗಳು ಮಾತ್ರ ಧೈರ್ಯ ವಾಗಿಯೇ ಇದ್ದರು. ದೇವರಲ್ಲಿಟ್ಟಿದ್ದ ದೃಢ ನಂಬಿಕೆ–ವಿಶ್ವಾಸ, ಅವರನ್ನು ನಿರ್ವಿಕಾರರನ್ನಾಗಿ ಮಾಡಿತ್ತು. 'ಪರಮೇಶ್ವರಾ, ನಾನು ನಂಬಿರುವುದು ನಿನ್ನೊಬ್ಬನನ್ನೇ. ಹಾಲಿನಲ್ಲಾದರೂ ಹಾಕು. ನೀರಿನಲ್ಲಾದರೂ ಹಾಕು. ಅದನ್ನು ಹಾಗೇ ಮಾಡು–ಇದನ್ನು ಹೀಗೇ ಮಾಡು ಎಂದು ಒತ್ತಾಯ ಪಡಿಸು ವುದಾಗಲಿ, ಅಥವಾ ಅದನ್ನು ಕೊಡು ಎಂದು ನಿನ್ನನ್ನು ಪೀಡಿಸುವುದಾಗಲಿ ನಾನು ಮಾಡಲಾರೆ. ನನಗೇನೂ ಅದರ ಅಗತ್ಯವಿಲ್ಲ. ಇಷ್ಟಕ್ಕೂ 'ನಾನು' ತಾನೆ ಯಾರು? ನಿನ್ನ ಪಾದಧೂಳಿಯ ಅಣುವಿನ ಪರಮಾಣುವಿನ ಅತ್ಯಲ್ಪಾಂಶ. ಎಂದಮೇಲೆ ನನಗೇನು ಶಕ್ತಿ? ನನಗೇನು ಅಧಿಕಾರ? ಎಲ್ಲವೂ ನಿನ್ನದೇ? ಎಲ್ಲವೂ ನೀನೆ. ನಿನ್ನ ಚಿತ್ತಕ್ಕೆ ಬಂದಂತೆ ಮಾಡು'–ಎಂದು ಅಗೋಚರನಾದ ಸೃಷ್ಟಿಕರ್ತನೊಡನೆ ಅವರು ಮೌನವಾಗಿ ಮಾತನಾಡಿ ಕೊಂಡರು. ಅನಂತರ ಆ ಕತ್ತಲಿನಲ್ಲಿಯೇ ಹಿತ್ತಲಿಗೆ ನಡೆದು, ಬಾವಿಯಲ್ಲಿ ನೀರು ಸೇದಿಕೊಂಡು ತಲೆಗೆ ಸ್ನಾನಮಾಡಿದರು. ಒದ್ದೆ ಬಟ್ಟೆಯಲ್ಲಿಯೇ

ಪೂಜಾಮಂದಿರವನ್ನು ಹೊಕ್ಕು ಧ್ಯಾನಾಸಕ್ತರಾದರು.

ಶಂಕರಶಾಸ್ತ್ರಿಗಳು ಪೂಜಾಮಂದಿರವನ್ನು ಹೊಕ್ಕ ಕೇವಲ ಕೆಲವೇ ನಿಮಿಷಗಳಲ್ಲಿ ರುಕ್ಮಿಣಿಯ ಚೀರಾಟ ನಿಂತು ಹೋಯಿತು ! ಬಾಗಿಲು ಬಡಿಯುವ ಸದ್ದೂ ನಿಂತಿತು ! ಎಲ್ಲರೂ ವಿಸ್ಮಯಗೊಂಡರು.

ಎರಡು ಕ್ಷಣಗಳ ಬಳಿಕ—

" ಯಾಕೆ ಬಾಗಿಲು ಹಾಕಿದ್ದೀರಿ ? ಅಣ್ಣಾ, ಬಾಗಿಲು ತೆಗಿ–ನಾನು ಅಪ್ಪನನ್ನು ನೋಡಬೇಕು " ಎಂದು ಕೂಗಿ ಹೇಳಿದಳು ರುಕ್ಮಿಣಿ.

ಆ ಶೀಘ್ರ ಪರಿವರ್ತನೆಗೆ ಕಾರಣ ಯಾರಿಗೂ ಹೊಳೆದಿರಲಿಲ್ಲ. ಅಲ್ಲದೆ. ಆ ಗದ್ದಲದಲ್ಲಿ ಎಲ್ಲರೂ ಶಂಕರಶಾಸ್ತ್ರಿಗಳನ್ನು ಮರೆತೇ ಬಿಟ್ಟಿದ್ದರು !

" ಚಿಕ್ಕಮನೆಯಲ್ಲಿ ನಿಮ್ಮ ತಂದೆ ಮಲಗಿದ್ದಾರೇನೋ ಕರೆಯಪ್ಪ "

ಎನ್ನುತ್ತಾ ಕಮಲಮ್ಮನವರು ಮಗನ ಮುಖ ನೋಡಿದರು. ಆದರೆ ಸಭಾಪತಿಶಾಸ್ತ್ರಿಗಳು ಹಾಗೆ ಮಾಡದೆ, ಕೋಣೆಯ ಬಾಗಿಲು ತೆರೆದರು. ಕೂಡಲೇ ಓಡಿದ ರುಕ್ಮಿಣಿ ಪೂಜಾಮಂದಿರಕ್ಕೆ ಬಂದು, ತಂದೆಯ ಪಾದಗಳನ್ನು ಭದ್ರವಾಗಿ ಹಿಡಿದುಕೊಂಡು–'ಅಪ್ಪಾ' ಎಂದು ಆರ್ತಳಾಗಿ ಕೂಗಿದಳು.

ಸಭಾಪತಿಶಾಸ್ತ್ರಿಗಳೂ, ಕಮಲಮ್ಮನವರೂ ರುಕ್ಮಿಣಿಯನ್ನೇ ಹಿಂಬಾಲಿಸಿ ಪೂಜಾಮಂದಿರಕ್ಕೆ ಬಂದರು; ಆ ದೃಶ್ಯವನ್ನು ಕಂಡು, ವಿಸ್ಮಯಗೊಂಡು ಮೂಕರಾದರು !

ಶಂಕರಶಾಸ್ತ್ರಿಗಳು ಧ್ಯಾನಾಸಕ್ತರಾಗಿ ಕುಳಿತಿದ್ದಾರೆ. ಮೈಮೇಲೆ ಪರಿವೆಯೇ ಇಲ್ಲ. ರುಕ್ಮಿಣಿಯ ' ಅಪ್ಪಾ–ಅಪ್ಪಾ ' ಎಂಬ ಆರ್ತನಾದವೂ ಕೇಳಿಸುತ್ತಿಲ್ಲ. ಪ್ರತಿಷ್ಠಿತ ಶಿವನ ಶಿಲಾಪ್ರತಿಮೆಯಂತೆ ನಿಶ್ಚಲರಾಗಿ ಕುಳಿತಿದ್ದಾರೆ. ವದನ ಪ್ರಸನ್ನವಾಗಿದೆ: ತೇಜಃಪುಂಜವಾಗಿದೆ. ಮುಚ್ಚಿದ್ದ ಕಣ್ಣು ಆತ್ಮ–ಪರಮಾತ್ಮರ ಸಮ್ಮಿಳನವನ್ನು ಸೂಚಿಸುತ್ತಿದೆ. ಏಕಾಗ್ರಚಿತ್ತದ ಮಹಾ ತಪಸ್ಸಿಗೆ ಭಂಗವುಂಟಾದೀತೇನೋ ಎಂಬ ಅಳುಕಿನಿಂದ ಚೇತನಸೂಚಕ ಉಸಿರಾಟ ಸಾವಧಾನ ಗತಿಯಲ್ಲಿ ಸಾಗಿದೆ.

ಆ ರೋಮಾಂಚಕ ಸನ್ನಿವೇಶದಲ್ಲಿ ನಿಂತಿದ್ದ ಸಭಾಪತಿಶಾಸ್ತ್ರಿಗಳು ತಂದೆಯನ್ನು ಕಾಣದೆ, ಸಾಕ್ಷಾತ್ ಪರಶಿವನನ್ನು ಕಂಡರು. ಆನಂದೋದ್ರೇಕದಿಂದ ಅವರ ಕಣ್ಣು ಹನಿಯಿಟ್ಟಿತು. ತಾವೂ ಆ ಸಾಕಾರ ಶಿವನಿಗೆ ಎರಗಿ, ದೀರ್ಘ ದಂಡ ಪ್ರಣಾಮ ಮಾಡಿದರು. ಕಮಲಮ್ಮನವರೂ ಸೌಭಾಗ್ಯಮ್ಮನವರೂ

ಶಾಸ್ತ್ರಿಗಳನ್ನೇ ಅನುಕರಿಸಿದರು. ವೆಂಕಟೇಶಯ್ಯನಿಗೂ ತನ್ನ ಚಿಕ್ಕಪ್ಪನನ್ನು ನೋಡಿ ಹೃದಯ ತುಂಬಿ ಬಂದಿತ್ತು. ರುಕ್ಮಿಣಿಯಂತೂ ತಂದೆಯ ಪಾದಗಳನ್ನು ಭದ್ರವಾಗಿ ಹಿಡಿದುಕೊಂಡಿದ್ದಳು.

ಅಂಗಳದ ಗೂಡಿನಲ್ಲಿದ್ದ ಅಲಾರಂ ಗಡಿಯಾರ ಎರಡು ಗಂಟೆ ತೋರಿಸಿತು. ಮೂರು....ನಾಲ್ಕು....ಗಡಿಯಾರದ ಮುಳ್ಳು ತನ್ನ ಪಾಡಿಗೆ ತಾನು ತಿರುಗಿತು. ಆದರೆ ಶಂಕರಶಾಸ್ತ್ರಿಗಳ ಮನಸ್ಸು ಈ ಲೋಕದತ್ತ ತಿರುಗಲಿಲ್ಲ. ಬಹುಶಃ ಅವರ ನೆಚ್ಚಿನ ಪರಶಿವ ಅವರನ್ನು ಬೇಗನೇ ಬಿಟ್ಟುಕೊಡಲಿಲ್ಲವೇನೋ !

ತಮಸ್ಸು ತಲ್ಲಣಿಸಿತು ತೇಜಸ್ಸಿಗೆ. ಪ್ರಕೃತಿಯ ಆ ಚಿರನೂತನ ಮಾಯಾಪರಣಕ್ಕೆ ಮರುಳಾದ ಹಕ್ಕಿಗಳು ನಕ್ಕು ಹಾಡಿದವು. ಉದಯಗಾನದಿಂದ ಎಚ್ಚೆತ್ತ ರವಿದೇವ ರಾಜ್ಯಾವಲೋಕನ ಮಾಡುತ್ತಾ ಪೂಜಾಮಂದಿರದೊಳಕ್ಕೂ ಹಣಿಕಿ ಬೆಳಕು ಬೀರಿದ. ಸಾವಧಾನವಾಗಿ ಕಣ್ಣು ತೆರದ ಶಾಸ್ತ್ರಿಗಳು ಸುತ್ತಲೂ ನೋಡಿದರು.

" ಮಗು, ಇನ್ನೇಕೆ ತಡ–ಮಂಗಳಾರತಿಯಾಗಲಿ "

ಸಭಾಪತಿಶಾಸ್ತ್ರಿಗಳಿಗೆ ತಂದೆಯ ಮಾತು ಅರ್ಥವಾಗಲಿಲ್ಲ.

" ಮಂಗಳಾರತಿ ಮಾಡುವುದಿಲ್ಲವೇ ? "

ಹಿರಿಯಶಾಸ್ತ್ರಿಗಳು ತುಸು ಕಠಿಣವಾದ ಧ್ವನಿಯಲ್ಲಿಯೇ ಕೇಳಿದರು.

' ಯಾರು ಮಾಡಬೇಕು ಮಂಗಳಾರತಿ ? '

ಎಂಬುದು ಒಂದು ಅರ್ಥವಾಗದ ಪ್ರಶ್ನೆಯಾಯಿತು.

ಸ್ನಾನವಿಲ್ಲ, ಸಂಧ್ಯಾವಂದನೆಯಿಲ್ಲ ; ಅಶುಚಿಯಾದ ದೇಹ–ಮೈಲಿಗೆಯ ಉಡಿಗೆತೊಡಿಗೆ ಪೂಜೆಗಾಗಲಿ–ಮಂಗಳಾರತಿಗಾಗಲಿ ತನ್ನನ್ನು ಅನರ್ಹನೆಂದು ಸಾರುತ್ತಿವೆ. ಮನೆಯ ಪದ್ಧತಿಯಂತೆ ತನಗೆ ಪೂಜಾಮಂದಿರದೊಳಕ್ಕೆ ಕಾಲಿಡಲೂ ಅಧಿಕಾರವಿಲ್ಲ. ಆದರೂ ಪರಿಸ್ಥಿತಿಯ ಸೆಳವಿಗೆ ಸಿಕ್ಕಿ, ತಾನಲ್ಲಿ ಬಂದು ನಿಂತಿದ್ದೇನೆ. ಅದೇ ಒಂದು ಅಪರಾಧ. ಅಂತಹುದರಲ್ಲಿ ಮಂಗಳಾರತಿ ಮಾಡಬೇಕೇ ತಾನು ?

ಸಭಾಪತಿಶಾಸ್ತ್ರಿಗಳ ಮನಸ್ಸು ಹೊಯ್ದಾಡಿತು.

" ಇದೇನೀ ಉಪೇಕ್ಷೆ ? ಶಂಕರ ರುದ್ರನಾಗಬೇಕೆಂದು ಆಸೆಯೇನು ?"

" ನಾನಿನ್ನೂ ಮಡಿ ಉಟ್ಟುಕೊಂಡಿಲ್ಲ"

ಅಂಜುತ್ತಂಜುತ್ತಾ ನುಡಿದರು ಸಭಾಪತಿಶಾಸ್ತ್ರಿಗಳು.

"ಮಡಿ....ಹಹ್ಹಹ್ಹಾ !"

ತಂದೆ ನಕ್ಕರು–ರುದ್ರ ನಗೆ.......

"ಮಗೂ, ಮಡಿ ಮೈಗೋ–ಮನಸ್ಸಿಗೋ ?"

ಗಹನವಾದ ಪ್ರಶ್ನೆಗೆ ಉತ್ತರಬರಲಿಲ್ಲ.

"ಸಭಾಪತೀ, ಇನ್ನುಮೇಲೆ ನೀನು ನನ್ನ ಮಗ....ನನ್ನ ಹಿರಿಯ ಪುತ್ರ....ಗಣಪತಿ....ಗಣಪತಿ...."

ಸಭಾಪತಿಶಾಸ್ತ್ರಿಗಳಿಗೆ ಈಗ ಅರ್ಥವಾಯಿತು. ತಮ್ಮ ತಂದೆಯ ಮೇಲೆ ಸಾಕ್ಷಾತ್ ಈಶ್ವರನೇ ಆವೇಶಗೊಂಡಿದ್ದಾನೆ ಎಂಬುದು ತಿಳಿಯಿತು. ಅದುವರೆಗಿನ ತಮ್ಮ ತಪ್ಪು ತಿಳುವಳಿಕೆಗೆ ಪಶ್ಚಾತ್ತಾಪಪಟ್ಟರು.

"ಇನ್ನು ಮೇಲೆ ನನ್ನ ಕಂದನಿಗೆ ಮಡಿಯಾವುದು–ಮೈಲಿಗೆ ಯಾವುದು? ಸದಾಚಾರವೇ ಸ್ನಾನ; ನಿರ್ಮಲಾಂತರಂಗವೇ ಮಡಿ. ದುರಾಚಾರವೇ ಅಶುಚಿ; ಅಪಕಾರ ಬುದ್ಧಿಯೇ ಮೈಲಿಗೆ"

ಸಭಾಪತಿಶಾಸ್ತ್ರಿಗಳು ದೀರ್ಘದಂಡ ನಮಸ್ಕಾರ ಮಾಡಿದರು.

"ಆಯುಷ್ಮಂತನಾಗಿ ಬಾಳು ಮಗೂ"

ಸಭಾಪತಿಶಾಸ್ತ್ರಿಗಳು ಎದ್ದು ಮಂಗಳಾರತಿ ಮಾಡಿದರು. ಮನೆಯವರೆಲ್ಲರೂ ಪರಮ ಶ್ರದ್ಧಾ ಭಕ್ತಿಯಿಂದ ತಲೆವಾಗಿ ನಮಸ್ಕರಿಸಿ, ಪರಶಿವನ ದರ್ಶನ ಪಡೆದರು.

ಮಂಗಳಾರತಿ ಮುಗಿದ ಕೆಲವೇ ನಿಮಿಷಗಳಲ್ಲಿ, ಧ್ಯಾನಾಸಕ್ತರಾಗಿದ್ದ ಶಂಕರಶಾಸ್ತ್ರಿಗಳು ಕುಳಿತಂತೆಯೇ ಹೊರಳಿ ಕೆಳಗೆ ಬಿದ್ದರು. ಗಾಬರಿಗೊಂಡು ಎಲ್ಲರೂ ಉಪಚಾರಕ್ಕೆ ತೊಡಗಿದರು. ಸ್ವಲ್ಪಹೊತ್ತಿನ ಬಳಿಕ ತಿಳಿವು ಮೂಡಿತು. ಶಂಕರಶಾಸ್ತ್ರಿಗಳು ಎದ್ದು ಕುಳಿತು—

"ಇಷ್ಟು ವರ್ಷಗಳಿಗೆ ನಿನ್ನೆ ಒಂದು ರಾತ್ರಿ ಮಾತ್ರ ಸೊಗಸಾಗಿ ನಿದ್ರೆ ಬಂದಿತ್ತು" ಎನ್ನುತ್ತಾ ಕಣ್ಣುಜ್ಜಿಕೊಂಡರು. ಬಳಿಯಲ್ಲಿಯೆ ಇದ್ದ ರುಕ್ಮಿಣಿಯನ್ನು ನೋಡಿ—

"ಈಗ ರುಕ್ಕು ಹೇಗಿದ್ದಾಳೆ ?"

"ಸ್ವಸ್ಥವಾಗಿದ್ದಾಳಪ್ಪ"

"ಸದ್ಯ ಗ್ರಹಚಾರ ಕಳೆಯಿತಲ್ಲ"

" ಅದೂ ನಿನ್ನ ಅನುಗ್ರಹ–ಆಶೀರ್ವಾದಗಳಿಂದ........"

" ಹಾಗಂದರೇನು ? ಅನುಗ್ರಹ ಮಾಡುವ ಅಧಿಕಾರ ಮನುಷ್ಯರಿಗೆಲ್ಲಿ ಬಂತು ? ಅದು ದೇವರಿಗೆ ಸೇರಿದ್ದು "

" ಮನುಷ್ಯನೂ ಸ್ವಲ್ಪ ಹೊತ್ತು ದೇವರಾದರೇ........? "

ಶಂಕರಶಾಸ್ತ್ರಿಗಳು ವಿಸ್ಮಯಗೊಂಡರು–ಮಗನ ಮಾತು ಕೇಳಿ.

ಅಷ್ಟರಲ್ಲಿ ಮುನಿತಾಯಪ್ಪ ಮನೆಯೊಳಗೆ ಬಂದಿದ್ದ. ಅವನನ್ನು ಹಿಂಬಾಲಿಸಿ ಸುದರ್ಶನಯ್ಯಂಗಾರ್ಯರೂ ಬಂದರು. ಸಭಾಪತಿಶಾಸ್ತ್ರಿಗಳು ರಾತ್ರಿಯಿಂದ–ಅದುವರೆಗೆ ನಡೆದ ಘಟನಾವಳಿಯನ್ನು ಬಹು ರಸವತ್ತಾಗಿ ಎಲ್ಲರಿಗೂ ವಿವರಿಸಿ ಹೇಳಿದರು.

" ಒಂದಲ್ಲ ಒಂದು ರೂಪದಲ್ಲಿ ಪರಶಿವನನ್ನು ಕಂಡ ನೀವೇ ಧನ್ಯರು "

ಎಂದರು ಸುದರ್ಶನಯ್ಯಂಗಾರ್ಯರು.

ಮುನಿತಾಯಪ್ಪ ಆನಂದ ಬಾಷ್ಪ ಹರಿಸುತ್ತ, ಶಂಕರಶಾಸ್ತ್ರಿಗಳ ಸಮ್ಮುಖದಲ್ಲಿ ಅಡ್ಡ ಬಿದ್ದು ನಮಸ್ಕರಿಸಿದ. ಹಿರಿಯಶಾಸ್ತ್ರಿಗಳು ಮತ್ತಿಗೆಹಳ್ಳಿಯ ಪರಿಚಯ ಹೇಳಿ ಕುಶಲವನ್ನು ವಿಚಾರಿಸಿ, ತರುವಾಯ ಒಳಗೆ ನಡೆದರು.

ನಿತ್ಯಕರ್ಮಗಳನ್ನು ಮುಗಿಸಿ ಬಂದ ಸಭಾಪತಿಶಾಸ್ತ್ರಿಗಳು ಎಲ್ಲರೊಡನೆಯೂ ಉಪಹಾರ ಸ್ವೀಕರಿಸಿದರು. ಅನಂತರ ಮುನಿತಾಯಪ್ಪ ವೆಂಕಟೇಶಯ್ಯನವರ ಕಡೆಗೆ ನೋಡಿ—

" ಅಮ್ಮಾವ್ರಿಗೆ ಈಗ ಹೇಗಿದೆ ಸ್ವಾಮಿ ?" ಎಂದು ಕೇಳಿದ.

" ನಿನ್ನ ದಯೆಯಿಂದ ಇವತ್ತು ಹಾಸಿಗೆ ಬಿಟ್ಟು ಎದ್ದಿದಾಳಪ್ಪ"

" ಶಿವನ ದಯೆ ಅನ್ನಿ ಸ್ವಾಮಿ....ಶಿವನ ದಯೆ ಅನ್ನಿ"

ಮುನಿತಾಯಪ್ಪ ಗಲ್ಲ ಬಡಿದುಕೊಂಡ.

" ನಿನ್ನೆ ಬರುತ್ತೀನಿ ಅಂದಿದ್ದೆಯಲ್ಲಾ ! ಆಸಾಮಿ ಪತ್ತೆಯೇ ಇಲ್ಲ !!"

" ಕೆಟ್ಟ ನಾಲಿಗೆ ಸ್ವಾಮಿ ! ಮಾಡೋದು ಒಂದಾದರೆ ಆಡೋದು ಒಂದು !....ನಿನ್ನೆ ಏನೋ ಕೆಲಸ ಬಿದ್ದುಬಿಟ್ಟಿತ್ತು "

ಎಂದು ಮುನಿತಾಯಪ್ಪ ಮುಂದುವರಿಸಿದ—

" ವೆಂಕಟೇಶಯ್ಯನೋರು ಇಲ್ಲೇ ಎಲ್ಲಾರ ಮನೆ ಮಾಡೋದು ಒಳ್ಳೇದು. ಅಲಸೂರು ಪೇಟೆ ಮನೇಲ್ಲೇ ಸಂಸಾರ ಮಾಡ್ತೀನಿ ಅಂದರೆ ನರಸಮ್ಮನೋರು ಖಂಡಿತ ಉಳಿಯೋದಿಲ್ಲ. "

"ಈ ಕಾಯಿಲೆ ಒಳಗುಟ್ಟು ಏನೋ ಇದೆ ಎಂದಿದ್ದೆಯಲ್ಲ ಮುನಿತಾಯಪ್ಪ—ಏನಾದರೂ ಪತ್ತೆಯಾಯಿತೆ ?"

"ಪತ್ತೆ ಮಾಡದೆ ಬಿಡುತ್ತೇನಾ ಸ್ವಾಮಿ !"

"ನಾವೂ ತಿಳಿದುಕೊಳ್ಳಬಹುದೋ ಅಥವಾ ನಮಗೂ ಗುಟ್ಟೇನೋ !"

"ಗುಟ್ಟು ಗುಟ್ಟೇನೇ ! ನೀವೂ ತಿಳಕೊಂಡು ಗುಟ್ಟಾಗೇ ಇಟ್ಟರಾಯಿತು !"

ಎಂದು ನಕ್ಕ ಮುನಿತಾಯಪ್ಪ. ಅವನೊಡನೆ ಉಳಿದವರೂ ನಕ್ಕರು.

"ಇನ್ನೊಂದು ವಿಚಾರ ಸ್ವಾಮಿ – ಇದ್ದ ಸಂಗತಿ ಇದ್ದ ಹಂಗೇ ಹೇಳಿಬಿಡ್ತೀನಿ. ನೀವು ಯಾರೂ ಕೋಪ ಮಾಡಿಕೋಬಾರದು....ಮುಖ್ಯ ವೆಂಕಟೇಶಯ್ಯನೋರು ಸಿಟ್ಟು ಮಾಡಿಕೋಬಾರದು"

"ಹಾಗೇನೂ ಇಲ್ಲ....ಹೇಳಪ್ಪ" ಎಂದ ವೆಂಕಟೇಶಯ್ಯ.

ಭದ್ರಯ್ಯ ನರಸಮ್ಮನನ್ನು ಬಯಸಿದುದನ್ನೂ, ಸ್ವಪ್ನ ಫಲವಾಗಿ ಅವನ ಮನಸ್ಸು ಬದಲಿ ಆಕೆಯ ಕ್ಷಮೆ ಕೇಳಿಕೊಂಡುದನ್ನೂ ವಿವರವಾಗಿ ಬಣ್ಣಿಸಿದ ಮುನಿತಾಯಪ್ಪ. ಆದರೂ ಭದ್ರಯ್ಯನಿಗೆ ಹಿಡಿದ ಹೆಣ್ಣಿನ ಹುಚ್ಚು ಒಂದು ವಾರದ ಬಳಿಕ ನರಸಮ್ಮನ ವಿಷಯದಲ್ಲಿ ಮತ್ತೆ ಕೆರಳಿತು. ಕುಡಿದು ಅಮಲೇರಿದಾಗಲಂತೂ 'ನರಸಮ್ಮನಿಲ್ಲದೆ ಬದುಕಿರಲು ಸಾಧ್ಯವಿಲ್ಲ' ಎಂದು ಕಡು ಹಂಬಲದಿಂದ ಕಾತರಿಸುತ್ತಿದ್ದ. ಅವಳನ್ನು ಕಂಡಾಗಲೆಲ್ಲಾ – ಹತ್ತಿರಕ್ಕೆ ಸೆಳೆದುಕೊಂಡು ತನ್ನ ಆಸೆ ತೀರಿಸಿಕೊಳ್ಳಬೇಕೆಂಬ ಉತ್ಕಟೇಚ್ಛೆ ಭದ್ರಯ್ಯನಿಗೆ ಬಲವಾಯಿತು. ಆದರೆ ಹತ್ತಿರ ಬಂದಾಗ ನರಸಮ್ಮನ ಮುಖದಲ್ಲಿ, ಕನಸಿನಲ್ಲಿ ಕಂಡ 'ಶಾಕಿನಿ'ಯ ರೂಪ ಕಾಣುತ್ತಿದ್ದಿತು. ಮರುಕ್ಷಣದಲ್ಲಿ ತನ್ನ ತಾಯಿಯಂತೆಯೇ ಕಾಣುತ್ತಿದ್ದಳು ನರಸಮ್ಮ. ಮನೆಗೆ ಬಂದರೆ, ಮತ್ತೆ ಮನಸ್ಸು ಅವಳ ಕಡೆಗೇ ಹರಿಯುತ್ತಿತ್ತು. ಅವಳನ್ನು ಪಡೆಯದೆ – ಕೂಡದೆ ಇದ್ದರೆ ಸಾಧ್ಯವೇ ಇಲ್ಲವೇನೋ ಎಂಬಷ್ಟು ಮಟ್ಟಿಗೆ ಉದ್ವೇಗದಿಂದ ಕಾತರಗೊಳ್ಳುತ್ತಿದ್ದ. ಆದರೆ ನರಸಮ್ಮನ ಬಳಿಗೆ ಹೋದಾಗ, ಆಕೆ ತಾಯಿಯಂತೆ –ಶಾಕಿನಿಯಂತೆ ಗೋಚರಿಸಿ, ಅವನ ಉದ್ವೇಗದ ಕಾವಿಗೆ ತಣ್ಣೀರೆರಚಿದಂತಾಗುತ್ತಿತ್ತು. ಬರುಬರುತ್ತಾ ಆಸೆ ಉಲ್ಬಣಿಸಿತು. ದಿಕ್ಕು ತೋರದಾದ ಭದ್ರಯ್ಯ. ಒಂದು ದಿನ ಅವನ ಮನಸ್ಸು ಇದಕ್ಕೊಂದು ಮದ್ದು ಹುಡುಕಿತು; 'ತನ್ನ ಆಸೆಗೆ – ಹಂಬಲಕ್ಕೆ ಕಾರಣ ನರಸಮ್ಮ. ಅವಳನ್ನು ನೋಡಿದರೆ

ತನ್ನ ಉದ್ವೇಗವನ್ನು ತಡೆಯುವುದು ಅತಿ ಕಷ್ಟ. ನೋಡದಿರೋಣವೆಂದರೂ ಅವಳ ನೆನಪು ಬಂದು ತನ್ನನ್ನು ತುಂಬಾ ಪೀಡಿಸುತ್ತದೆ. ಆ ನೆನಪು ಅಳಿಯ ಬೇಕಾದರೆ ಅವಳೂ ಅಳಿಯಬೇಕು. ನರಸಮ್ಮ ಸತ್ತರೆ ಮಾತ್ರ ತಾನು ಅವಳನ್ನು ಮರೆಯಬಹುದು. ಇಲ್ಲದಿದ್ದರೆ ಎಂದೆಂದಿಗೂ ಸಾಧ್ಯವೇ ಇಲ್ಲ. –ಎಂದು ನಿಶ್ಚಯಿಸಿದ ಭದ್ರಯ್ಯ 'ಶಾಕಿನಿ'ಯ ಮರೆಹೊಕ್ಕು ತನ್ನ ಇಷ್ಟಾರ್ಥ ವನ್ನು ಹೇಳಿಕೊಂಡ : ' ಇದ್ದಕ್ಕಿದ್ದ ಹಾಗೆ ನರಸಮ್ಮ ಸಾಯಬಾರದು. ನಾಲ್ಕು ದಿನಗಳ ಅವಧಿ ಇರಲಿ; ಕಾಯಿಲೆಯ ನೆಪವಿರಲಿ'. ' ಶಾಕಿನಿ ' ಒಪ್ಪಿ ಕೊಂಡಳು. ಆ ಬಿರುಸಿನಲ್ಲಿಯೇ ವೆಂಕಟೇಶಯ್ಯನ ಮನೆ ಹೊಕ್ಕಳು. ಆ ಸಮಯದಲ್ಲಿ ಬಚ್ಚಲು ಮನೆಯಲ್ಲಿದ್ದ ನರಸಮ್ಮನನ್ನು ರಭಸದಿಂದ ಉರುಳಿಸಿ ದಳು ; ಕಾಯಿಲೆ ಆರಂಭವಾಯಿತು. ಇನ್ನು ನಾಲ್ಕು ದಿನಗಳ ಅವಧಿ – ನಾಲ್ಕೇ ನಾಲ್ಕು ದಿನಗಳ ಅವಕಾಶ ನರಸಮ್ಮನ ಪರಲೋಕಯಾತ್ರೆಗೆ ! ಅಷ್ಟರಲ್ಲಿ ಯಾರಾದರೂ ' ವಿದ್ಯೆ ' ಬಲ್ಲವರು ಆಕಸ್ಮಿಕವಾಗಿ ನೋಡಿ, ಗುಟ್ಟು ಕಂಡುಕೊಂಡು ನರಸಮ್ಮನನ್ನು ಬದುಕಿಸಿ ಬಿಟ್ಟರೆ ಕಷ್ಟ....ತುಂಬಾ ಕಷ್ಟ ! ಅದಕ್ಕೋಸ್ಕರವೇ ' ಪ್ರತಿಗ್ರಹ ನಿರೋಧಕ ಯಂತ್ರ!'. ಅದನ್ನು ಕಟ್ಟಿಕೊಂಡ ನರಸಮ್ಮನನ್ನು ಬದುಕಿಸಲು ಯಾರೇ ಬಂದರೂ, ಎಷ್ಟೇ ಸಾಹಸಮಾಡಿದರೂ ಏನೂ ಪ್ರಯೋಜನವಿಲ್ಲ....

ಇಷ್ಟು ಸಂಗತಿಯನ್ನು ಮುನಿತಾಯಪ್ಪ ತನ್ನ ಮಾತುಗಳಲ್ಲಿ ವಿವರಿಸಿ ಹೇಳಿದ.

" ಮುಂದಿನ ವಿಷಯವೆಲ್ಲಾ ನಿಮಗೇ ತಿಳಿದಿದೆಯಲ್ಲಾ ಸ್ವಾಮಿ...."

" ಹ್ಞ ಹ್ಞ " – ಎಂದು ಉಳಿದವರು ತಲೆದೂಗಿದರು.

ರೋಷವನ್ನು ಕೆರಳಿಸುವಂತಿದ್ದ ಭದ್ರಯ್ಯನ ಕುಟಿಲತಂತ್ರ ಎಲ್ಲರಿಗೂ ವಿಸ್ಮಯವನ್ನುಂಟುಮಾಡಿತ್ತು. ಅದಕ್ಕಿಂತಲೂ ಹೆಚ್ಚಾಗಿ, ಅದು ಬಯಲಾದ ಬಗೆಯನ್ನರಿಯಲು ಕುತೂಹಲ....

ಸುದರ್ಶನಯ್ಯಂಗಾರ್ರ‍್ಯರು ಆರಂಭಿಸಿದರು—

" ಮುನಿತಾಯಪ್ಪ, ನೀನು ಸಾಮಾನ್ಯನಲ್ಲ ! ನಿನ್ನ ವಿದ್ಯೆ ದೊಡ್ಡದು!!"

" ನನ್ನಲ್ಲೇನೂ ವಿಶೇಷವಿಲ್ಲ ಸ್ವಾಮಿ....ನನ್ನ ವಿದ್ಯೆಗೂ ಅಷ್ಟು ಹೆಚ್ಚಿನ ಶಕ್ತಿ ಇಲ್ಲ "

" ಹಾಗಂದರೆ ನಂಬುವವರು ಯಾರು ? ಸಮಯಕ್ಕೆ ಬಂದು, ಗುಟ್ಟು

"ಈ ಕಾಯಿಲೆ ಒಳಗುಟ್ಟು ಏನೋ ಇದೆ ಎಂದಿದ್ದೆಯಲ್ಲ ಮುನಿತಾಯಪ್ಪ—ಏನಾದರೂ ಪತ್ತೆಯಾಯಿತೆ ?"

"ಪತ್ತೆ ಮಾಡದೆ ಬಿಡುತ್ತೇನಾ ಸ್ವಾಮಿ !"

"ನಾವೂ ತಿಳಿದುಕೊಳ್ಳಬಹುದೋ ಅಥವಾ ನಮಗೂ ಗುಟ್ಟೇನೋ !"

"ಗುಟ್ಟು ಗುಟ್ಟೇನೇ ! ನೀವೂ ತಿಳಕೊಂಡು ಗುಟ್ಟಾಗೇ ಇಟ್ಟರಾಯಿತು !"

ಎಂದು ನಕ್ಕ ಮುನಿತಾಯಪ್ಪ. ಅವನೊಡನೆ ಉಳಿದವರೂ ನಕ್ಕರು.

"ಇನ್ನೊಂದು ವಿಚಾರ ಸ್ವಾಮಿ – ಇದ್ದ ಸಂಗತಿ ಇದ್ದ ಹಂಗೇ ಹೇಳಿಬಿಡ್ತೀನಿ. ನೀವು ಯಾರೂ ಕೋಪ ಮಾಡಿಕೋಬಾರದು....ಮುಖ್ಯ ವೆಂಕಟೇಶಯ್ಯನೋರು ಸಿಟ್ಟು ಮಾಡಿಕೋಬಾರದು"

"ಹಾಗೇನೂ ಇಲ್ಲ....ಹೇಳಪ್ಪ" ಎಂದ ವೆಂಕಟೇಶಯ್ಯ.

ಭದ್ರಯ್ಯ ನರಸಮ್ಮನನ್ನು ಬಯಸಿದುದನ್ನೂ, ಸ್ವಪ್ನ ಫಲವಾಗಿ ಅವನ ಮನಸ್ಸು ಬದಲಿ ಆಕೆಯ ಕ್ಷಮೆ ಕೇಳಿಕೊಂಡುದನ್ನೂ ವಿವರವಾಗಿ ಬಣ್ಣಿಸಿದ ಮುನಿತಾಯಪ್ಪ. ಆದರೂ ಭದ್ರಯ್ಯನಿಗೆ ಹಿಡಿದ ಹೆಣ್ಣಿನ ಹುಚ್ಚು ಒಂದು ವಾರದ ಬಳಿಕ ನರಸಮ್ಮನ ವಿಷಯದಲ್ಲಿ ಮತ್ತೆ ಕೆರಳಿತು. ಕುಡಿದು ಅಮಲೇರಿದಾಗಲಂತೂ 'ನರಸಮ್ಮನಿಲ್ಲದೆ ಬದುಕಿರಲು ಸಾಧ್ಯವಿಲ್ಲ' ಎಂದು ಕಡು ಹಂಬಲದಿಂದ ಕಾತರಿಸುತ್ತಿದ್ದ. ಅವಳನ್ನು ಕಂಡಾಗಲೆಲ್ಲಾ – ಹತ್ತಿರಕ್ಕೆ ಸೆಳೆದುಕೊಂಡು ತನ್ನ ಆಸೆ ತೀರಿಸಿಕೊಳ್ಳಬೇಕೆಂಬ ಉತ್ಕಟೇಚ್ಛೆ ಭದ್ರಯ್ಯನಿಗೆ ಬಲವಾಯಿತು. ಆದರೆ ಹತ್ತಿರ ಬಂದಾಗ ನರಸಮ್ಮನ ಮುಖದಲ್ಲಿ, ಕನಸಿನಲ್ಲಿ ಕಂಡ 'ಶಾಕಿನಿ'ಯ ರೂಪ ಕಾಣುತ್ತಿದ್ದಿತು. ಮರುಕ್ಷಣದಲ್ಲಿ ತನ್ನ ತಾಯಿಯಂತೆಯೇ ಕಾಣುತ್ತಿದ್ದಳು ನರಸಮ್ಮ. ಮನೆಗೆ ಬಂದರೆ, ಮತ್ತೆ ಮನಸ್ಸು ಅವಳ ಕಡೆಗೇ ಹರಿಯುತ್ತಿತ್ತು. ಅವಳನ್ನು ಪಡೆಯದೆ – ಕೂಡದೆ ಇದ್ದರೆ ಸಾಧ್ಯವೇ ಇಲ್ಲವೇನೋ ಎಂಬಷ್ಟು ಮಟ್ಟಿಗೆ ಉದ್ವೇಗದಿಂದ ಕಾತರಗೊಳ್ಳುತ್ತಿದ್ದ. ಆದರೆ ನರಸಮ್ಮನ ಬಳಿಗೆ ಹೋದಾಗ, ಆಕೆ ತಾಯಿಯಂತೆ –ಶಾಕಿನಿಯಂತೆ ಗೋಚರಿಸಿ, ಅವನ ಉದ್ವೇಗದ ಕಾವಿಗೆ ತಣ್ಣೀರೆರಚಿದಂತಾಗುತ್ತಿತ್ತು. ಬರುಬರುತ್ತಾ ಆಸೆ ಉಲ್ಬಣಿಸಿತು. ದಿಕ್ಕು ತೋರದಾದ ಭದ್ರಯ್ಯ. ಒಂದು ದಿನ ಅವನ ಮನಸ್ಸು ಇದಕ್ಕೊಂದು ಮದ್ದು ಹುಡುಕಿತು; 'ತನ್ನ ಆಸೆಗೆ – ಹಂಬಲಕ್ಕೆ ಕಾರಣ ನರಸಮ್ಮ. ಅವಳನ್ನು ನೋಡಿದರೆ

ತನ್ನ ಉದ್ವೇಗವನ್ನು ತಡೆಯುವುದು ಅತಿ ಕಷ್ಟ. ನೋಡದಿರೋಣವೆಂದರೂ ಅವಳ ನೆನಪು ಬಂದು ತನ್ನನ್ನು ತುಂಬಾ ಪೀಡಿಸುತ್ತದೆ. ಆ ನೆನಪು ಅಳಿಯ ಬೇಕಾದರೆ ಅವಳೂ ಅಳಿಯಬೇಕು. ನರಸಮ್ಮ ಸತ್ತರೆ ಮಾತ್ರ ತಾನು ಅವಳನ್ನು ಮರೆಯಬಹುದು. ಇಲ್ಲದಿದ್ದರೆ ಎಂದೆಂದಿಗೂ ಸಾಧ್ಯವೇ ಇಲ್ಲ.' –ಎಂದು ನಿಶ್ಚಯಿಸಿದ ಭದ್ರಯ್ಯ 'ಶಾಕಿನಿ'ಯ ಮರೆಹೊಕ್ಕು ತನ್ನ ಇಷ್ಟಾರ್ಥ ವನ್ನು ಹೇಳಿಕೊಂಡ : ' ಇದ್ದಕ್ಕಿದ್ದ ಹಾಗೆ ನರಸಮ್ಮ ಸಾಯಬಾರದು. ನಾಲ್ಕು ದಿನಗಳ ಅವಧಿ ಇರಲಿ; ಕಾಯಿಲೆಯ ನೆಪವಿರಲಿ'. ' ಶಾಕಿನಿ ' ಒಪ್ಪಿ ಕೊಂಡಳು. ಆ ಬಿರುಸಿನಲ್ಲಿಯೇ ವೆಂಕಟೇಶಯ್ಯನ ಮನೆ ಹೊಕ್ಕಳು. ಆ ಸಮಯದಲ್ಲಿ ಬಚ್ಚಲು ಮನೆಯಲ್ಲಿದ್ದ ನರಸಮ್ಮನನ್ನು ರಭಸದಿಂದ ಉರುಳಿಸಿ ದಳು ; ಕಾಯಿಲೆ ಆರಂಭವಾಯಿತು. ಇನ್ನು ನಾಲ್ಕು ದಿನಗಳ ಅವಧಿ – ನಾಲ್ಕೇ ನಾಲ್ಕು ದಿನಗಳ ಅವಕಾಶ ನರಸಮ್ಮನ ಪರಲೋಕಯಾತ್ರೆಗೆ ! ಅಷ್ಟರಲ್ಲಿ ಯಾರಾದರೂ ' ವಿದ್ಯೆ ' ಬಲ್ಲವರು ಆಕಸ್ಮಿಕವಾಗಿ ನೋಡಿ, ಗುಟ್ಟು ಕಂಡುಕೊಂಡು ನರಸಮ್ಮನನ್ನು ಬದುಕಿಸಿ ಬಿಟ್ಟರೆ ಕಷ್ಟ....ತುಂಬಾ ಕಷ್ಟ ! ಅದಕ್ಕೋಸ್ಕರವೇ ' ಪ್ರತಿಗ್ರಹ ನಿರೋಧಕ ಯಂತ್ರ!'. ಅದನ್ನು ಕಟ್ಟಿಕೊಂಡ ನರಸಮ್ಮನನ್ನು ಬದುಕಿಸಲು ಯಾರೇ ಬಂದರೂ, ಎಷ್ಟೇ ಸಾಹಸಮಾಡಿದರೂ ಏನೂ ಪ್ರಯೋಜನವಿಲ್ಲ....

ಇಷ್ಟು ಸಂಗತಿಯನ್ನು ಮುನಿತಾಯಪ್ಪ ತನ್ನ ಮಾತುಗಳಲ್ಲಿ ವಿವರಿಸಿ ಹೇಳಿದ.

" ಮುಂದಿನ ವಿಷಯವೆಲ್ಲಾ ನಿಮಗೇ ತಿಳಿದಿದೆಯಲ್ಲಾ ಸ್ವಾಮಿ...."

" ಹ್ಞ ಹ್ಞ " – ಎಂದು ಉಳಿದವರು ತಲೆದೂಗಿದರು.

ರೋಷವನ್ನು ಕೆರಳಿಸುವಂತಿದ್ದ ಭದ್ರಯ್ಯನ ಕುಟಿಲತಂತ್ರ ಎಲ್ಲರಿಗೂ ವಿಸ್ಮಯವನ್ನುಂಟುಮಾಡಿತ್ತು. ಅದಕ್ಕಿಂತಲೂ ಹೆಚ್ಚಾಗಿ, ಅದು ಬಯಲಾದ ಬಗೆಯನ್ನರಿಯಲು ಕುತೂಹಲ....

ಸುದರ್ಶನಯ್ಯಂಗಾರ್ಯರು ಆರಂಭಿಸಿದರು—

" ಮುನಿತಾಯಪ್ಪ, ನೀನು ಸಾಮಾನ್ಯನಲ್ಲ ! ನಿನ್ನ ವಿದ್ಯೆ ದೊಡ್ಡದು!!"

" ನನ್ನಲ್ಲೇನೂ ವಿಶೇಷವಿಲ್ಲ ಸ್ವಾಮಿ....ನನ್ನ ವಿದ್ಯೆಗೂ ಅಷ್ಟು ಹೆಚ್ಚಿನ ಶಕ್ತಿ ಇಲ್ಲ "

" ಹಾಗಂದರೆ ನಂಬುವವರು ಯಾರು ? ಸಮಯಕ್ಕೆ ಬಂದು, ಗುಟ್ಟು

ತಿಳಿದುಕೊಂಡು, ಬೆಟ್ಟದಷ್ಟು ಉಪಕಾರ ಮಾಡಿದೆ "– ಎಂದ ವೆಂಕಟೇಶಯ್ಯ.

"ಅಂದಹಾಗೆ ಈ ಗುಟ್ಟು ಬಯಲಾದದ್ದು ಹೇಗೆ ಮುನಿತಾಯಪ್ಪ ?"

ಕುತೂಹಲ ತಡೆಯಲಾರದೆ ಕೇಳಿದರು ಸುದರ್ಶನಯ್ಯಂಗಾರ್ಯ್ಯರು. ಎಲ್ಲರೂ ಉತ್ತರಕ್ಕಾಗಿ ಕಿವಿನಿಮಿರಿಸಿದರು.

"ಅದು 'ಭೂತೇಶ್ವರ ಚೇಟಿಕೆ'ಯ ಪ್ರಭಾವ ಸ್ವಾಮಿ !"

"ಹಾಗಂದರೇನು ಮುನಿತಾಯಪ್ಪ ?"

"'ಭೂತೇಶ್ವರ ಚೇಟಿಕೆ' ಎನ್ನುವವಳು ಒಬ್ಬಳು ಯಕ್ಷಿಣಿ. ಆಕೆಯನ್ನು ಪ್ರಸನ್ನ ಮಾಡಿಕೊಂಡರೆ, ವರ್ತಮಾನ–ಭೂತ–ಭವಿಷ್ಯತ್ ಸಂಗತಿಗಳನ್ನೆಲ್ಲಾ ಹೇಳುತ್ತಾಳೆ. ನಾನು ಈ ಯಕ್ಷಿಣಿಯನ್ನು ಸಾಧನೆ ಮಾಡಿಕೊಂಡಿದ್ದು ಮತ್ತಿಗೆ ಹಳ್ಳಿ ಬಯಲು ಶಿವನ ಗುಡಿಯಲ್ಲಿ....!"

"ಅದಕ್ಕೇ ನಾನು ಹೇಳಿದ್ದು – ನೀನು ಸಾಮಾನ್ಯನಲ್ಲಾ ಅಂತ !"

"ಹಾಗನ್ನಬೇಡೀ ಸ್ವಾಮಿ !"

"ಯಾಕಪ್ಪಾ – ತಪ್ಪೇನು ?"

"ನಾನು ಯಾವ ವಿದ್ಯೆ ಕಲಿತಿದ್ದೇನೆ ಅಂತ ಹೀಗೆ ಹೊಗಳುತ್ತೀರಿ. ನನಗಿಂತ ಘನವಾದ ವಿದ್ಯೆ ತಿಳಿದವರು ಇದ್ದಾರೆ. ಅಂಥಾ ಹುಲಿಗಳ ಮುಂದೆ ನಾನು ಸಣ್ಣ ಇಲಿ !....ನಾನು ಗುರು ಕೊಟ್ಟ ನಾಲ್ಕು ಮಂತ್ರಗಳನ್ನು ಸಾಧನೆ ಮಾಡಿಕೊಂಡಿದ್ದೇನೆ. ಆ ನಾಲ್ಕು ಮಂತ್ರಗಳಿಂದ ನಾಲ್ಕು ಮಂದಿ ಯಕ್ಷಿಣಿಯರು ಪ್ರಸನ್ನರಾಗಿದ್ದಾರೆ. ಅವರಿಗೆಲ್ಲಾ ಒಂದೊಂದು ವಿಧವಾದ ಶಕ್ತಿಇದೆ. ಆ ಶಕ್ತಿಯೂ ಮಿತವಾಗಿಯೇ ಇದೆ. ಇಷ್ಟು ಬಿಟ್ಟರೆ, ನನ್ನಲ್ಲಿ ಇನ್ನೇನಿದೆ ಸ್ವಾಮಿ ?"

ಮುನಿತಾಯಪ್ಪನ ಮಾತು ನಿಷ್ಕಪಟವಾಗಿತ್ತು. ಪ್ರತಿ ಶಬ್ದದಲ್ಲಿಯೂ ನಯ, ವಿನಯಗಳು ತುಂಬಿ ತುಳುಕುತ್ತಿದ್ದವು.

'ವಾಮಾಚಾರಿಗಳೆಲ್ಲರೂ ಕೆಟ್ಟವರಲ್ಲ; ಮುನಿತಾಯಪ್ಪನಂತಹ ಒಳ್ಳೆಯವರೂ ಇದ್ದಾರೆ. ವಾಮಾಚಾರದಿಂದ ಕೆಟ್ಟದ್ದನ್ನು ಮಾತ್ರ ಮಾಡಬೇಕೆಂದಿಲ್ಲ; ಸದಾ ಒಳ್ಳೆಯದನ್ನೇ ಮಾಡುತ್ತಲೂ ಇರಬಹುದು' – ಎಂದು ಸುದರ್ಶನಯ್ಯಂಗಾರ್ಯರಿಗೆ ಬೋಧೆಯಾಯಿತು.

ಸಭಾಪತಿಶಾಸ್ತ್ರಿಗಳು ತಮ್ಮದೊಂದು ಸಂದೇಹವನ್ನು ಮುಂದಿಟ್ಟರು—

"ಈ 'ವಿದ್ಯೆ' ಕಲಿತವರು ಒಂದೊಂದು ಸಾರಿ ಒಬ್ಬರ ಮೇಲೊಬ್ಬರು

ಪೈಪೋಟಿಗೆ ನಿಲ್ಲುತ್ತಾರಲ್ಲಾ – ಸೋಲು ಗೆಲುವಿನ ತೀರ್ಮಾನ ಹೇಗೆ?"

"ಹೆಚ್ಚು ಶಕ್ತಿ ಸಂಪಾದಿಸಿದ್ದವರು ಗೆಲ್ಲುತ್ತಾರೆ; ಕಡಿಮೆ ಶಕ್ತಿಯವರು ಸೋಲುತ್ತಾರೆ!"

ಈ ಉತ್ತರದಿಂದ ಸಭಾಪತಿಶಾಸ್ತ್ರಿಗಳಿಗೆ ಸಮಾಧಾನವಾಗಲಿಲ್ಲ. ತಾವು ಸರಿಯಾದ ರೀತಿಯಲ್ಲಿ ಪ್ರಶ್ನೆ ಕೇಳಲಿಲ್ಲವೆಂದುಕೊಂಡರು.

"ಈಗ ನಿನ್ನ ಶಕ್ತಿ ಹೆಚ್ಚೋ – ಭದ್ರಯ್ಯನ ಶಕ್ತಿ ಹೆಚ್ಚೋ ಮುನಿತಾಯಪ್ಪ?"

ಸಂದೇಹ ಪರಿಹರಿಸುವಂತಹ ಪ್ರಶ್ನೆ ಹಾಕಿದರು ಸುದರ್ಶನಯ್ಯಂಗಾರ್ಯರು.

"ಭದ್ರಯ್ಯನ ಶಕ್ತಿಯೇ ಹೆಚ್ಚು!" ಎಂದ ಮುನಿತಾಯಪ್ಪ.

ಆ ಮಾತಿನಲ್ಲಿ ಯಾರಿಗೂ ನಂಬಿಕೆ ಬರಲಿಲ್ಲ.

"ಹಾಗಂದುಬಿಟ್ಟರೆ, ನಿನ್ನ ಶಕ್ತಿ ಕಡಿಮೆಯಾಯಿತೇನು!"

ಆ ಮಾತನ್ನು 'ನಿನ್ನ ಶಕ್ತಿ ಕಡಿಮೆಯಲ್ಲ' ಎಂಬರ್ಥದಲ್ಲಿ ಹೇಳಿದ್ದ ವೆಂಕಟೇಶಯ್ಯ.

"ಕಡಿಮೆಯೇ, ಅದರಲ್ಲೇನು ಅನುಮಾನ?" ಎಂದ ಮುನಿತಾಯಪ್ಪ.

"ಅದು ಹೇಗಪ್ಪ?" ಎಂದರು ಸುದರ್ಶನಯ್ಯಂಗಾರ್ಯರು.

"ನೋಡಿ ಸ್ವಾಮಿ, ಭದ್ರಯ್ಯ 'ಶಾಕಿನಿ'ಯನ್ನು ಪ್ರಸನ್ನ ಮಾಡಿಕೊಂಡಿದ್ದಾನೆ. 'ಶಾಕಿನಿ' ದುರ್ಗಿಯ ಪರಿಚಾರಕಿ — ಸಖಿ. ದುರ್ಗಿಯೂ ಈ ವಿದ್ಯೆಗೆ ಒಬ್ಬ ಮುಖ್ಯ ಅಧಿದೇವತೆ. ಅವಳಿಗೂ ಅಧಿಕವಾದ ಶಕ್ತಿ ಇದೆ. ಅದರಲ್ಲಿ ಅರ್ಧಕ್ಕಿಂತಲೂ ಹೆಚ್ಚಾದ ಶಕ್ತಿಯಿಂದ 'ಶಾಕಿನಿ' ಶಕ್ತಿಶಾಲಿನಿಯಾಗಿದ್ದಾಳೆ. ನನ್ನ ಯಕ್ಷಿಣಿ ದೇವತೆಗಳು ಅಷ್ಟು ಶಕ್ತಿವಂತರಲ್ಲ. ಅವರ ಶಕ್ತಿಯೆಲ್ಲಾ ತುಂಬಾ ಮಿತ. ಅವರಿಗೆಲ್ಲಾ ಒಂದೊಂದು ಮೇರೆ ಇದೆ. ಅದನ್ನು ಮೀರಿ ಹೋಗುವುದು ಅವರಿಂದ ಸಾಧ್ಯವಿಲ್ಲ. ಅಲ್ಲದೆ, ಸಾಮಾನ್ಯವಾಗಿ ಎಲ್ಲ ಯಕ್ಷಿಣೀದೇವತೆಗಳೂ ವಿಹಾರಪ್ರಿಯರು. ಸುಖಾಭಿಲಾಷಿಗಳು, ನೀತಿ — ನಿಯಮ, ಶಿಸ್ತು — ಸಂಯಮಗಳ ಅಡ್ಡಿ ಅವರಿಗಿಲ್ಲ. ಹಕ್ಕಿಗಳಂತೆ ಅವರು ಸ್ವೇಚ್ಛಾವರ್ತಿಗಳು. ಯಾರೊಡನೆಯೂ ಅವರು ಸ್ಪರ್ಧೆಗೆ ನಿಲ್ಲಲು ಬಯಸುವುದಿಲ್ಲ. ಸ್ವಲ್ಪ ಹೆಚ್ಚು ಶಕ್ತಿ ಇದ್ದವರು ಯಾರಾದರೂ ಬಂದು, ಅವರನ್ನು ಕಂಡು 'ಹೂಂ'ಕರಿಸಿದರೆ ಸಾಕು — ನನ್ನ ಯಕ್ಷಿಣೀದೇವತೆಗಳು

ಓಡಿಹೋಗುತ್ತಾರೆ!. ......ಈಗ ಹೇಳಿ ಸ್ವಾಮಿ, ಯಾರ ಶಕ್ತಿ ದೊಡ್ಡದು ?"

ಮುನಿತಾಯಪ್ಪನ ವಿವರಣೆ ಕೇಳಿ ಸಭಾಪತಿಶಾಸ್ತ್ರಿಗಳಿಗೆ ಏಕೋ ನಿರಾಸೆಯಾದಂತಾಯಿತು. ಭದ್ರಯ್ಯನನ್ನು ಬಲಿಹಾಕಲು ಸಾಧ್ಯವಾಗುವಂತಿಲ್ಲವಲ್ಲಾ ಎಂದು ಅವರಿಗೆ ಚಿಂತೆ. ಹೃದಯದಲ್ಲಿ ಆಗುತ್ತಿದ್ದ ಕಲಮಲವನ್ನು ತಡೆಯಲಾರದೆ, ಕೊನೆಗೆ ಕೇಳಿಯೇಬಿಟ್ಟರು —

" ನಮ್ಮ ಹುಡುಗಿಯ ವಿಷಯ ಏನುಮಾಡಿದೆಯಪ್ಪಾ ? "

" ನನ್ನ ಕೈಲಾದ್ದನ್ನು ಮಾಡುತ್ತೇನೆ ಸ್ವಾಮಿ "

" ರಾತ್ರಿ ಪಟ್ಟ ಪಾಡು ನೆನಸಿಕೊಂಡರೆ, ಎದೆ 'ಝಲ್' ಎನ್ನುತ್ತದಪ್ಪ "

" ಸದ್ಯಕ್ಕೆ ಅದು ತಪ್ಪಿದೆ ಅಲ್ಲವೆ ಸ್ವಾಮಿ "

" ಅಂದರೆ ? "

" ಭದ್ರಯ್ಯನ ಕೈ ಜೋರಾಗಿದೆ. ಅವನನ್ನು ಮೀರಿಸುವಂಥವರು ಯಾರಾದರೂ ಸಿಕ್ಕಬೇಕು "

" ನೀನು "

" ನನ್ನ ಶಕ್ತಿ ಪೈಪೋಟಿಗೆ ನಿಲ್ಲುವಷ್ಟು ದೊಡ್ಡದಲ್ಲ "

ಮೊದಲೇ ನಿರಾಸೆಗೊಂಡಿದ್ದ ಸಭಾಪತಿಶಾಸ್ತ್ರಿಗಳು ಈ ಮಾತು ಕೇಳಿ ಇನ್ನಷ್ಟು ಕುಗ್ಗಿದರು, ವೆಂಕಟೇಶಯ್ಯನಿಗೂ ಸುದರ್ಶನಯ್ಯಂಗಾರ್ಯರಿಗೂ ಕೂಡಾ ಬಾಯಿ ಕಟ್ಟಿದಂತಾಗಿತ್ತು.

ಸ್ವಲ್ಪಹೊತ್ತು ವಾತಾವರಣ ಮೌನವಾಗಿತ್ತು.

ತನ್ನ ಮಾತಿನಿಂದ ಎಲ್ಲರಿಗೂ ಅಸಮಾಧಾನವುಂಟಾಗಿದೆಯೆಂಬುದನ್ನು ತಿಳಿಯಲು ಮುನಿತಾಯಪ್ಪನಿಗೆ ಹೆಚ್ಚು ಹೊತ್ತು ಬೇಕಾಗಲಿಲ್ಲ.

" ಸ್ವಾಮಿ, ಒಂದು ಮಾತು........ "

" ಏನು ಹೇಳಪ್ಪ ? "

ಸಭಾಪತಿಶಾಸ್ತ್ರಿಗಳು ಕುಗ್ಗಿದ ಧ್ವನಿಯಲ್ಲಿ ಮರು ನುಡಿದರು.

" ನನ್ನ ಕೈಲಾದ್ದನ್ನು ಮಾಡುತ್ತೇನೆ ಅಂದೆನಲ್ಲಾ........ "

ಆಸೆಯ ಕಣ್ಣುಗಳಿಂದ ಎಲ್ಲರೂ ಮುನಿತಾಯಪ್ಪನನ್ನೇ ವೀಕ್ಷಿಸಿದರು.

" 'ರಕ್ಷರೇಖೆ' ಎಂಬುದನ್ನು ನೀವು ಕೇಳಿದ್ದೀರಾ ಸ್ವಾಮಿ ?"

" ಮಾಯಾ ಮೃಗವನ್ನು ಬೆನ್ನಟ್ಟಿ ಶ್ರೀರಾಮಚಂದ್ರನನ್ನು ಹುಡುಕಲು

ಹೊರಟಾಗ ಲಕ್ಷ್ಮಣನು ಪರ್ಣಶಾಲೆಯ ಮುಂದುಗಡೆ ಒಂದು ಗೆರೆಯನ್ನು ಎಳೆದು ಅದನ್ನು ದಾಟಬಾರದೆಂದು ಸೀತಾದೇವಿಗೆ ಹೇಳಿದ್ದನಲ್ಲಾ — ಆ ಗೆರೆ ತಾನೆ ? "

"ಹೌದು. ಅದು ಎಂತಹ ಸಾಮಾನ್ಯ ಸಾಧಕನಿಗೂ ದೊರಕುವ ಸಿದ್ಧಿ. ಆದರೆ ಅದನ್ನು ಅತಿಕ್ರಮಿಸಲು ಎಂತಹ ಪ್ರಬಲ ಶಕ್ತಿಯಿಂದಲೂ ಸಾಧ್ಯವಿಲ್ಲ. ಅದೇ ಈ 'ರಕ್ಷರೇಖೆ'ಯ ವಿಷಯ. ರಾವಣನಂತಹ ಪರಮ ಭಕ್ತಶಿರೋಮಣಿ — ಮಾಯಾವಿ ಸಹ ಲಕ್ಷಣನು ಎಳೆದ ಆ 'ರಕ್ಷರೇಖೆ'ಯನ್ನು ದಾಟಿಹೋಗಲಿಲ್ಲ. ಸೀತಾಮಾತೆಯೇ ಅದನ್ನು ದಾಟಿ ಹೋಗಿದ್ದರಿಂದ ಯುದ್ಧಕಾಂಡ ಸಂಭವಿಸಿತಲ್ಲವೆ? ಹಾಗೆಯೇ ನಾನೂ ಒಂದು 'ರಕ್ಷರೇಖೆ'ಯನ್ನು ಎಳೆಯುತ್ತೇನೆ. ಅದನ್ನು ದಾಟಿ ಯಾವ ದುಷ್ಟ ಶಕ್ತಿಯೂ — ಪ್ರಬಲಶಕ್ತಿಯೂ ಒಳಗೆ ಬರುವುದಿಲ್ಲ. ನಿಮ್ಮ ಹುಡುಗಿಯೇ ಅದನ್ನು — ಅಕಸ್ಮಾತ್ತಾಗಿಯಾದರೂ ಸರಿಯೆ — ದಾಟಿದರೆ, ರಾವಣನಂತೆ ಕಾದು ಕಾತರಿಸುತ್ತಿರುವ ದುಷ್ಟ ಶಕ್ತಿ ಆಕೆಯನ್ನು ಖಂಡಿತ ಬಿಡುವುದಿಲ್ಲ "

"ಸದ್ಯ ಇಷ್ಟಾದರೂ ನೀನು ಉಪಕಾರ ಮಾಡಿದರೆ ಎಷ್ಟೋ ವಾಸಿ ನಮ್ಮ ಮನೆತನದ ಮರ್ಯಾದೆ — ಎಲ್ಲಾ ಉಳಿದಹಾಗೆ. "

"ಆದರೆ, ಈಗಾಗಲೇ 'ದೂರಾಕರ್ಷಣ ಶಕ್ತಿ'ಯನ್ನು ಶಾಕಿನಿ ಬಲವಾಗಿ ಬೀಸಿದ್ದಾಳೆ. ಆದ್ದರಿಂದ ನಿನ್ನೆರಾತ್ರಿ ನಡೆದಂತಹ ಪ್ರಸಂಗ ಇನ್ನುಮೇಲೆ ಪ್ರತಿ ರಾತ್ರಿಯೂ ಒಂದುಸಾರಿ ನಡೆಯುತ್ತದೆ. ಆ ಸಮಯದಲ್ಲಿ ಆವೇಶದಿಂದ ಹೊರಗೆ ಓಡುವಂತಾಗುತ್ತದೆ ರುಕ್ಕಮ್ಮನವರಿಗೆ. ಅವರನ್ನು ಹಾಗೆಯೇ ಬಿಟ್ಟರೆ 'ರಕ್ಷರೇಖೆ'ಯನ್ನು ದಾಟಿಬಿಡುತ್ತಾರೆ. ಮುಂದೆ ತುಂಬಾ ಅನರ್ಥವಾಗುತ್ತದೆ. ಆದ್ದರಿಂದ ಆವೇಶ ಬರುವ ಸಮಯದಲ್ಲಿ ತುಂಬಾ ಎಚ್ಚರಿಕೆಯಿಂದಿರಬೇಕು. ಯಾರಾದರೂ ಬಲವಾದ ಗಂಡಸರು ಪಕ್ಕದಲ್ಲಿಯೇ ಇದ್ದು, ಹೊರಗೆ ಹೋಗಲು ಅವಕಾಶವಾಗದಂತೆ ಸೆರೆ ಹಾಕಬೇಕು. ಸುಮಾರು ಹದಿನೈದು ನಿಮಿಷಕಾಲ ತುಂಬಾ ಗೊಂದಲವಾಗಬಹುದು – ಅಷ್ಟೆ. "

"ಈ ರಾದ್ಧಾಂತ–ಕ್ರೂರವಿಧಿ ಎಷ್ಟು ದಿನ ಹೀಗೆಯೇ ಇರುತ್ತದೆಯೋ?"

"ಭದ್ರಯ್ಯನಿಗಿಂತ ಪ್ರಬಲವಾದ ಶಕ್ತಿಯುಳ್ಳವನು ಸಿಕ್ಕಿದರೆ, ನಾಳೆಯೇ ಮುಕ್ತಾಯವಾಗಬಹುದು."

" ನಿನಗೆ ಯಾರೂ ಗುರುತಿಲ್ಲವೆ ಅಂತಹವರು ?"

" ಇಲ್ಲ ಸ್ವಾಮಿ."

" ನಿನ್ನ ಗುರುಗಳು ?"

" ಅವರು ಇಲ್ಲಿಲ್ಲ...."

" ಎಲ್ಲಿದ್ದಾರೆ ?"

" ತಿರುವಣ್ಣಾಮಲೈಯಲ್ಲಿದ್ದಾರೆ "

" ಅವರನ್ನು ಕರೆದುಕೊಂಡು ಬಂದರೆ ಆಗುತ್ತದೆ ಅಲ್ಲವೆ ?"

" ಅವರೀಗ ಇಂತಹ ಕೆಲಸಗಳನ್ನೇನೂ ಮಾಡುವುದಿಲ್ಲ. ಅವಧೂತರ ಹಾಗೆ ಕಾಲಯಾಪನೆ ಮಾಡಿಕೊಂಡಿದ್ದಾರೆ "

" ಹಾಗಾದರೆ ಏನಪ್ಪ ಮಾಡುವುದು !"

—ಎಂದ ಸಭಾಪತಿಶಾಸ್ತ್ರಿಗಳು ಮತ್ತೆ ಮುಂದುವರಿಸಿದರು :

" ಭದ್ರಯ್ಯನಿಗಿಂತ ಹೆಚ್ಚು 'ವಿದ್ಯೆ' ಕಲಿತವರು ಯಾರೂ ಇಲ್ಲವೇ ಇಲ್ಲ ಅನ್ನುತ್ತೀಯಾ ಮುನಿತಾಯಪ್ಪ ? "

" ಛೆ, ಆ ಮಾತು ಹೇಳಿದರೆ ಯಾರು ನಂಬುತ್ತಾರೆ ? ಹಾಗೆ ನೋಡು ವುದಕ್ಕೆ ಹೋದರೆ, ಭದ್ರಯ್ಯ ಕಲಿತಿರುವುದು ಯಾವ ಮಹಾವಿದ್ಯೆ ? ವಾಮಾ ಚಾರದಲ್ಲಿ ' ಶಾಕಿನಿ-ವಶ ' ಕೇವಲ ಸಾಧಾರಣ – ಅಲ್ಪ ಪ್ರಯತ್ನ. ಅದನ್ನು ಕಲಿಯುವುದಕ್ಕೆ ಏನೂ ಕಷ್ಟಪಡಬೇಕಾಗಿಲ್ಲ. ಒಂದು ಕಾಳ ಮುಹೂರ್ತದ ಉಪದೇಶ–ಪೂಜೆ ; ನಲವತ್ತೆಂಟು ದಿನಗಳ ಸಾಧಾರಣ ನಿತ್ಯಪೂಜೆ – ಅಷ್ಟೆ. ಗಣಪತಿ ಔಪಾಸನೆ, ಕಾತ್ಯಾಯಿನಿ – ಚಂಡ ಕಾತ್ಯಾಯಿನಿ ಪ್ರಸನ್ನ, ಮಹಾ ಕಾಳಿ ಪ್ರಸನ್ನ–ಮೊದಲಾದ ಅನೇಕ ರೀತಿಯ ಪ್ರಬಲಶಕ್ತಿ ವಶೀಕರಣಗಳಿವೆ. ಎಲ್ಲಕ್ಕಿಂತ ದೊಡ್ಡದು 'ಶ್ರೀ ಚಕ್ರ'ಸಾಧನೆ. ಈ ಚಕ್ರ ಸಾಧಿಸಿದರೆ ಲೋಕವೇ ಅಧೀನ ! ಇದನ್ನು ಸಾಧಿಸಿದವರೇ ಈಗ ಬದುಕಿಲ್ಲವೆಂದು ನನ್ನ ಗುರುಗಳು ಹೇಳುತ್ತಿದ್ದರು. ಅನೇಕ ಜನ ಈ ಚಕ್ರಸಾಧನೆಗೆ ಪ್ರಯತ್ನಿಸಿ ನಾಶವಾಗಿ ಹೋಗಿದ್ದಾರೆ—ಇದೇ ಬೆಂಗಳೂರಿನಲ್ಲಿ !"

" ಗಣಪತಿ ಔಪಾಸನೆ ಪರವಾಗಿಲ್ಲವೇ ಮುನಿತಾಯಪ್ಪ ?"

" ಅದು ನಮ್ಮ ಸ್ಕೂಲುಗಳಲ್ಲಿ ಹನ್ನೆರಡು ರೂಪಾಯಿ ಪರೀಕ್ಷೆ (ಎಸ್. ಎಸ್. ಎಲ್. ಸಿ.) ಮಾಡುತ್ತಾರಲ್ಲಾ ಸ್ವಾಮಿ —ಅದಕ್ಕೆ ಸಮ !"

" ಹಾಗಾದರೆ ' ಶ್ರೀ ಚಕ್ರ ' ಡಿ.ಎಸ್‌ಸಿ. ಅಥವಾ ಪಿ.ಎಚ್.ಡಿ.ಗೆ

ಸಮ ಅನ್ನು !" ಸುದರ್ಶನಯ್ಯಂಗಾರ್ಯರು ನಗುತ್ತಾ ಕೇಳಿದರು.

"ಅದೆಂತಾದ್ದೋ ನಾ ಕಾಣೆ ಸ್ವಾಮಿ"

ಮುನಿತಾಯಪ್ಪನೂ ನಗುತ್ತಲೇ ಉತ್ತರಿಸಿದ.

"ಗಣಪತಿ ಔಪಾಸನೆ ಮಾಡಿದರೆ ಭದ್ರಯ್ಯನ ಹುಟ್ಟಡಗಿಸಬಹುದು ಅಂತೀಯಾ ?"

"ಓಹೋ ! ಧಾರಾಳವಾಗಿ !!"

"ನಿಮ್ಮ ಗುರುಗಳು ಎಷ್ಟರವರೆಗೂ 'ವಿದ್ಯೆ' ಕಲಿತಿದ್ದಾರಪ್ಪಾ ?"

"ಅವರೂ ಈ 'ಹನ್ನೆರಡು ರೂಪಾಯಿ ಪರೀಕ್ಷೆ' ಮಾಡಿದ್ದಾರೆ ಸ್ವಾಮಿ. ಅವರು ಹುಟ್ಟಾ ಗಣಪತಿ ಭಕ್ತರಂತೆ. ಅವರನ್ನ 'ಗಾಣಪತ್ಯರು' ಅಂತಾರೆ" ಎಂದ ಮುನಿತಾಯಪ್ಪ.

ಅಷ್ಟರಲ್ಲ ಹೊರಗೆ ಬಂದ ಶಂಕರಶಾಸ್ತ್ರಿಗಳು—

"ಏನಪ್ಪ, 'ಗಾಣಪತ್ಯ'ರು ಅಂತ – ಏನೋ ಮಾತಾಡುತ್ತಿದ್ದೀರಿ ?"

ಎಂದು ಮೆಲುನಗೆ ನಗುತ್ತಾ ಪ್ರಶ್ನಿಸಿದರು.

"ನಿಮಗೆ ತಿಳಿಯದಿದ್ದುದು ಯಾವುದಿದೆ ಸ್ವಾಮಿ ? ಚಿಕ್ಕಯ್ಯನೋರು 'ಗಣಪತಿ ಉಪಾಸನೆ' ವಿಷಯ ಕೇಳುತ್ತಿದ್ದರು. ಅದನ್ನೇ ಹೇಳುತ್ತಿದ್ದೆ"

"ಯಾಕೆ ನಿನಗೂ ಕಲೀಬೇಕೂ ಅಂತ ಆಸೆಯಾಯಿತೇನೋ ಸಭಾಪತಿ ?"

ತೀರ ಸಲಿಗೆಯಿಂದ ಮಗನನ್ನು ಕೇಳಿದ ಶಂಕರಶಾಸ್ತ್ರಿಗಳು ನಕ್ಕರು. ಉಳಿದವರೂ ಅವರೊಡನೆ ಅರೆಕ್ಷಣ ಗಂಭೀರವಾಗಿ ನಕ್ಕರು.

ತಂದೆಯ ಮಾತು ಕಿವಿಗೆ ಬಿದ್ದಾಗ – 'ಯಾಕಾಗಬಾರದು ?' ಎಂದು ಕೊಂಡಿದ್ದರು ಸಭಾಪತಿಶಾಸ್ತ್ರಿಗಳು. ತಮ್ಮ ತಂಗಿ ರುಕ್ಮಿಣಿಗೆ ಒಳ್ಳೆಯ ದಾಗುವುದಾದರೆ, ಆ ಸಮಯದಲ್ಲಿ ಎಂತಹ ವಿದ್ಯೆಯನ್ನಾದರೂ ಕಲಿಯಲು ಅವರು ಸಿದ್ಧರಾಗಿದ್ದರು.

"'ಗಣಪತಿ ಔಪಾಸನೆ' ಸುಮ್ಮನಾಗಲಿಲ್ಲಪ್ಪಾ ! ಅದಕ್ಕೂ ತುಂಬಾ ಸಾಧನೆ ಬೇಕು. 'ರುದ್ರಯಾಮಳ ತಂತ್ರ'ದಲ್ಲಿ ಈ ವಿಷಯ ಸ್ಪಷ್ಟವಾಗಿ ಹೇಳಿದ್ದಾರೆ" ಎಂದರು ಶಂಕರಶಾಸ್ತ್ರಿಗಳು.

ಸಭಾಪತಿಶಾಸ್ತ್ರಿಗಳಾಗಲೀ ಉಳಿದವರಾಗಲೀ ಮಾತನಾಡಲಿಲ್ಲ.

ಎರಡು ಕ್ಷಣಗಳ ಮೌನವಾದ ಬಳಿಕ—

"ಹತ್ತು ಗಂಟೆಯಾಗುತ್ತಾ ಬಂತು. ನಾನಿನ್ನು ಹೋಗುತ್ತೇನೆ"

ಎನ್ನುತ್ತಾ ಮುನಿತಾಯಪ್ಪ ಎದ್ದು ನಿಂತ. ಸುದರ್ಶನಯ್ಯಂಗಾರ್ಯರೂ ಹೊರಡಲುವಾದರು.

"ಐಂಗಾರ್ಯರೂ ಆಫೀಸಿಗೆ ಹೋಗಬೇಕೇನೋ........?"

ಅದು ಶಂಕರಶಾಸ್ತ್ರಿಗಳ ಪ್ರಶ್ನೆ.

"ಹೌದು ಸ್ವಾಮಿ" ಎಂದರು ಸುದರ್ಶನಯ್ಯಂಗಾರ್ಯರು.

ಸಭಾಪತಿಶಾಸ್ತ್ರಿಗಳೂ ವೆಂಕಟೇಶಯ್ಯನೂ ಸ್ವಲ್ಪ ದೂರ ಹಿಂಬಾಲಿಸಿ, ಗೆಳೆಯರನ್ನು ಬೀಳ್ಕೊಟ್ಟರು.

ಕೊನೆ ಗಳಿಗೆಯಲ್ಲಿ ಮುನಿತಾಯಪ್ಪ—

"ಸ್ವಾಮಿ ವೆಂಕಟೇಶಯ್ಯನೋರೆ, ಅಕಸ್ಮಾತ್ ಭದ್ರಯ್ಯ ಸಿಕ್ಕಿದರೆ, 'ಅಮ್ಮಾವ್ರಿಗೆ ಹ್ಯಾಗಿದೆ?' ಅಂತ ಕೇಳುತ್ತಾನೆ. 'ಅವರು ಹೋಗಿಬಿಟ್ಟರು. ಮಕ್ಕಳನ್ನೂ ತೌರುಮನೆಯಲ್ಲೇ ಬಿಟ್ಟದ್ದೇನೆ. ಇಲ್ಲಿ ನಾನೊಬ್ಬನೇ ಇರೋದು. ಅಲ್ಲಿ – ಇಲ್ಲಿ ಹ್ಯಾಗೋ ಕಾಲಯಾಪನೆ ಮಾಡುತ್ತೀದ್ದೀನಪ್ಪಾ' ಅಂತ ಹೇಳಿ ಬಿಡಿ. ನರಸಮ್ಮ ಬದುಕಿದ್ದಾರೆ ಅಂತ ಅವನಿಗೆ ಗೊತ್ತಾದರೆ, ಮತ್ತೆ ಇಲ್ಲದ ರಾದ್ಧಾಂತ ಪ್ರಾರಂಭವಾಗುತ್ತದೆ. ಪರಿಸ್ಥಿತಿ ತುಂಬಾ ಕಷ್ಟಕ್ಕಿಟ್ಟು ಕೊಳ್ಳುತ್ತದೆ." ಎಂದು ಎಚ್ಚರಿಸಿದ.

"ಆಗಲಿ" ಎಂದರು ವೆಂಕಟೇಶಯ್ಯ.

ಸಭಾಪತಿಶಾಸ್ತ್ರಿಗಳಿಗೆ ಮನಸ್ಸು ನೆಮ್ಮದಿಯೇ ಇರಲಿಲ್ಲ. ಅವರು 'ಗಣಪತಿ ಔಪಾಸನೆ'ಯನ್ನೇ ಕುರಿತು ದೀರ್ಘವಾಗಿ ಚಿಂತಿಸುತ್ತಿದ್ದರು. ಹಿಂದಿನ ರಾತ್ರಿ ತಂದೆಯ ಮೇಲೆ ಪರಶಿವನ ಆವೇಶವಾಗಿದ್ದಾಗ – 'ಸಭಾಪತಿ, ಇನ್ನುಮೇಲೆ ನೀನು ನನ್ನ ಮಗ.....ನನ್ನ ಹಿರಿಯ ಪುತ್ರ.....ಗಣಪತಿ.....ಗಣ ಪತಿ....' ಎಂದು ಹೇಳಿದದನ್ನು ನೆನದಾಗಲಂತೂ, ತಾನು ಗಣಪತಿ ಔಪಾಸನೆ ಯನ್ನು ಕಲಿಯಲು ಅಡ್ಡಿಯೇ ಇಲ್ಲವೆಂಬುದು ಅವರ ತೀರ್ಮಾನ. ಆದರೆ ಪರಮ ವೈದಿಕರಾದ ತಂದೆ 'ಇದಕ್ಕೆ ಒಪ್ಪುವರೇ?' ಎಂಬುದು ಅನುಮಾನಾ ಸ್ಪದ. 'ಗಣಪತಿ ಔಪಾಸನೆ'ಯನ್ನು ಕಲಿಯದೆ ಇದ್ದರೆ ಭದ್ರಯ್ಯನನ್ನು ಮಟ್ಟಹಾಕುವುದು ಹೇಗೆ? ತಂಗಿ ರುಕ್ಮಿಣಿಗೆ ಒದಗಿರುವ ದುರವಸ್ಥೆಯನ್ನು ತಪ್ಪಿಸುವುದು ಹೇಗೆ?

'ಹೇಗೆ? ಹೇಗೆ? ಹೇಗೆ?'

ಪ್ರಶ್ನೆ ಮೊರೆಯಿತು ಶಾಸ್ತ್ರಿಗಳ ಅಂತರಂಗದಲ್ಲಿ.

ಆ ರಾತ್ರಿ, ಸುಮಾರು ಹನ್ನೊಂದು ಗಂಟೆಯ ವೇಳೆಗೆ, ಹಿಂದಿನ ರಾತ್ರಿಯಂತೆಯೇ ರುಕ್ಮಿಣಿಯ ಮೇಲೆ ಆವೇಶ ಬಂದಿತು. ಸುಮಾರು ಹದಿನೈದು ನಿಮಿಷಗಳ ಗದ್ದಲ. ವಿಶ್ವಸಾಹಸದಿಂದ ಅವಳನ್ನು ಕೊಠಡಿಯಲ್ಲಿ ಕೂಡಿದರು ಶಾಸ್ತ್ರಿಗಳು.

ಅವರ ಚಿಂತೆ ಆ ರಾತ್ರಿ ಇನ್ನಷ್ಟು ಬಲವಾಯಿತು. ಸನಿಯದಲ್ಲೇ ಮಲಗಿದ್ದ ಸೌಭಾಗ್ಯಮ್ಮ ಗಂಡನ ಅನ್ಯಮನಸ್ಕತೆಯನ್ನು ಬೇಗನೆ ಗುರುತಿಸಿಕೊಂಡರು. ಅವರೇಕೆ ಹಾಗೆ ಕೊರಗುತ್ತಿದ್ದಾರೆಂಬುದನ್ನೂ ಆಕೆ ಊಹಿಸಿದರು. ಆದರೆ ಗಂಡನ ಬಾಯಿಂದಲೇ ವಿವರ ದೊರೆತರೆ........

"ಇನ್ನೂ ನಿದ್ದೆ ಮಾಡದೆ, ಏನು ಯೋಚನೆ ಮಾಡುತ್ತಿದ್ದೀರೀ ಅಂದ್ರೆ"

ಶಾಸ್ತ್ರಿಗಳು ಪತ್ನಿಯ ಕಡೆಗೆ ಹೊರಳಿ, ಆಕೆಯ ಮುಖವನ್ನು ಆ ಕತ್ತಲೆಯಲ್ಲಿಯೇ ನೋಡಿದರು. ಆದರೆ ಮಾತನಾಡಲಿಲ್ಲ.

ಸೌಭಾಗ್ಯಮ್ಮ ಗಂಡನ ಹಣೆಯ ಮೇಲೆ ಕೋಮಲವಾಗಿ ಕೈಯಾಡಿಸುತ್ತಾ-

"ಸುಮ್ಮನೆ ಹೀಗೆ ಕೊರಗುತ್ತಾ ನಿದ್ರೆ ಕೆಟ್ಟರೆ ನೈಗಾಗುತ್ತದೆಯೇ ?"

ಎಂದು ಕೇಳಿದರು.

"ನಮ್ಮ ಸಂಸಾರಕ್ಕೆ ಎಂಥಾ ಗ್ರಹಚಾರ ಬಂತು ಅಂತ ಯೋಚನೆ ಮಾಡುತ್ತಾ ಇದ್ದೀನಿ ಸೌಭಾಗ್ಯ"

"ಕಷ್ಟ ಕೊಡುವವನೂ ದೇವರು–ಪರಿಹಾರ ಮಾಡುವವನೂ ದೇವರು. ಅದಕ್ಕೇಕೆ ಕೊರಗಾಟ ?"

"ನಿಜ ಸೌಭಾಗ್ಯ ನಿನ್ನ ಮಾತು"

"ಮತ್ತೇಕೆ ಚಿಂತೆ ?"

"ಎಲ್ಲಕ್ಕೂ ಒಂದು ನಿಮಿತ್ತ ಬೇಕಲ್ಲವೆ ?"

"ಅಂದರೆ ?"

"ನಮಗೆ ಕಷ್ಟಕೊಡುವುದಕ್ಕೆ ಭದ್ರಯ್ಯ ನಿಮಿತ್ತನಾಗಿದ್ದಾನೆ...."

"ಅದರ ಪರಿಹಾರಕ್ಕೆ ಯಾರು ನಿಮಿತ್ತರಾಗಿದ್ದಾರೋ ಅಂತ ಯೋಚಿಸುತ್ತೀರಾ ?"

"ಯೋಚಿಸಿ ಒಂದು ತೀರ್ಮಾನಕ್ಕೆ ಬಂದು ಬಿಟ್ಟಿದ್ದೇನೆ. ಆ ವ್ಯಕ್ತಿ

ಯಾರು ಎಂಬುದೂ ನನಗೆ ತಿಳಿದು ಹೋಗಿದೆ!"

"ಯಾರು?"

"ನಾನೇ ಸೌಭಾಗ್ಯ! ನಾನೇ!!"

ಪತಿದೇವನ ಮಾತು ಕೇಳಿ, ಬೆಚ್ಚಿದವಳಂತೆ ತಟ್ಟನೆ ಎದ್ದು ಕುಳಿತರು ಸೌಭಾಗ್ಯಮ್ಮ.

"ಯಾಕೆ ಸೌಭಾಗ್ಯ, ಗಾಬರಿಯಾದೆ?"

"…………………"

"ಆ ವಾಮಾಚಾರಿಯನ್ನು ಎದುರಿಸುವುದಕ್ಕೆ, ಈ ವೈದಿಕರ ಮನೆಯ ಹದಿನಾರಾಣೆ ಸದಾಚಾರಿ ಹೋಗುತ್ತಾನೆಯೇ? – ಎಂದು ಆಶ್ಚರ್ಯಪಡುವೆಯಾ?"

"ಅವನು ಮಹಾಕೆಟ್ಟವನಂತೆ. ಅಂಥಾವನ ಮೇಲೆ ಪೈಪೋಟಿಗೆ ನಿಲ್ಲುವುದು ಸಾಧ್ಯವೇ?"

"ಈ ಲೋಕದಲ್ಲಿ ಯಾವುದು ಅಸಾಧ್ಯ ಸೌಭಾಗ್ಯ? ಮನಸ್ಸು ಮಾಡಿದರೆ ಏನು ಬೇಕಾದರೂ ಸಾಧಿಸಬಹುದು!"

"ನನಗ್ಯಾಕೋ ಭಯವಾಗುತ್ತದೆ ಅಂದ್ರೆ."

"ಭಯವೇಕೆ ಸೌಭಾಗ್ಯ? ಪರಶಿವನು ಅಷ್ಟು ಸುಲಭವಾಗಿ ನಮ್ಮ ಕೈಬಿಟ್ಟು ಬಿಡುತ್ತಾನೆಯೇನು? ನಿನ್ನೆ ರಾತ್ರಿ ಅಪ್ಪ ಹೇಳಿದ್ದು ನಿನಗೆ ಜ್ಞಾಪಕ ಇಲ್ಲವೇ?– 'ನೀನು ನನ್ನ ಮಗ – ಗಣಪತಿ' ಅಂತ. ದೇವರಿಗೆ ನನ್ನನ್ನು ಕಂಡರೆ ಎಷ್ಟೊಂದು ಪ್ರೀತಿ ನೋಡಿದೆಯಾ?"

"ನಿಮ್ಮಂತಹವರನ್ನು ಕಂಡರೆ ಯಾರಿಗೆ ಪ್ರೀತಿ ಇಲ್ಲ?"

"ಹಾಗಾದರೆ ನಿನಗೂ ಪ್ರೀತಿಯೇ ತಾನೆ?"

"ಉಹ್ಞು....ಅದಕ್ಕಿಂತ ಹೆಚ್ಚು!"

ಪ್ರೇಮಾತಿಶಯದಿಂದ ಸೌಭಾಗ್ಯಮ್ಮನವರು ನುಡಿದಾಗ, ಹಿಗ್ಗಿದ ಶಾಸ್ತ್ರಿಗಳು ಪತ್ನಿಯ ಕೆನ್ನೆ ಚಿವುಟಿ ಕೆಂಪೇರಿಸಿದರು. ಸತಿ ಪತಿಯರ ಸರಸ-ಸಲ್ಲಾಪ ನಿದ್ರೆಯ ಮಡಿಲಲ್ಲಿ ಮುಕ್ತಾಯವಾಯಿತು.

ಮರುದಿನ ಸಭಾಪತಿಶಾಸ್ತ್ರಿಗಳು ತುಂಬಾ ಗೆಲುವಾಗಿದ್ದರು. ಆದರೆ ಅವರು ನಿರ್ಧರಿಸಿದ್ದ – ಗಣಪತಿ ಉಪಾಸನೆ ಕಲಿಯುವ ಸಂಗತಿಯನ್ನು ಯಾರಿಗೂ ಹೇಳಲು ಅವರು ಸಿದ್ಧರಾಗಿರಲಿಲ್ಲ. ಅಂತೂ ಭದ್ರಯ್ಯನನ್ನು

ಮುಟ್ಟಿಹಾಕಲು ತಾನೇ ಬದ್ಧಕಂಕಣನಾಗಿ ನಿಲ್ಲುತ್ತೇನಲ್ಲ ಎಂಬುದು ಅವರಿಗೆ ಹೆಮ್ಮೆ.

ಬೆಳಗಿನ ಉಪಾಹಾರ ಮುಗಿದ ಬಳಿಕ ಶಾಸ್ತ್ರಿಗಳು—

" ವೆಂಕಟೇಶಾ, ಇವತ್ತು ನನಗೆ ತುಂಬಾ ಸಂತೋಷವಾಗಿದೆ "

ಎಂದು ಹಿಗ್ಗಿನಿಂದ ನುಡಿದರು.

" ಅದೇನಣ್ಣ ಅಂಥಾದ್ದು ?"

" ಯಾಕೇ ಅಂತ ಹೇಳಲಿ ! ನನಗೇ ಸರಿಯಾಗಿ ಗೊತ್ತಿಲ್ಲ ನೋಡು !!"

ಅಣ್ಣನ ಮಾತು ವೆಂಕಟೇಶಯ್ಯನಿಗೆ ಅರ್ಥವಾಗಲಿಲ್ಲ.

ಇಬ್ಬರೂ ತುಸುಹೊತ್ತು ಮೌನವಾಗಿದ್ದರು. ಅನಂತರ ವೆಂಕಟೇಶಯ್ಯ ಒಳಗೆ ಹೋಗಿ, ಪಂಚಾಂಗವನ್ನು ತಂದು ಶಾಸ್ತ್ರಿಗಳ ಕೈಗೆ ಕೊಡುತ್ತಾ—

" ಒಂದು ಒಳ್ಳೇದಿನ ಗೊತ್ತು ಮಾಡಣ್ಣ " ಎಂದನು.

ಶಾಸ್ತ್ರಿಗಳಿಗೂ ಒಂದು ಒಳ್ಳೆಯದಿನ ಬೇಕಿತ್ತು !

" ನನಗೋ – ನಿನಗೋ ?"

" ಎಲ್ಲರಿಗೂ ಒಳ್ಳೆಯದಾಗಿರುವ ದಿನವನ್ನೇ ನೋಡು "

ನಗುತ್ತಾ ವೆಂಕಟೇಶಯ್ಯ ಬುದ್ಧಿವಂತಿಕೆಯಿಂದ ನುಡಿದ.

ಶಾಸ್ತ್ರಿಗಳು ಪಂಚಾಂಗದ ಪುಟಗಳನ್ನು ತಿರುಗಿಸಿ ನೋಡಿದರು.

" ಇವತ್ತು-ನಾಳೆ ಎರಡೂ ಶುಭ ದಿನಗಳೇ ವೆಂಕಟೇಶ. ನಾಳೆಗಿಂತ ಇವತ್ತೇ ತುಂಬಾ ಪ್ರಶಸ್ತವಾಗಿದೆ !"

" ಹಾಗಾದರೆ, ನನಗೆ ಇನ್ನೂ ಒಳ್ಳೆಯದೇ ಆಯಿತು !"

" ಯಾವ ಕೆಲಸ ಆರಂಭಿಸುತ್ತೀಯಪ್ಪಾ ?"

ಈ ಪ್ರಶ್ನೆಗೆ ಕೂಡಲೇ ಉತ್ತರಿಸುವುದು ವೆಂಕಟೇಶಯ್ಯನಿಗೆ ಸ್ವಲ್ಪ ಕಷ್ಟವಾಗಿತ್ತು.

" ಯಾಕೆ ಅನುಮಾನಿಸುತ್ತೀ ? ಹೇಳು—ಹೇಳು "

ಎಂದು ಶಾಸ್ತ್ರಿಗಳು ಪುಸಲಾಯಿಸಿದರು.

" ಸ್ವಿಮ್ಮಿಂಗ್ ಪೂಲ್ ಎಕ್ಸ್‌ಟೆನ್‌ಷನ್‌ನಲ್ಲಿ ಒಂದು ಮನೆ ಗೊತ್ತು ಮಾಡಿಕೊಂಡು ಬಂದಿದ್ದೇನಣ್ಣ. ಬಾಡಿಗೆಯೂ ಕಡಿಮೆ. ಮಾಲೀಕರು ಒಳ್ಳೆಯವರ ಹಾಗೆ ಕಾಣುತ್ತಾರೆ. ಇವತ್ತೇ ಅಲ್ಲಿಗೆ ಹೊರಡು ಬಿಡೋಣ ಅಂತ ನಿಶ್ಚಯಿಸಿದ್ದೀನಿ "

ಅಷ್ಟರಲ್ಲಿ ಅಲ್ಲಿಗೆ ಬಂದ ಕಮಲಮ್ಮನವರಿಗೂ ಆ ಕೊನೆಯ ವಾಕ್ಯ ಕಿವಿಗೆ ಬಿತ್ತು.

"ಎಲ್ಲಿಗೆ ಪ್ರಯಾಣ ಸಿಶ್ಚಯಿಸುತ್ತಿದ್ದೀಯೋ ವೆಂಕಟೇಶೂ ?"

ಸಭಾಪತಿಶಾಸ್ತ್ರಿಗಳೇ ವಿಷಯವನ್ನು ತಾಯಿಗೆ ತಿಳಿಸಿದರು.

"ಐದಾರು ದಿನಕ್ಕೇ ಬೇಜಾರಾಗಿ ಹೋಯಿತೇನಪ್ಪ ಈ ಮನೆ ?"

"ಬೇಜಾರಿಲ್ಲ ಚಿಕ್ಕಮ್ಮ. ಎಷ್ಟು ದಿನ ನಿಮಗೆ ಹೀಗೆಯೇ ತೊಂದರೆ ಕೊಡಲಿ ?"

"ತೊಂದರೆಯೂ ಇಲ್ಲ – ಏನೂ ಇಲ್ಲ. ನರಸು ಈಗ ತಾನೆ ಹಾಸಿಗೆ ಬಿಟ್ಟಿದ್ದಿದ್ದಾಳೆ. ಅವಳ ಮೈಗೆ ಒಂದಿಷ್ಟು ತ್ರಾಣ ಬರಬೇಡವೆ? ಮಕ್ಕಳು ಮರೀನ ನಿಭಾಯಿಸಿಕೊಂಡು ಮನೆಕೆಲಸ ಮಾಡುವುದು ಸುಮ್ಮನೆ ಆಯಿತೆ ? ಇನ್ನೂ ಎಂಟು ದಿನ ಸುಧಾರಿಸಿಕೊಳ್ಳಲಿ. ಆಮೇಲೆ ಬೇಕಾದಹಾಗೆ ಮಾಡು"

"ಬೇಡ ಚಿಕ್ಕಮ್ಮ! ಮನೇಗೆ ಅಡ್ವಾನ್ಸ್ ಕೊಟ್ಟುಬಿಟ್ಟಿದ್ದೀನಿ. ಹೋಗಲೇಬೇಕು"

ಎಂದು ವೆಂಕಟೇಶಯ್ಯ ಸಿರ್ಧಾರದ ಧ್ವನಿಯಲ್ಲಿ ನುಡಿದಾಗ ಕಮಲಮ್ಮನವರು ಸುಮ್ಮನಾಗಬೇಕಾಯಿತು.

"ನಿನ್ನಿಷ್ಟಪ್ಪ........"

ಎನ್ನುತ್ತಾ ಅವರು ಬೇಸರದಿಂದ ಒಳಗೆ ಹೊರಟುಹೋದರು.

ತಾಯಿ ಹೇಳಿದ ಮಾತುಗಳನ್ನೇ ಸಭಾಪತಿಶಾಸ್ತ್ರಿಗಳೂ ಹೇಳಿ ನೋಡಿದರು. ಆದರೆ ವೆಂಕಟೇಶಯ್ಯ ತನ್ನ ಸಿರ್ಧಾರವನ್ನು ಬದಲಿಸಲಿಲ್ಲ.

ಸಂಜೆ ಐದು ಗಂಟೆಗೆ ಮನೆಯ ಮುಂದೆ ಜಟಕಾ ಬಂದು ನಿಂತಿತು. ನರಸಮ್ಮ ಹೊರಡಲು ಸಿದ್ಧವಾದಳು. ಸೌಭಾಗ್ಯಮ್ಮ ಅಂಗಳದಲ್ಲಿ ಮಣೆ ಹಾಕಿ, ನರಸಮ್ಮನನ್ನು ಕೂಡಿಸಿ, ಅವಳ ಹಣೆಗೆ ಕುಂಕುಮವಿಟ್ಟು, ಫಲ ತಾಂಬೂಲ ಕೊಟ್ಟರು. ಅದರ ಜತೆಗೆ ಒಂದು ರವಿಕೆ ಕಣ, ಐದು ಬೆಳ್ಳಿಯ ರೂಪಾಯಿಗಳೂ ಇದ್ದವು.

"ನರಸಾ, ಇನ್ನೂ ನಾಲ್ಕು ದಿನ ನೀನು ಇಲ್ಲೇ ಇದ್ದಿದ್ದರೆ ಚೆನ್ನಾಗಿತ್ತು. ಕಾಯಿಲೆಯಿಂದ ಈಗತಾನೆ ಎದ್ದಿದ್ದೀಯೆ. ಮನೆಯಲ್ಲಿ ಒಂಟಿ ಹೆಣ್ಣು. ಗಾಣದ ಎತ್ತಿನಂತೆ ಎಲ್ಲಕ್ಕೂ ನೀನೇ ದುಡಿಯಬೇಕು. ಮತ್ತೆ ಹೆಚ್ಚು ಕಮ್ಮಿಯಾದರೆ ಕಷ್ಟ."

" ಇಲ್ಲಕ್ಕ. ' ಅವರು ' ಹೇಳಿದ ಹಾಗೆ ನಾನು ಹೋಗುವುದೇ ಸರಿ. ಇಲ್ಲದಿದ್ದರೆ ಮನಸ್ಸು ಕೆಡಸಿಕೊಂಡುಬಿಡುತ್ತಾರೆ "

" ನಿಜಾಮ್ಮ. ಗಂಡನ ಮನಸ್ಸಿನ ಹಾಗೆಯೇ ನಡೆದುಕೋಬೇಕು. ಅಂಥಾವಳೇ ಪತಿವ್ರತೆ "

" ಅಕ್ಕಾ, ನೀನು ಈ ಮನೆಗೆ ಸೌಭಾಗ್ಯಲಕ್ಷ್ಮಿ. ನಿನ್ನ ದೊಡ್ಡ ಮನಸ್ಸು ನನ್ನಂತಹವಳಿಗೆ ಏಳೇಳು ಜನ್ಮ ತಪಸ್ಸು ಮಾಡಿದರೂ ಬರುವುದಿಲ್ಲ. ನೀನು ಮಾಡಿದ ಉಪಚಾರ, ತೋರಿಸಿದ ಪ್ರೀತಿ, ನನ್ನ ಮಕ್ಕಳನ್ನು ನಿನ್ನ ಮಕ್ಕಳೂ ಅಂತಲೇ ತಿಳಿದುಕೊಂಡು ಮಾಡಿದ ಆರೈಕೆ – ನಾನು ಈ ಜನ್ಮದಲ್ಲಿ ಮರೆಯುವುದಿಲ್ಲ ಅಕ್ಕಾ "

ನರಸಮ್ಮನ ಕಣ್ಣು ತುಂಬಿ ಹನಿ ತೊಟ್ಟಿಟ್ಟಿತು.

" ಇದೆಲ್ಲಾ ಯಾವ ಮಹಾದೊಡ್ಡದು ನರಸಾ "

ಎನ್ನುತ್ತಾ ಸೌಭಾಗ್ಯಮ್ಮ ತಮ್ಮ ಸೆರಗಿನ ತುದಿಯಿಂದ ನರಸಮ್ಮನ ಕಣ್ಣೊರಸಿ, ಅವಳ ಬೆನ್ನು ನೇವರಿಸಿದರು.

ವೆಂಕಟೇಶಯ್ಯ ಅವಸರಿಸಿದ—ಹೊತ್ತಾಯಿತೆಂದು.

ನರಸಮ್ಮ ಕಮಲಮ್ಮನವರ ಕಾಲಿಗೆರಗಿ—

" ಅತ್ತೆಮ್ಮ , ನಿಮ್ಮ ಪ್ರೀತಿಯ ಋಣ ನಾನು ತೀರಿಸಲಾರೆ "

ಎಂದು ವಿನಯದಿಂದ ನುಡಿದಳು.

" ಹುಚ್ಚು ಹುಡುಗಿ ! ನಿನ್ನ ಚಿನ್ನದಂಥಾ ಗುಣದ ಮುಂದೆ ಋಣ ಎಂಥಾದ್ದೆ ?" ಎಂದು ಮೆಲುನಗೆ ಸೂಸುತ್ತಾ ನುಡಿದರು ಕಮಲಮ್ಮ.

" ಪ್ರಾಣದಾನ ಮಾಡಿಸಿ, ಪುನರ್ಜನ್ಮವನ್ನೇ ಕೊಡಿಸಿದಿರಿ "

" ಅದು ಮನುಷ್ಯರ ಕೆಲಸವಲ್ಲಮ್ಮ – ದೇವರ ಕೆಲಸ "

ಎನ್ನುತ್ತಾ ಕಮಲಮ್ಮನವರು ಪೂಜಾಮಂದಿರದ ಕಡೆಗೆ ನೋಡಿ, ಕೈ ಮುಗಿದರು.

" ನಾನು ಹೋಗಿ ಬರುತ್ತೀನಿ ಅತ್ತೆಮ್ಮ– ಅಕ್ಕ ರುಕ್ಕು. ನಾಡಿದ್ದು 'ಅವರ'ನ್ನು ಕಳುಸುತ್ತೀನಿ. ನೀವೆಲ್ಲಾ ಖಂಡಿತ ಹೊಸಮನೆಗೆ ಬಂದೇ ಬರಬೇಕು."

ಎನ್ನುತ್ತಾ ನರಸಮ್ಮ ಮಕ್ಕಳೊಡನೆ ಗಾಡಿ ಹತ್ತಿದಳು. ಸಭಾಪತಿಶಾಸ್ತ್ರಿಗಳಿಗೂ ಶಂಕರಶಾಸ್ತ್ರಿಗಳಿಗೂ ಹೇಳಿ ವೆಂಕಟೇಶಯ್ಯನೂ ಗಾಡಿಯಲ್ಲಿ ಕುಳಿತ.

ಗಾಡಿಯ ಕಡೆಗೇ ನೋಡುತ್ತಿದ್ದ ಪುಟ್ಟ ಗಣಪತಿಯನ್ನು ಕಂಡ ಸೌಭಾಗ್ಯಮ್ಮ—

" ಜೊತೆಗಾರರೆಲ್ಲಾ ಹೊರಟುಹೋದರೂ ಅಂತ ನೋಡುತ್ತಿದ್ದಿಯಾ ಗಣೂ ?" ಎನ್ನುತ್ತಾ, ಅವನ ಕೆನ್ನೆಗೆ ಮುತ್ತಿಟ್ಟು ಒಳಕ್ಕೆ ಕರೆದುಕೊಂಡು ಹೋದರು. ಐದಾರು ದಿನಗಳಿಂದ ಜನಸಂದಣಿಯಿಂದಾಗಿ ಸ್ವಲ್ಪ ಮಟ್ಟಿಗೆ ತುಂಬಿದಂತಿದ್ದ ಮನೆ ಆಗ ಬರಿದಾಗಿದ್ದುದನ್ನು ಕಂಡು ಸೌಭಾಗ್ಯಮ್ಮನವರಿಗೂ ಬೇಸರವೇ ಆಯಿತು.

ಒಳಗೆ ಬಂದ ಶಾಸ್ತ್ರಿಗಳು, ಹೆಂಡತಿಯನ್ನು ಕರೆದು—

" ಇವತ್ತು ಸಾಯಂಕಾಲ ಕಾಫಿ ಕುಡಿದಿದ್ದು ಕುಡಿದ ಹಾಗೆಯೇ ಇಲ್ಲ"

ಎಂದರು. ಸೌಭಾಗ್ಯಮ್ಮನವರಿಗೆ ಅರ್ಥವಾಯಿತು.

" ಇನ್ನೂ ಒಂದು ಕಪ್ಪು ಜಾಸ್ತಿಯಾಗಿಯೇ ಮಾಡು. ಸುದರ್ಶನನೂ ಬಂದರೆ ಬರಬಹುದು"

ಎಂದು ಶಾಸ್ತ್ರಿ ಮಾತು ಮುಗಿಸುವ ವೇಳೆಗೆ ಸುದರ್ಶನಯ್ಯಂಗಾರ್ಯರು ಬಂದೇ ಬಿಟ್ಟರು.

" ಬಾ ಸುದರ್ಶನಾ.....ಬಾ.....ಈಗ ನೀನು ಬರದಿದ್ದರೆ ನಾನೇ ನಿಮ್ಮ ಮನೆಯ ಹತ್ತಿರ ಬರುತ್ತಿದ್ದೆ."

ಎನ್ನುತ್ತಾ ಶಾಸ್ತ್ರಿಗಳು ಮಿತ್ರನನ್ನು ಕರೆದುಕೊಂಡು ಕೋಣೆಗೆ ಬಂದು, ಬಾಗಿಲು ಮುಚ್ಚಿ ಕುಳಿತರು.

" ಏನಪ್ಪಾ ಸಮಾಚಾರ ?"

ಸುದರ್ಶನಯ್ಯಂಗಾರ್ಯರು ಮಾತು ಆರಂಭಿಸಿದ ಬಳಿಕ, ಸಭಾಪತಿಶಾಸ್ತ್ರಿಗಳು ತಾವು 'ಗಣಪತಿ ಔಪಾಸನೆ'ಯನ್ನು ಕಲಿಯಬೇಕೆಂದು ನಿಶ್ಚಯಿಸಿರುವ ಸಂಗತಿಯನ್ನು ಪೀಠಿಕೆಯಲ್ಲಿ ತಿಳಿಸಿದರು. ಅವರ ಶೀಘ್ರ ನಿರ್ಧಾರವನ್ನು ಕಂಡು ಸುದರ್ಶನಯ್ಯಂಗಾರ್ಯರಿಗೆ ಆಶ್ಚರ್ಯವಾಯಿತು.

" ಸರಿಯಾಗಿ ಯೋಚನೆ ಮಾಡಿದ್ದೀಯಾ ಸಭಾಪತಿ ?"

" ನಿಜವಾಗಿಯೂ ತೀರ್ಮಾನ ಮಾಡಿಬಿಟ್ಟಿದ್ದೇನೆ ಸುದರ್ಶನ. ಇನ್ನೂ ನಿನಗೆ ಅನುಮಾನವೇ ?"

ಐಯ್ಯಂಗಾರ್ಯರು ಮೌನವಾದರು.

ರುಕ್ಮಿಣಿ ಕಾಫಿಯ ಬಟ್ಟಲುಗಳೊಡನೆ ಒಳಗೆ ಬಂದಳು.

" ನಮ್ಮ ರುಕ್ಮಿಣಿಯ ಗ್ರಹಚಾರ ಬೇಗ ಪರಿಹಾರವಾಗಿ, ಅವಳೂ ಎಲ್ಲರಂತೆಯೇ ಇರುವುದಕ್ಕೆ ನಾನು ಏನು ಬೇಕಾದರೂ ಮಾಡುತ್ತೇನೆ ಸುದರ್ಶನ "

ರುಕ್ಮಿಣಿಯ ಕಡೆಗೆ ತರುಣಾರ್ದ್ರವ ದೃಷ್ಟಿಯನ್ನು ಬೀರಿದ ಸುದರ್ಶನಯ್ಯಂಗಾರ್ಯರು—"ನಿನ್ನ ಹೃದಯದಲ್ಲಿ ಎಷ್ಟೊಂದು ಪ್ರೀತಿ, ಕರುಣೆ, ಅನುಕಂಪ ತುಂಬಿಕೊಂಡಿದ್ದೀಯಾ ಸಭಾಪತಿ ! "

ಎಂದು ಮೆಚ್ಚುಗೆ ಸೂಚಿಸಿದರು. ಅವರ ದನಿಯಲ್ಲಿ ಕೋಮಲವಾದ ಗದ್ಗತೆಯಿದ್ದುದು ಶಾಸ್ತ್ರಿಗಳಿಗೆ ಅರಿವಾಗದಿರಲಿಲ್ಲ.

ಮಿತ್ರರಿಬ್ಬರೂ ಕಾಫಿ ಕುಡಿದು ಮುಗಿಸಿ, ಮನೆಯಿಂದ ಹೊರಹೊರಟು ತಮ್ಮ ನಿತ್ಯದ ಆರಾಮಧಾಮವಾದ ಗಣೇಶನ ಗುಡಿಯ ಬಯಲಿಗೆ ಬಂದು ಕುಳಿತರು.

" ಸರಿ, ಗುರುಗಳು-ಯಾರನ್ನು ಹುಡುಕಿದ್ದೀಯಾ ? "

" ಇಂಥವರನ್ನೇ ಎಂದು ಇನ್ನೂ ನಿಶ್ಚಯ ಮಾಡಿಲ್ಲ. ಮುನಿತಾಯಪ್ಪನನ್ನು ಹಿಡಿದು, ಅವನ ಗುರುಗಳ ಪರಿಚಯ ಮಾಡಿಕೊಳ್ಳೋಣವೆಂದಿದ್ದೇನೆ."

" ಅವನ ಗುರುಗಳು ತಿರುವಣ್ಣಾಮಲೈಯಲ್ಲಿ ಇದ್ದಾರಂತೆ. "

" ಹೌದು "

" ನೀನೂ ಅಲ್ಲಿಗೇ ಹೋಗಬೇಕಾಗುತ್ತದೆ "

" ಹೋದರಾಯಿತು. ಕಲಿಯುವುದೇ ನಿಶ್ಚಯವಾದ ಮೇಲೆ, ಎಲ್ಲಿಗಾದರೂ ಸರಿಯೆ-ಹೋಗಿ ಕಲಿತುಕೊಂಡು ಬರಲೇಬೇಕು ! "

" ತಂದೆ-ತಾಯಿ, ಹೆಂಡತಿ-ಮಕ್ಕಳು-ಸಂಸಾರ-ಎಲ್ಲರನ್ನೂ ಬಿಟ್ಟು ಹೊರಟುಹೋಗುವುದು ಅಷ್ಟು ಸುಲಭವೆ ? "

" ನಾನೇನು ಸನ್ಯಾಸಿಯಾಗಿ ಹೋಗುತ್ತಿದ್ದೇನೆಯೇ ಸುದರ್ಶನ ? ಅನೇಕರು ಯಾವುದಾದರೂ ಊರುಗಳಿಗೋ, ಪುಣ್ಯ ಕ್ಷೇತ್ರಗಳಿಗೋ ಹೋಗಿ, ದೇವರ ಸೇವೆಯನ್ನೋ ಅಥವಾ ತಮ್ಮ ಕೆಲಸಗಳನ್ನೋ ಮಾಡಿಕೊಂಡು ಹಿಂತಿರುಗುವುದಿಲ್ಲವೇ ?-ಹಾಗೆಯೇ ನಾನೂ ಒಂದು ಊರಿಗೆ ಹೋಗಿ, ನಾಲ್ಕು ದಿನವಿದ್ದು ವಿದ್ಯೆಕಲಿತು ಬರುತ್ತೇನೆ. ಅದಕ್ಕೇನು ಅಡ್ಡಿ-ಆತಂಕ ? "

" ನಿನ್ನದು ತುಂಬಾ ದೃಢವಾದ ಮನಸ್ಸು ಸಭಾಪತಿ. ಮಾಡಬೇಕು

ಎಂದು ಯೋಚಿಸಿದ ಕೆಲಸವನ್ನು–ಹೇಗಾದರೂ ಸರಿಯೆ ಮಾಡಿಬಿಡುತ್ತೀಯೆ. ನಿನ್ನ ಆತ್ಮ ವಿಶ್ವಾಸ ಅಚಲ ! ”

ತುಂಬು ಹೃದಯದಿಂದ ನುಡಿದರು ಸುದರ್ಶನಯ್ಯಂಗಾರ್ಯರು.

“ ಸುದರ್ಶನಾ, ಮುನಿತಾಯಪ್ಪ ಯಾವಾಗ ಬರುತ್ತೀನಿ ಅಂತ ಹೇಳಿದ್ದಾನೆ ? ”

“ ಹೋಗುವಾಗ ಅವನೇನೂ ಹೇಳಲಿಲ್ಲಪ್ಪ–ಬರುವ ವಿಷಯ. ”

“ ಹಾಗಾದರೆ, ನಾವೇ ಅವನ ಮನೆಗೆ ಹೋಗೋಣವೇ ? ”

“ ಹ್ಞಂ....ಯಾವಾಗ ? ”

“ ಈಗಲೇ ಹೋಗಬಹುದಾಗಿತ್ತು. ಆದರೆ ಕತ್ತಲೆಯಾಯಿತು....”

“ ಏಳೂವರೆ ಗಂಟೆ ”

ಸುದರ್ಶನಯ್ಯಂಗಾರ್ಯರು ತಮ್ಮ ಗಡಿಯಾರ ನೋಡಿ ಹೇಳಿದರು.

“ ಈಗ ಆಗುವುದಿಲ್ಲ ಸುದರ್ಶನ. ಹತ್ತು ಗಂಟೆ ಹೊತ್ತಿಗೆ ರುಕ್ಕೂಗೆ ಆವೇಶ ಬರುತ್ತಿದೆ. ಅವಳನ್ನು ತಡೆದು, ಕೋಣೆಯಲ್ಲಿ ಕೂಡಿ ಹಾಕುವುದೇ ಒಂದು ದೊಡ್ಡ ಪ್ರಯಾಸ. ನಾನು ಮನೆಯಲ್ಲಿಲ್ಲದಿದ್ದರೆ ತುಂಬಾ ಅನರ್ಥ ವಾಗುತ್ತದೆ....ನಾಳೆ ಬೆಳಿಗ್ಗೆ ಬೇಗನೇ ಹೊರಟು–ಹತ್ತು ಗಂಟೆ ಹೊತ್ತಿಗೆ ವಾಪಸ್ಸು ಬಂದು ಬಿಡೋಣ. ನಿನಗೂ ಆಫೀಸಿಗೆ ಹೋಗುವುದಕ್ಕೆ ಅನುಕೂಲವಾಗುತ್ತದೆ. ”

“ ಹಾಗೇ ಮಾಡೋಣ ” ಎಂದು ಸುದರ್ಶನಯ್ಯಂಗಾರ್ಯರು, ಎರಡು ನಿಮಿಷ ಸುಮ್ಮನಿದ್ದು, ಅನಂತರ ಹೇಳಿದರು—

“ ಭದ್ರಯ್ಯನ ಪ್ರಯತ್ನ ಇಷ್ಟಕ್ಕೇ ನಿಂತಿದೆಯಲ್ಲಾ ! ಅವನು ಮುಂದೇನೂ ಸಾಹಸ ಮಾಡಿದಂತೆ ಕಾಣುವುದಿಲ್ಲ–ಅಲ್ಲವೇ ಸಭಾಪತಿ ? ”

“ ಬಹುಶಃ ಅವನ ಸಾಹಸವೆಲ್ಲಾ ಮುನಿತಾಯಪ್ಪನ ‘ ರಕ್ಷರೇಖೆ ’ ಯಿಂದ ಹೊರಗೇ ನಿಂತು ವಿಫಲವಾಗಿರಬಹುದು ! ”

“ ಇದ್ದರೂ ಇರಬಹುದು ! ” ಎಂದರು ಸುದರ್ಶನಯ್ಯಂಗಾರ್ಯರು. ಆದರೆ ಮರುಕ್ಷಣದಲ್ಲೇ ಸಂಶಯ ಉದಿಸಿತು.

“ ಇಲ್ಲ ಸಭಾಪತಿ, ನಿನ್ನೆ ಮುನಿತಾಯಪ್ಪ ‘ ರಕ್ಷರೇಖೆ ’ಯನ್ನು ಎಳೆ ಯಲೇ ಇಲ್ಲ ! ನಮ್ಮ ಜೊತೆಯಲ್ಲಿ ಮಾತನಾಡಿಕೊಂಡೇ ಇದ್ದವನು ಹಾಗೆಯೇ ಹೊರಟು ಬಿಟ್ಟ ! ಬಹುಶಃ ಮರೆತನೆಂದು ಕಾಣುತ್ತದೆ! ”

" ಹೌದು, ನಿಜ. ಮುನಿತಾಯಪ್ಪ ' ರಕ್ಷರೇಖೆ 'ಯನ್ನು ಎಳೆಯಲೇ ಇಲ್ಲ. " ಎಂದು ಕುಗ್ಗಿದ ದನಿಯಲ್ಲಿ ಸಭಾಪತಿಶಾಸ್ತ್ರಿಗಳೂ ನುಡಿದರು.

ಆಕಾಶದಲ್ಲಿ ಅರೆಚಂದ್ರ ಕಾಣಿಸಿಕೊಂಡಾಗ, ಕೃಷ್ಣಪಕ್ಷದ ಬೆಳದಿಂಗಳು ಮೂಡಿ, ಸುತ್ತಲಿನ ಕತ್ತಲೆಯನ್ನು ಹೊಡೆದೋಡಿಸಿತು. ಮನಸ್ಸಿನ ಮೇಲೆ ನಿರ್ಮಲಾಂಜನ ಲೇಪಿಸಲು ಮಂದಾನಿಲ ಮಾಯಿಕ ಗಮನದಿಂದ ಸುಳಿದು ಹೋದ. ಅದೇ ಸಮಯಕ್ಕೆ ಗಣಪತಿ ಗುಡಿಯ ಗಂಟೇ ' ಘಣೀರ್.... ಘಣೀರ್ ' ಎಂದು ಬಾರಿಸಿತು. ಕೂಡಲೇ ಶಾಸ್ತ್ರಿಗಳು ಎದ್ದು—

" ಏಳು ಸುದರ್ಶನ, ಇವತ್ತು ದೇವಸ್ಥಾನಕ್ಕೆ ಹೋಗಿ, ಗಣಪತಿಗೆ ನಮಸ್ಕಾರ ಮಾಡಿ ಬರೋಣ "

ಎಂದರು. ಗಣಪತಿಯ ವಿಷಯದಲ್ಲಿ ತೀವ್ರವಾದ ಆಸಕ್ತಿಯನ್ನು ಉಂಟುಮಾಡಿಕೊಂಡಿದ್ದ ಶಾಸ್ತ್ರಿಗಳನ್ನು ಕಂಡು ಸುದರ್ಶನಯ್ಯಂಗಾರ್ಯರು ಮುಗ್ಧರಾದರು.

ಮಿತ್ರರಿಬ್ಬರೂ ದೇಗುಲದ ಆವರಣವನ್ನು ಹೊಕ್ಕು, ಮೆಟ್ಟಿಲು ಹತ್ತಿ, ವಿಘ್ನೇಶ್ವರನ ಸನ್ನಿಧಿಗೆ ಬಂದರು. ಗಣನಾಯಕನ ಭವ್ಯಮೂರ್ತಿ ಶಾಸ್ತ್ರಿಗಳ ಕಣ್ಮನಗಳಲ್ಲಿ ತುಂಬಿಕೊಂಡು, ಅವರ ಹೃದಯವನ್ನು ಹೊಕ್ಕಿತು. ಶಾಸ್ತ್ರಿಗಳು ತಮ್ಮನ್ನು ತಾವೇ ಮರೆತು ಕೈಜೋಡಿಸಿ ನಿಂತು ಬಿಟ್ಟರು. ಸುದರ್ಶನಯ್ಯಂಗಾರ್ಯರು ಎಚ್ಚರಿಸದಿದ್ದರೆ ಅವರು ಇನ್ನೂ ಎಷ್ಟುಹೊತ್ತು ಹಾಗೆಯೇ ನಿಂತಿರುತ್ತಿದ್ದರೋ !

" ನನ್ನ ಮನಸ್ಸಿನ ತುಂಬಾ ಗಣಪತಿಯೇ ತುಂಬಿಕೊಂಡುಬಿಟ್ಟಿದ್ದಾನಲ್ಲಾ – ಸುದರ್ಶನ. ಅವನನ್ನು ಬಿಟ್ಟಿರುವುದಕ್ಕೇ ನನಗೆ ಮನಸ್ಸಿಲ್ಲ."

" ಅದು ನಿನ್ನ ಏಕಾಗ್ರಚಿತ್ತದ ಪ್ರಭಾವ "

" ನನಗೆ ಗಣಪತಿ ಪಸನ್ನನಾಗುತ್ತಾನೆಯೇ ?"

" ಅದರಲ್ಲೇನು ಸಂದೇಹ ? ನಿನ್ನಂತಹ ದೃಢಚಿತ್ತದ ಸಾಧಕನಿಗಲ್ಲದೆ ಇನ್ನಾರಿಗೆ ಒಲಿಯುತ್ತಾನೆ ಅವನು ?"

" ನಿನ್ನ ಮಾತು ನಿಜವಾಗಲಿ ಸುದರ್ಶನ " – ಎಂದರು ಶಾಸ್ತ್ರಿಗಳು

ಗಂಟೆ ಎಂಟು ದಾಟಿದ್ದರಿಂದ, ಮಿತ್ರರಿಬ್ಬರೂ ಮನೆಗೆ ಹೊರಡುವ ಆತುರ ತೋರಿದರು.

" ಇನ್ನು ಹೋಗೋಣವೇ ಸಭಾಪತಿ ? ' ಅವಳು ' – ಇವತ್ತು ಬೇಗ

ಬನ್ನಿ ಅಂತ ಹೇಳಿದ್ದಾಳೆ. ಮನೆಯಲ್ಲಿ ಒಂಟಿಯಾಗಿದ್ದು ಅವಳಿಗೂ ತುಂಬಾ ಬೇಜಾರು "

" ಹೌದು, ಪಾಪ. ಮನೆಯಲ್ಲಿ ಮಾತನಾಡುವುದಕ್ಕೂ ಸಹ ಯಾರೂ ಜೊತೆಗಿಲ್ಲ. ಹೊತ್ತು ಕಳೆಯುವುದು ನಿಜವಾಗಿಯೂ ಕಷ್ಟ .... ವೈದೇಹಮ್ಮ ನವರನ್ನು ನಮ್ಮ ಮನೆಗಾದರೂ ಕರೆದುಕೊಂಡು ಬಂದಿದ್ದರೆ, ಅವರಿಗೆ ಸ್ವಲ್ಪ ಬೇಜಾರು ಕಳೆಯುತ್ತಿತ್ತು. "

" ಅವಳಿಗೂ ಬರಬೇಕೂಂತ ಆಸೆ... ನಾಳೆ ಕರೆದುಕೊಂಡು ಬರುತ್ತೀನಿ"

" ಬೆಳಿಗ್ಗೆ ನೀನು ಬೇಗನೆ ಬರುತ್ತೀ ತಾನೆ ?"

" ಏಳು ಗಂಟೆಗೇ ಹಾಜರು !"

ಎನ್ನುತ್ತಾ ಸುದರ್ಶನಯ್ಯಂಗಾರ್ಯರು ಹೊರಟರು.

' ಗಣಪತಿ 'ಯ ವಿಚಾರವನ್ನೇ ಯೋಚಿಸುತ್ತಾ ಶಾಸ್ತ್ರಿಗಳೂ ಮನೆ ಸೇರಿದರು.

ರಾತ್ರಿಯ ಊಟ ಮುಗಿಯಿತು.

ರುಕ್ಮಿಣಿಯ ' ಆವೇಶ ' ರಾದ್ಧಾಂತ ಯಥಾಪ್ರಕಾರ ಆರಂಭವಾಗಿ – ಶಾಂತವಾಯಿತು.

ಎಲ್ಲರೂ ಮಲಗಿದರು – ನಿದ್ರೆಗಾಗಿ : ಶಾಸ್ತ್ರಿಗಳು ಮಾತ್ರ ' ಮಲಗ ಬೇಕಲ್ಲಾ ' ಎಂದು ಮಲಗಿದರು. ಗಣಪತಿಯನ್ನೂ ಮನಸ್ಸಿನಲ್ಲಿಯೇ ಮಲಗಿಸಿಕೊಂಡರು ? ಆದರೆ, ಶಾಸ್ತ್ರಿಗಳಿಗೆ ನಿದ್ರೆ ಬಂದೊಡನೆ, ಗಣಪತಿಗೆ ಎಚ್ಚರವಾಗಿಬಿಟ್ಟಿತು !

ಜಾಗೃತಾವಸ್ಥೆಯಿಂದ ಸ್ವಪ್ನಾವಸ್ಥೆಗೆ ತೆರಳಿದ ಶಾಸ್ತ್ರಿಗಳು, ತಮ್ಮ ಒಳಕಂಗಳಿಂದಲೇ ವಿಘ್ನೇಶ್ವರನ ಭವ್ಯ ಮೂರ್ತಿಯನ್ನು ಕಣ್ತುಂಬ ನೋಡಿ, ಆನಂದಬಾಷ್ಪ ಹರಿಸಿದರು........

" ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ |.
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪ ಶಾಂತಯೇ ||"

ಸ್ತೋತ್ರ ಶ್ಲೋಕದ ಮಂಜುಳ ಘೋಷ ಮಧುರವಾಗಿ ಬಂದು, ಶಾಸ್ತ್ರಿಗಳ ಕಿವಿಹೊಕ್ಕು ಲೀನವಾಯಿತು........

ವಿದ್ಯಾರಂಭ ಕಾಲದಲ್ಲಿ ಪ್ರಪ್ರಥಮವಾಗಿ ಹೇಳಿದ ಶ್ಲೋಕ ಅದೇ !

ಉಪನಯನ ಸಮಯದಲ್ಲಿ ಉಚ್ಚರಿಸಿದ ಆರಂಭ ಶ್ಲೋಕ ಅದೇ !

ಸೌಭಾಗ್ಯಮ್ಮನವರ ಕೈ ಹಿಡಿಯುವಾಗ ಮೊಟ್ಟಮೊದಲು ನುಡಿದ ಶ್ಲೋಕ ಅದೇ !

ಶಾಸ್ತ್ರಿಗಳ ಕಣ್ಮುಂದೆ ಮೂರು ಚಿತ್ರಗಳು ಸುಳಿದವು—

ವಿದ್ಯಾರಂಭ, ಉಪನಯನ, ವಿವಾಹ........

ಎಲ್ಲ ಕಾರ್ಯಗಳಿಗೂ ಗಣಪತಿಯೇ ಅಗ್ರ. ಅವನನ್ನು ನೆನೆಯದೆ ಏನೂ ಮಾಡುವಂತಿಲ್ಲ – ನಮ್ಮ ಸಂಸ್ಕೃತಿಯಲ್ಲಿ! ಹಾಗೇನಾದರೂ ಛಲದಿಂದ ಮಾಡಿಯೇ ಮಾಡಿದಲ್ಲಿ, ಆ ಕಾರ್ಯ ನಿಷ್ಫಲ !

ಶಾಸ್ತ್ರಿಗಳ ವಾದ ಸರಿಯೆಂದು ಸಮರ್ಥಿಸಲು, ಕಣ್ಣಿಗೆ ಕಾಣದ ಯಾರೋ ಒಬ್ಬರು ತಂಬೂರಿಯನ್ನು ಮೀಟುತ್ತಾ, ಶಕ್ತಿ – ವೈಭವಗಳ ಪ್ರದರ್ಶಕವಾದ 'ನಾಟ' ರಾಗದಲ್ಲಿ ಹಾಡುತ್ತಿದ್ದುದು ಕೇಳಿಸಿತು :

ವಂದಿಸುವುದಾದಿಯಲಿ ಗಣನಾಥನ ॥ಪ॥
ಸಂದೇಹಸಲ್ಲ ಶ್ರೀ ಹರಿಯಾಜ್ಞೆ ಇದಕುಂಟು ॥ಅ.ಪ॥

ಹಿಂದೆ ರಾವಣ ತಾನು ವಂದಿಸದೆ ಗಜ ಮುಖನ
ನಿಂದು ತಪವನು ಗೈದು ವರ ಪಡೆಯಲು
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ
ತಂದ ವರಗಳನೆಲ್ಲ ಧರೆಗೆ ಇಳಿಸಿದನು ೧

ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ
ಮುಂದೆ ಗಣಪನ ಪೂಜಿಸೆಂದು ಪೇಳೆ
ಒಂದೆ ಮನದಲಿ ಬಂದು ಪೂಜಿಸಲು ಗಣನಾಥ
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ೨

ಇಂದು ಜಗವೆಲ್ಲ ಉಮೆ ನಂದನನ ಪೂಜಿಸಲು
ಚಂದದಿಂದಲಿ ಸಕಲ ಸಿದ್ಧಿಗಳಸಿತ್ತು
ತಂದೆ ಸಿರಿ ಪುರಂದರ ವಿಠಲನ ಸೇವೆಯೊಳು
ಬಂದ ವಿಘ್ನವ ಕಳೆದಾನಂದವನು ಕೊಡುವಾ ೩

ಹಾಡು ಮುಗಿದೊಡನೆ ಶಾಸ್ತ್ರಿಗಳು 'ಆಹಾ ! ಗಣಪತಿ, ಗಿರಿಜಾಸುತ, ವಿನಾಯಕ, ವಿಘ್ನರಾಜ ' ಎಂದು ಹೇಳುತ್ತಾ ಕೈ ಜೋಡಿಸಿದರು.

ಶಾಸ್ತ್ರಿಗಳ ಕಣ್ಣು, ಮಾನವನು ಎಷ್ಟು ಹಂಬಲಿಸಿದರೂ ಕಾಣಲಾಗದ ನಯನಮನೋಹರ, ವೈಭವಯುತ, ದಿವ್ಯ ದೃಶ್ಯಗಳನ್ನು ಆ ಸ್ವಪ್ನದಲ್ಲಿ ಕಂಡು ಪುನೀತವಾಯಿತು........

ಇಂದ್ರಾದಿ ಅಷ್ಟದಿಕ್ಪಾಲಕರು ಒಬ್ಬರ ಹಿಂದೊಬ್ಬರು ಬಂದು ಗಣಪತಿಯ ಪಾದಗಳಿಗೆ ಪುಷ್ಪ ಸಮರ್ಪಿಸಿ, ಗಂಧಾದಿಗಳಿಂದ ಪೂಜಿಸಿ, ನಮಿಸಿದರು.

ಅನಂತರ ಸೃಷ್ಟಿ — ಸ್ಥಿತಿ — ಲಯ ಕರ್ತರಾದ ಬ್ರಹ್ಮ — ವಿಷ್ಣು — ಮಹೇಶ್ವರರು ಬಂದು ಪೂಜಿಸಿ ಹೋದರು.

ತಂದೆಯಾದ ಈಶ್ವರನೂ ಬಂದು ಮಗನನ್ನು ಪೂಜಿಸಿದ !

ಶ್ರೀರಾಮಚಂದ್ರ, ಶ್ರೀಕೃಷ್ಣ, ಯುಧಿಷ್ಠಿರ ಮೊದಲಾದ ಅವತಾರಿಗಳೂ ಸಾರ್ವಭೌಮರೂ ಬಂದು ಗಣಪತಿಯನ್ನು ಪ್ರೇಮದಿಂದಪೂಜಿಸಿ ಹೋದರು.

ಅನಂತರ ಶ್ರೀಶಾಸ್ತ್ರಿಗಳು ಗಣಪತಿಯ ಪೂಜೆಗೆ ಆರಂಭಿಸಿದರು. ಪುಷ್ಪ ಸಮರ್ಪಿಸುವಾಗ ಅವರ ಆಶ್ಚರ್ಯ ಇಮ್ಮಡಿಸಿತು........

ಈಶ್ವರನಿಗೆ ಪ್ರಿಯಕರವಾದುವು : ತುಂಬೆಹೂ ಮತ್ತು ಬಿಲ್ವಪತ್ರೆ.

ವಿಷ್ಣುವಿಗೆ ಪ್ರಿಯಕರವಾದುವು : ಕಮಲ ಪುಷ್ಪ ಮತ್ತು ತುಳಸೀದಳ.

ಆದರೆ ವಿಘ್ನೇಶ್ವರನಿಗೆ........ ?

ಪುಷ್ಪರಾಶಿಯಲ್ಲಿ ಕುಳಿತಿದ್ದ ವಿಘ್ನೇಶ್ವರನನ್ನು ಪರೀಕ್ಷಕ ದೃಷ್ಟಿಯಿಂದ ನೋಡಿದರು ಶಾಸ್ತ್ರಿಗಳು —

ಲೋಕದಲ್ಲಿರುವ ಎಲ್ಲಾ ಬಗೆಯ ಪುಷ್ಪಗಳೂ ಅಲ್ಲಿವೆ! ನಾನಾ ತರಹೆಯ ಪತ್ರ ಪುಷ್ಪಗಳೂ ಇವೆ! ಎಲ್ಲೆಡೆಯಲ್ಲಿಯೂ ಸಾಮಾನ್ಯವಾಗಿ ಬೆಳೆಯುವ ಗರಿಕೆಯೂ ಪೂಜಾ ಸಾಮಗ್ರಿಯೇ !

'ಅದು ಇಷ್ಟ — ಇದು ಇಷ್ಟ' ಎನ್ನುವುದೇ ಇಲ್ಲ ಗಣೇಶನಿಗೆ. ಆತನಿಗೆ ಎಲ್ಲವೂ ಇಷ್ಟವೇ! ಎಲ್ಲವೂ ಪ್ರಿಯಕರವೇ !

'ಗಣಪತಿಯ ವಿಶ್ವ ಪ್ರೇಮ ಎಷ್ಟು ದೊಡ್ಡದು! ಎಷ್ಟು ಮಹತ್ತರವಾದುದು!' ಎಂದುಕೊಂಡರು ಶಾಸ್ತ್ರಿಗಳು. ಅನನ್ಯ ಭಕ್ತಿಯಿಂದ ಆವರ ಪೂಜೆ ಮುಗಿಯಿತು.

ಪೂಜೆ ಸಲ್ಲಿಸಲು ಬಂದ ಎಲ್ಲ ದೇವಾಧಿದೇವತೆಗಳೂ ತಮ್ಮ ತಮ್ಮ ಸ್ವಸ್ಥಾನಗಳಿಗೆ ಹಿಂತಿರುಗುವಂತೆ, ಪೂಜೆ ಸ್ವೀಕರಿಸಿದ ಗಣಪತಿಯೂ ತನ್ನ ಸ್ಥಳಕ್ಕೆ ಹೊರಟುಹೋಗುವನೇನು ?

–ಶಾಸ್ತ್ರಿಗಳು ಸಂದೇಹದಿಂದ ಗಣಪತಿಯ ಮೂರ್ತಿಯತ್ತ ನೋಡಿದರು.

ಗಣಪತಿಗೆ ಅವರ ಸಂದೇಹ ಅರ್ಥವಾಯಿತೇನೋ !

ಅಷ್ಟದಿಕ್ಪಾಲಕರು ತಮ್ಮತಮ್ಮ ದಿಙ್ಮಂದಿರಗಳಿಗೆ ತೆರಳಿದರು. ಇಂದ್ರನು ಅಮರಾವತಿಗೆ ಹೋದ. ಬ್ರಹ್ಮನು ಸತ್ಯಲೋಕಕ್ಕೂ, ವಿಷ್ಣುವು ವೈಕುಂಠಕ್ಕೂ, ಈಶ್ವರನು ಕೈಲಾಸಕ್ಕೂ ಹಿಂತಿರುಗಿದರು. ಶ್ರೀರಾಮಚಂದ್ರನು ಅಯೋಧ್ಯೆಗೂ, ಶ್ರೀಕೃಷ್ಣನು ದ್ವಾರಕೆಗೂ, ಯುಧಿಷ್ಠಿರನು ಹಸ್ತಿನಾವತಿಗೂ ಮರಳಿದರು. ಆದರೆ ನಾನೆಲ್ಲಿಗೆ ಹೋಗಲಿ ಮಗು ? ನನಗೇನು ಒಂದು ನಿರ್ದಿಷ್ಟವಾದ ಲೋಕವಿದೆಯೇ ? ಸ್ಥಳವಿದೆಯೇ ?....ಏನಿದೆ ?

ಗಣಪತಿಯು ಮುಗುಳ್ನಗುತ್ತಾ ಹೇಳಿದಂತೆ ಭಾಸವಾಯಿತು.

' ಅಯ್ಯೋ ಪಾಪ ! ಸಮಸ್ತರಿಂದಲೂ ಪೂಜಿಸಲ್ಪಡುವ ನಿನಗೇ ಒಂದು ಸ್ಥಳ ಇಲ್ಲದೆ ಹೋಯಿತೆ ?'

ಶಾಸ್ತ್ರಿಗಳು ಮರುಕದಿಂದ ನುಡಿದರು.

' ಶುಕ್ಲಾಂಬರಧರಂ ವಿಷ್ಣುಂ............'

ಶ್ಲೋಕ ಮತ್ತೊಮ್ಮೆ ಅವರ ಕಿವಿಯಲ್ಲಿ ಮೊಳಗಿತು. ' ವಿಷ್ಣುಂ ' ಎಂಬುದು ಅವರ ಬುದ್ಧಿಯನ್ನು ಬಡಿದೆಬ್ಬಿಸಿತು........

' ವಿಷ್ಣುಂ....ವಿಷ್ಣುಂ....ವಿಷ್ಣುಂ '

ಮೂರು ಬಾರಿ ಉಚ್ಚರಿಸಿದರು ಶಾಸ್ತ್ರಿಗಳು–ಉಳಿದೆಲ್ಲವನ್ನೂ ಮರೆತು.

' ಅಯ್ಯೋ ! ಎಂಥಾ ಮೂಢ ನಾನು !! ನಿನಗೆ ಒಂದು ಲೋಕ – ಒಂದು ಸ್ಥಳ ಇಲ್ಲವಲ್ಲಾ ಎಂದು ಪರಿತಪಿಸಿದೆನಲ್ಲಾ ಮಂದಮತಿ ! .... ನೀನು ' ವಿಷ್ಣುಂ ' ! ನೀನು ವಿಶ್ವವ್ಯಾಪಕ ಮೂರ್ತಿ ! ನೀನು ವಿಶ್ವಂಭರ ಮೂರ್ತಿ ! ಅನಂತವಾಗಿರುವ ಆಕಾಶಕ್ಕೇ ಅಧಿದೇವತೆ ! ಅನಂತ ವಿಶ್ವವೇ ನಿನ್ನ ಆವಾಸಸ್ಥಾನ !'

ಶಾಸ್ತ್ರಿಗಳು ಗಲ್ಲ ಬಡಿದುಕೊಂಡು, ' ತಪ್ಪುಮಾಡಿದೆ, ಕ್ಷಮಿಸು.... ಕ್ಷಮಿಸು ' ಎಂದು ದೀರ್ಘದಂಡ ನಮಸ್ಕಾರ ಮಾಡಿದರು.

' ನೀನು ಸಮುದ್ದೇಶದಿಂದ ಕೈಕೊಳ್ಳುವ ಕಾರ್ಯಗಳು ನಿರ್ವಿಘ್ನವಾಗಿ ನೆರವೇರಿ–ಫಲಪ್ರದವಾಗಲಿ.

' ದುಷ್ಟರಿಂದ ನಿನಗೊದಗುವ ತೊಂದರೆ ತಾಪತ್ರಯಗಳು ದೂರವಾಗಲಿ.

' ನಿನ್ನ ಇಷ್ಟಾರ್ಥಗಳು ಸಿದ್ಧಿಸಲಿ.

'ನಿನಗೆ ಸುಖ–ಸಂತೋಷಗಳು ತಪ್ಪದೆ ಉಂಟಾಗುತ್ತಿರಲಿ.'

ಗಣಪತಿಯ ಆಶೀರ್ವಾದ ಶಾಸ್ತ್ರಿಗಳಿಗೆ ಸ್ಪಷ್ಟವಾಗಿ ಕೇಳಿಸಿತು.

ಹೌದು, ಆಶೀರ್ವಾದವಾಯಿತು. ಇನ್ನು ಸಂದೇಶವೇನು ?

ಸಂದೇಶ....

'ಪ್ರತಿಯೊಂದು ಕಾರ್ಯವನ್ನೂ ಯೋಗಯುಕ್ತನಾಗಿ ಮಾಡು.'

ಗೀತಾ ಸಂದೇಶವೇ ಮಹಾಗಣಪತಿಯ ಸಂದೇಶ !

ಪ್ರಣಾಮಾಸಕ್ತರಾಗಿದ್ದ ಶಾಸ್ತ್ರಿಗಳು ಎದ್ದು, ಉನ್ಮೀಲಿತರಾಗಿ, ಗಣಪತಿಯ ವಿಚಿತ್ರ ಮೂರ್ತಿಯನ್ನು ನಿಟ್ಟಿಸಿದರು........

ಘನತರವಾದ ಮಾನವ ದೇಹ, ಸೊಂಡಿಲು ಸಹಿತವಾದ ಗಜರಾಜನ ಶಿರಸ್ಸು, ದೇಹದಲ್ಲಿ ಮುಖ್ಯವಾಗಿ ಎದ್ದು ಕಾಣುವ ಉಬ್ಬಿದ ಹೊಟ್ಟೆ, ಅದನ್ನು ಬಿಗಿದು ಕಟ್ಟಿದ ಸರ್ಪ–ಈ ಅಗಾಧ ಮೂರ್ತಿಯನ್ನು ಹೊತ್ತ ವಾಹನ ಪುಟ್ಟ ಇಲಿ !

ಗಣೇಶನ ವಿಚಿತ್ರ ಮೂರ್ತಿಯನ್ನು ಕಂಡು ಶಾಸ್ತ್ರಿಗಳು ವಿಸ್ಮಿತರಾದರು. ವಿಕಸಿತವಾದ ಅವರ ಬುದ್ಧಿ ಆ ವೈಚಿತ್ರ್ಯಕ್ಕೆ ಒಪ್ಪುವ ಅರ್ಥವನ್ನು ಕಲ್ಪಿಸಿತು....

ಆ ಆಕಾರ—

ಕರ್ತವ್ಯದ ಸಾಧನವೇ ಕಾಯ. ಕಾಯದ ಧರ್ಮವೇ ಕಾಯಕ. ಆ ಕಾಯಕ ಪ್ರೇರಕವೇ ಗಣಪತಿಯ ಮಾನುಷಾಕಾರ.

ಆ ಗಜವದನ—

ಕರ್ತವ್ಯೋನ್ಮುಖನಾಗಿ ಜಯಗಳಿಸಲು ಬಹು ಸೂಕ್ಷ್ಮಬುದ್ಧಿ ಅವಶ್ಯಕ. ಅತಿಸ್ಥೂಲ ಕಾಯಕ್ಕೆ ಅತಿ ಸೂಕ್ಷ್ಮ ಮತಿಯಿರುವುದು ಆನೆಯ ವೈಶಿಷ್ಟ್ಯ. ಸೂಕ್ಷ್ಮ ಬುದ್ಧಿಯನ್ನುಂಟಾಗಿ ಕಾರ್ಯ ಪ್ರಯತ್ನ ಶೀಲನಾಗೆಂದು ಸೂಚಿಸುವುದೇ – ಆ ಗಜವದನ.

ಆ ಬಂಧನ—

ಕರ್ತವ್ಯಜಯಾಪೇಕ್ಷಿ ಕೇವಲ ಹೊಟ್ಟೆಯ ಸುಖವನ್ನೇ–ನಾಲಿಗೆಯ ರುಚಿಯನ್ನೇ ಅಪೇಕ್ಷಿಸಿ ಕುಳ್ಳಿರಬಾರದು. ಅದನ್ನು ಅಡಗಿಸಬೇಕು. ಅದರ ಜೊತೆಗೇ–ತನ್ನಲ್ಲಿ ಉದ್ಭವಿಸುವ ಮಂದಪ್ರಕೃತಿಯನ್ನೂ – ಸೋಮಾರಿತನವನ್ನೂ ಹತ್ತಿಕ್ಕಬೇಕು. ಇವೆರಡನ್ನೂ ಒಟ್ಟಿಗೇ ಅಣಗಿಸಬೇಕಾದರೆ ಒಂದನ್ನು ಇನ್ನೊಂದರಿಂದ ಬಲವಾಗಿ ಬಂಧಿಸಬೇಕು. ಅದಕ್ಕಾಗಿಯೇ ಆಹಾರದ

ಆಸೆಯ ಹೊಟ್ಟೆಯನ್ನು ಮಂದ ಪ್ರಕೃತಿಯ ಸರ್ಪದಿಂದ ಬಿಗಿಯಾಗಿ ಬಂಧಿಸಲಾಗಿದೆ. ಅದೇ ಆ ಬಂಧನ.

ಆ ವಾಹನ–

ಕಾರ್ಯಜಯಾಪೇಕ್ಷಿಯು ತನ್ನ ಪ್ರಯತ್ನದಲ್ಲಿ ದೃಢಚಿತ್ತದಿಂದ ಮುಂದರಿಯಬೇಕು. ಚಪಲ-ಚಂಚಲತೆಗಳನ್ನು ತುಳಿದು, ಏರಿದರೆ ಮಾತ್ರ ದೃಢಚಿತ್ತ ಸಾಧ್ಯ. ಅದಕ್ಕೋಸ್ಕರವೇ ಗಣಪತಿಯು ಚಪಲ ಪ್ರಾಣಿಯಾದ ಇಲಿಯನ್ನು ಮೆಟ್ಟಿ, ಅದರ ಮೇಲೇರಿ ಕುಳಿತಿದ್ದಾನೆ–ಮೂಷಕವಾಹನ.

ಏಕೋ ಶಾಸ್ತ್ರಿಗಳ ಕಣ್ಣು ತುಂಬಿ ಹನಿಯಿಟ್ಟಿತು. ಕೂಡಲೇ ಗಣಪತಿಯ ಭವ್ಯಮೂರ್ತಿಯ ಬಳಿಗೆ ಓಡಿದರು.

" ಗಣಪತಿ....ಗಣೇಶ....ಗಣನಾಯಕಾ....ಗಣರಾಜ....ಗಣಾಧಿಪತೇ "

ಎಂದು ಕೂಗುತ್ತಾ ವಿಘ್ನೇಶ್ವರನನ್ನು ಬಿಗಿಯಾಗಿ ಅಪ್ಪಿಕೊಂಡರು.

ಗಣೇಶ ಕಿಟಾರನೆ ಕಿರಿಚಿಕೊಂಡ !

ಶಾಸ್ತ್ರಿಗಳು ಕನವರಿಸಿ–ಕೂಗಿಕೊಂಡುದನ್ನು ಕೇಳಿ, ಸೌಭಾಗ್ಯಮ್ಮನವರಿಗೆ ತಟ್ಟನೆ ಎಚ್ಚರವಾಯಿತು. ಸನಿಯದಲ್ಲಿದ್ದ 'ಶಯ್ಯಾದೀಪ' ವನ್ನು ದೊಡ್ಡದು ಮಾಡಿ, ನೋಡಿದರು....ಪುಟ್ಟ ಗಣೇಶ ಅಳುತ್ತಿದ್ದಾನೆ !

ಹೌದು, ನಿಜವಾಗಿಯೂ ಶಾಸ್ತ್ರಿಗಳು ಗಣೇಶನನ್ನೇ ಅಪ್ಪಿಕೊಂಡಿದ್ದಾರೆ! ಪಕ್ಕದಲ್ಲಿ ಮಲಗಿದ್ದ ತಮ್ಮ ಮಗ ಪುಟ್ಟ ಗಣೇಶನನ್ನೇ ಬಿಗಿಯಾಗಿ ಅಪ್ಪಿಕೊಂಡಿದ್ದಾರೆ. ಆ ಅಪ್ಪುಗೆಯ ಬಿಗಿಯನ್ನು ತಡೆಯಲಾರದೆ ಮಗು ಕಿಟಾರನೆ ಕಿರಿಚಿಕೊಂಡಿದೆ !........ಪುಟ್ಟ ಗಣೇಶ ಅಳುತ್ತಿದ್ದಾನೆ !

ಶಾಸ್ತ್ರಿಗಳಿಗೂ ಎಚ್ಚರವಾಯಿತು–ಮಗನ ಅಳುವಿಕೆಯಿಂದ.

" ಯಾಕೆ ಅಳುತ್ತಿದ್ದಾನೆ ಈ ಅರ್ಧರಾತ್ರಿಯಲ್ಲಿ ? "

" ಅವನನ್ನೇ ಕೇಳಿ ! "

ಸೌಭಾಗ್ಯಮ್ಮನವರಿಗೆ ನಗು ಬಂದಿತು. ಶಾಸ್ತ್ರಿಗಳು ಕಕ್ಕಾಬಿಕ್ಕಿಯಾದರು.

ಪುಟ್ಟ ಗಣೇಶನನ್ನು ಸಮಾಧಾನ ಪಡಿಸಿದ ಬಳಿಕ, ಸೌಭಾಗ್ಯಮ್ಮನವರೇ ನಡೆದ ಸಂಗತಿಯನ್ನು–ಶಾಸ್ತ್ರಿಗಳು ಕನವರಿಸಿಕೊಂಡುದನ್ನು ಹೇಳಿದರು.

" ನಿಜ ಸೌಭಾಗ್ಯ. ನಾನು ಇಷ್ಟು ಹೊತ್ತಿನವರೆಗೂ ದಿವ್ಯವಾದ ಕನಸನ್ನು ಕಂಡೆ. ಅದು ಈ ಲೋಕಕ್ಕೆ ಸಂಬಂಧಿಸಿದ ಕನಸೇ ಅಲ್ಲ ! "

ಎಂದು ಶಾಸ್ತ್ರಿಗಳು ತಾವು ಕಂಡ ಕನಸನ್ನು ಪತ್ನಿಯ ಕಣ್ಣೆದುರಿಗೆ ಕಟ್ಟುವಂತೆ ಬಣ್ಣಿಸಿದರು.

" ಗಣಪತಿ ದೇವರ ವಿಷಯವನ್ನು ನೀವು ತುಂಬಾ ಮನಸ್ಸಿಗೆ ಹಚ್ಚಿಕೊಂಡಿದ್ದೀರಿ ಅಂದ್ರೆ "

" ಹೌದು ಸೌಭಾಗ್ಯ. ಗಣಪತಿಯೇ ಈಗ ನನಗೆ ಸರ್ವಸ್ವ. ಅವನನ್ನು ಪ್ರಸನ್ನ ಮಾಡಿಕೊಂಡ ಹೊರತು ನನಗೆ ತೃಪ್ತಿಯೇ ಇಲ್ಲ. ನೆಮ್ಮದಿಯೂ ಇಲ್ಲ. "

ಸೌಭಾಗ್ಯಮ್ಮ ಉತ್ತರಿಸಲಾಗದೆ ಮೌನವಾದರು.

ಮತ್ತೆ ಶಾಸ್ತ್ರಿಗಳೇ ಮಾತನಾಡಿದರು—

" ನಾನು ಗಣಪತಿ ಉಪಾಸನೆ ಮಾಡುವುದು ನಿನಗೆ ಇಷ್ಟವಿಲ್ಲವೆ ಸೌಭಾಗ್ಯ ? "

" ನಿಮ್ಮಿಷ್ಟವೇ ನನ್ನ ಇಷ್ಟ "

ಎಂದು ತಟ್ಟನೆ ನುಡಿದು ಸುಮ್ಮನಾದರು ಸೌಭಾಗ್ಯಮ್ಮ. ಶಾಸ್ತ್ರಿಗಳಿಗೂ ತುಂಬಾ ಆನಂದವಾಯಿತು.

" ನಿನ್ನಂತಹ ಹೆಂಡತಿ ಸಿಕ್ಕುವುದಕ್ಕೆ ನಾನೆಷ್ಟು ಪುಣ್ಯ ಮಾಡಿದ್ದೆನೋ!"

ಶಾಸ್ತ್ರಿಗಳು ಸೌಭಾಗ್ಯಮ್ಮನವರ ಹಣೆಯ ಮೇಲೆ ಕೈಯ್ಯಾಡಿಸಿ, ಮುಂಗೂದಲು ನೇವರಿಸಿದರು.

" ಮುಖ್ಯ ನಿಮ್ಮ ಕೈ ಹಿಡಿದಿದ್ದು ನನ್ನ ಪುಣ್ಯ ! "

" ಇಬ್ಬರದ್ದೂ ಪುಣ್ಯವೇ ಅನ್ನುತ್ತೀಯಾ ? "

" ಹ್ಞಂ....ಅತ್ತೆಮ್ಮನವರ ಪುಣ್ಯ ! "

" ನೀ ತುಂಬಾ ಜಾಣೆ ಸೌಭಾಗ್ಯೊ.... ..."

ಶಾಸ್ತ್ರಿಗಳು ಪ್ರೀತಿಯಿಂದ ಪತ್ನಿಯ ಮುಖವನ್ನು ಎದೆಗಪ್ಪಿಕೊಂಡರು.

" ಮಲಗಿಕೊಳ್ಳಿ. ಇನ್ನಾದರೂ ಸ್ವಲ್ಪ ಹೊತ್ತು ನಿದ್ರೆ ಮಾಡಿ. ಬೆಳಗಾಗುವುದಕ್ಕೆ ಇನ್ನೂ ತುಂಬಾ ಹೊತ್ತಿದೆ. "

ಸೌಭಾಗ್ಯಮ್ಮ ಗಣಪತಿಗೆ ಸರಿಯಾಗಿ ಹೊದಿಸಿ, 'ಶಯ್ಯಾಕಿರಣ'ವನ್ನು ಕಿರಿದು ಮಾಡಿದರು. ಆದರೆ ಇಬ್ಬರಿಗೂ ನಿದ್ದೆ ಬರಲಿಲ್ಲ. ಪಿಸು ಮಾತಿನ ಸಲ್ಲಾಪದಲ್ಲೇ ಬೆಳಕು ಹರಿದಾಗ—

" ಹೀಗೆ ನಿದ್ರೆ ಕೆಟ್ಟರೆ ವೈಗಾಗುತ್ತದೆಯೇ ?"

ಎನ್ನುತ್ತಾ ಎದ್ದುಹೋದರು ಸೌಭಾಗ್ಯಮ್ಮ.

"ಗಣಪತಿ ಪ್ರಸನ್ನನಾಗಬೇಕಾದರೆ ನಿದ್ರೆ, ನೀರು, ಅನ್ನ – ಎಲ್ಲಾ ಮರೆಯಬೇಕಾಗುತ್ತದೇನೋ ! ಅದಕ್ಕೆ ಈಗಿನಿಂದ ಸಿದ್ಧತೆ ! !"

ಎಂದು ಶಾಸ್ತ್ರಿಗಳೂ ಎದ್ದು ನಿತ್ಯಕರ್ಮದಲ್ಲಿ ತೊಡಗಿದರು.

ಏಳು ಗಂಟೆಗೆ ಸರಿಯಾಗಿ ಹಿಂದಿನ ರಾತ್ರಿ ಮಾತು ಕೊಟ್ಟಿದ್ದಂತೆ ಸುದರ್ಶನಯ್ಯಂಗಾರ್ಯರು ಶಾಸ್ತ್ರಿಗಳ ಮನೆಯಲ್ಲಿ ಹಾಜರಾದರು.

"ಶಿಸ್ತು ಅಂದರೆ ನಿನ್ನದೇ ಶಿಸ್ತು ಕಾಣಯ್ಯ !"

ಎಂದು ನಗುತ್ತಾ ಶಾಸ್ತ್ರಿಗಳು ಅವನ ಕೈಗೊಂದು ಕಾಫಿಯ ಬಟ್ಟಲು ಕೊಟ್ಟರು.

"ಈಗತಾನೆ ಮನೆಯಲ್ಲಿ ಎರಡು ಕಪ್ಪು ಕುಡಿದೆ ಮಹರಾಯ ! ಸದ್ಯ ಉಷ್ಣ ಕೆರಳೀತು !"

ಎನ್ನುತ್ತಾ ಸುದರ್ಶನಯ್ಯಂಗಾರ್ಯರು ಅರೆಮನಸ್ಸಿನಿಂದ ಕಾಫಿ ಕುಡಿದು ಮುಗಿಸಿದರು. ಶಾಸ್ತ್ರಿಗಳ ಮನೆಯಲ್ಲಿ ಸೌಭಾಗ್ಯಮ್ಮನವರು ಸೊಗಸಾಗಿ ಕಾಫಿ ಮಾಡುತ್ತಿದ್ದುದರಿಂದ, 'ಬೇಡ'ವೆಂದು ಹೇಳಲು ಸುದರ್ಶನಯ್ಯಂಗಾರ್ಯರಿಗೆ ಸರ್ವಥಾ ಮನಸ್ಸು ಒಪ್ಪುತ್ತಿರಲಿಲ್ಲ—ಚಪಲ !

"ಸರಿ, ಇನ್ನು ಹೊತ್ತಾಯಿತು ನಡಿ"

ಎನ್ನುತ್ತಾ ಶಾಸ್ತ್ರಿಗಳೊಡನೆ ಸುದರ್ಶನಯ್ಯಂಗಾರ್ಯರು ಹೊರಹೊರಟರು. ದಾರಿಯುದ್ದಕ್ಕೂ, ತಾವು ಕಂಡ ಕನಸನ್ನು ವರ್ಣಿಸಿದರು ಸಭಾಪತಿಶಾಸ್ತ್ರಿಗಳು. ಇಬ್ಬರೂ ಮಾತನಾಡುತ್ತಾ ರೈಲ್ವೆ ಸ್ಟೇಷನ್ನಿನ ಬಳಿಗೆ ಬಂದಿದ್ದರು. ಕೂಡಲೇ ದಾರಿ ತಪ್ಪಿದವರಂತೆ ಶಾಸ್ತ್ರಿಗಳು—

"ಇದೇನಯ್ಯಾ, ಈ ದಾರಿಯಲ್ಲಿ ಬರುತ್ತಿದ್ದೀವಲ್ಲಾ ?"

ಎಂದು ಗಾಬರಿಯಿಂದ ಕೇಳಿದರು.

"ಹ್ಞೂಂ, ನಾವು ಹೋಗುತ್ತಿರುವುದು ಮಾವಳ್ಳಿಗಲ್ಲ; ಗುಟ್ಟಹಳ್ಳಿಗೆ !"

"ಯಾಕೆ, ನಿನಗೇನಾದರೂ ಅಲ್ಲಿ ಕೆಲಸವಿದೆಯೇನು ?"

"ನಿನ್ನ ಕೆಲಸಕ್ಕೆ........"

ಶಾಸ್ತ್ರಿಗಳಿಗೆ ಆಶ್ಚರ್ಯವಾಯಿತು.

"ಯಾರಿದ್ದಾರೆ ಸುದರ್ಶನ ಅಲ್ಲಿ ?"

"ಕೃಷ್ಣಮಾಚಾರ್ಯರು !"

" ಅವರೂ ಈ ವಿದ್ಯೆಯನ್ನು ಕಲಿತಿದ್ದಾರೇನು ?"

" ನನಗೆ ಸರಿಯಾಗಿ ತಿಳಿಯದು "

" ಮತ್ತೇಕೆ ಅಲ್ಲಿಗೆ ?"

" ಆ ದಿನ ನಿಮ್ಮ ತಂದೆ ಹೇಳಿದ್ದರಲ್ಲಾ – ಕೃಷ್ಣಮಾಚಾರ್ಯರು ವಾಮಾಚಾರ ಕಲಿಯಲು ಹೋಗಿ ವಿಫಲರಾದರು ಅಂತ...."

" ಹೌದು "

" ಅವರು ಆ ಪ್ರಯತ್ನವನ್ನು ಅಷ್ಟಕ್ಕೇ ಬಿಟ್ಟಿರಲಾರರು ಎಂದು ನನಗನ್ನಿಸುತ್ತದೆ "

" ಹೇಗೆ ಹೇಳುತ್ತೀಯಾ ?"

" ಇತ್ತೀಚೆಗೆ ಅವರು ಯಾವ ಪೌರೋಹಿತ್ಯಕ್ಕೂ ಬರುತ್ತಿಲ್ಲ "

" ಅದಕ್ಕೇ ನಿನಗೆ ಅನುಮಾನ ಬಂತೇನೋ !"

ಶಾಸ್ತ್ರಿಗಳು ನಕ್ಕು ನುಡಿದಾಗ, 'ಹ್ಞಂ' ಎಂದರು ಸುದರ್ಶನಯ್ಯಂಗಾರ್ಯರು.

ಮಿತ್ರರ ಮಾತು ಸಾಗಿದಂತೆ ದಾರಿಯೂ ಸಾಗಿತು.

ಇಬ್ಬರೂ ಗುಟ್ಟಹಳ್ಳಿಯನ್ನು ತಲಪಿ, ಸವಿಾರಪುರದ ಗಲ್ಲಿಯ ಕಡೆ ನಡೆದು, ಕೃಷ್ಣಮಾಚಾರ್ಯರ ಮನೆಯ ಬಳಿಗೆ ಬಂದರು.

ಹೊರಗೆ ಕಟ್ಟಿದ ಹಸುವಿನಿಂದ ಹಾಲು ಕರೆದುಕೊಂಡು, ಆಗತಾನೆ ಒಳಗೆ ಹೋಗಲಿದ್ದ ಆಚಾರ್ಯರ ವೃದ್ಧಪತ್ನಿ ನಾಮಗಿರಿಯಮ್ಮನವರು ಸುದರ್ಶನಯ್ಯಂಗಾರ್ಯರನ್ನು ಗುರುತಿಸಿ, ಸ್ವಾಗತಿಸಿದರು. ಅವರ ಏಕಮಾತ್ರ ಪುತ್ರಿ ಅಲಮೇಲು ಅಂಗಳದಲ್ಲಿ ಚಾಪೆ ಹಾಸಿ, ಒಳಗೆ ಹೋದಳು. ಅಷ್ಟರಲ್ಲಾಗಲೇ 'ಸುದರ್ಶನ ಬಂದಿದ್ದಾನೆ' ಎಂದು ನಾಮಗಿರಿಯಮ್ಮ ಗಂಡನಿಗೆ ಹೇಳುತ್ತಿದ್ದುದು ಗೆಳೆಯರಿಗೆ ಕೇಳಿಸಿತು.

" ಒಳಗೆ ಕೂಡಿಸಿ, ಕಾಫಿ ಕೊಡಿ "

ಎಂದರು ಕೃಷ್ಣಮಾಚಾರ್ಯರು ಒಳಗಿನಿಂದಲೇ.

ಐದು ನಿಮಿಷಗಳ ಬಳಿಕ ನಾಮಗಿರಿಯಮ್ಮ ಕಾಫಿ ತಂದಿತ್ತರು.

" ಬೇಡ ಮಾಮಿ, ಇಷ್ಟು ಹೊತ್ತಿಗಾಗಲೇ ಮೂರು ಸಾರಿಯಾಯಿತು– ಇದು ನಾಲ್ಕನೆಯ ಸಾರಿ........"

" ಇರಲಿ ಕುಡಿಯಪ್ಪ, ಅಪರೂಪಕ್ಕೆ ಬಂದು ಮುಖ ತೋರಿಸುತ್ತೀ !

ಒಂದು ಬಟ್ಟಲು ಕಾಫಿಯಾದರೂ ಕುಡಿಯದೆ ಹೋದರೆ ಹೇಗೆ ?"

ಎಂದರು ನಾಮಗಿರಿಯಮ್ಮ.

ಮಿತ್ರರಿಬ್ಬರೂ ಕಾಫಿ ಕುಡಿದು ಮುಗಿಸಿದರು.

ಹತ್ತು ನಿಮಿಷವಾಯಿತು........ಅರ್ಧ ಗಂಟೆಯಾಯಿತು........

ಕೃಷ್ಣಮಾಚಾರ್ಯರು ಹೊರಗೆ ಬರಲೇ ಇಲ್ಲ.

"ವಾಧ್ಯಾರ್ರು ಏನು ಮಾಡುತ್ತಿದ್ದಾರೆ ಮಾಮಿ ?"

ಹೊರಗಡೆ ಬಂದ ನಾಮಗಿರಿಯಮ್ಮನವರನ್ನು ಕೇಳಿದರು ಸುದರ್ಶನಯ್ಯಂಗಾರ್ಯರು.

"ಅವರು ಬರುವುದಕ್ಕೆ ಇನ್ನೂ ಸ್ವಲ್ಪ ತಡ...."

"ಸ್ನಾನವೋ ? ಪೂಜೆಯೋ ?....ಏನು ಮಾಡುತ್ತಿದ್ದಾರೆ ?"

"ಪೂಜೆ ಮಾಡುತ್ತಿದ್ದಾರಪ್ಪ"

"ಇಷ್ಟು ಹೊತ್ತೆ ?"

"ಆ ಚಕ್ರಪೂಜೆಗೆ ಕೂತರೆ ಎಷ್ಟು ಹೊತ್ತೂ ಅಂತ ಹೇಳೋದಿಕ್ಕಾಗುತ್ತೆ ?"

ಎನ್ನುತ್ತಾ ನಾಮಗಿರಿಯಮ್ಮ ಒಳಗೆ ಹೊರಟು ಹೋದರು.

'ಚಕ್ರಪೂಜೆ' ಎಂದೊಡನೆ, ಸುದರ್ಶನಯ್ಯಂಗಾರ್ಯರಿಗೆ – ಮುನಿತಾಯಪ್ಪ ಹೇಳಿದ 'ಶ್ರೀಚಕ್ರ'ದ ನೆನಪಾಯಿತು. ಸಭಾಪತಿಶಾಸ್ತ್ರಿಗಳೂ ಹಾಗೆಯೇ ಯೋಚಿಸಿದರು.

"ನಿನ್ನ ಊಹೆ ನಿಜವಿದ್ದಹಾಗಿದೆ ಸುದರ್ಶನ"

"ನಿಜವಾದರೆ ನಮಗೆ ತುಂಬಾ ಅನುಕೂಲ"

ಮಿತ್ರರಿಬ್ಬರೂ ಮೌನವಾದರು. ಅವರ ಕಣ್ಣುಗಳು ಗೋಡೆಯ ಮೇಲಿದ್ದ ಚಿತ್ರಪಟಗಳತ್ತ ಹರಿಯಿತು. ಪಟ್ಟೆ ಪಟ್ಟೆ ನಾಮಗಳನ್ನಿಟ್ಟುಕೊಂಡು, ಜರತಾರಿ ಶಾಲು ಹೊದ್ದು, ಕೈಯಲ್ಲಿ ಬೆಳ್ಳಿಯ ಕೋಲು ಹಿಡಿದಿದ್ದ ಸೌಮ್ಯ ಗಂಭೀರ ವ್ಯಕ್ತಿಯ ಚಿತ್ರವೊಂದು ಸುದರ್ಶನಯ್ಯಂಗಾರ್ಯರನ್ನು ಸೆಳೆಯಿತು. ಅವರು ಕುತೂಹಲದಿಂದ ಎದ್ದು ಹೋಗಿ ನೋಡಿದರು. ಅಷ್ಟರಲ್ಲಿ ಕೃಷ್ಣಮಾಚಾರ್ಯರು ಹೊರಗಡೆ ಬಂದರು.

"ಏನು ಸುದರ್ಶನಾ, ತುಂಬಾ ಅಪರೂಪವಾಗಿ !"

"ಈಚೆಗೆ ಅಜ್ಞಾತವಾಸ ಕೈಗೊಂಡಿದ್ದೀರಂತೆ ! ವಿಚಾರಿಸಿಕೊಂಡು

ಹೋಗೋಣ ಅಂತ ಬಂದೆ" ಎಂದರು ಸುದರ್ಶನಯ್ಯಂಗಾರ್ಯರು.

ಆಚಾರ್ಯರು ನಗುತ್ತಾ—

"ವಯಸ್ಸಾಯಿತಪ್ಪ! ಇನ್ನೆಷ್ಟುದಿನ ಈ ದೇಹ ತೇಯಲಿ?" ಎಂದರು.

"ಅದಕ್ಕೋಸ್ಕರವೇ ಈಗ ಕಾಯಕಲ್ಪ ತಯಾರಿಸುತ್ತಿದ್ದೀರೇನೋ!"

"ಅದಾದರೂ ಮಾಡಿದ್ದರೆ ಚೆನ್ನಾಗಿತ್ತು!....ನನ್ನದೆಲ್ಲ ಬರೀ 'ಮಾಯ ಕಲ್ಪನೆ'ಯೇ ಆಗಿದೆ!"

"ಇನ್ನೂ ಸಾಧನೆಯಲ್ಲಿಯೇ ಇದ್ದೀರೋ ಅಥವಾ ಸಿದ್ಧಿ ದೊರಕಿದೆಯೊ?"

"ಸಿದ್ಧಿ!" ವ್ಯಂಗ್ಯವಾಗಿ ನಕ್ಕರು ಆಚಾರ್ಯರು.

"ಈ ಜನ್ಮದಲ್ಲಿ 'ಸಿದ್ಧಿ' ಎಲ್ಲಿ ಬಂತು ಸುದರ್ಶನ? ಸಾಧನೆಯನ್ನೇ ಕೈ ಬಿಡಬೇಕೆಂದಿದ್ದೇನೆ!"

"ಯಾಕೆ, ಈಗಲೇ ಇಷ್ಟು ಬೇಜಾರು ಬಂದಿತೇ?"

"ಸಾಧನೆ--ಸಿದ್ಧಿ ನನ್ನಂತಹ ಪಾಂಶುಲರಿಗಲ್ಲ!"

"ನೀವು ಯಾವ ಚಕ್ರವನ್ನು ಸಾಧನೆ ಮಾಡುತ್ತಿದ್ದೀರಿ?"

"ಮಹಾ ನಾರಾಯಣ ಚಕ್ರ...."

"ಎಷ್ಟು ದಿನಗಳಿಂದ ಪೂಜೆ ಮಾಡುತ್ತಿದ್ದೀರಿ?"

"ಅದನ್ನು ಮಾತ್ರ ಕೇಳಬೇಡ ಸುದರ್ಶನ"

ಬೇಸರದಿಂದ ನುಡಿದರು ಕೃಷ್ಣಮಾಚಾರ್ಯರು.

"ಹ್ಯಾಗೆ ಪೂಜೆ ಮಾಡುತ್ತೀರಿ ವಾಧ್ಯಾರ್ರೇ?"

"ಬಾಪ್ಪ, ನೋಡುವಿಯಂತೆ........"

ಆಚಾರ್ಯರ ಹಿಂದೆಯೇ ಸುದರ್ಶನಯ್ಯಂಗಾರ್ಯರೂ, ಸಭಾಪತಿಶಾಸ್ತ್ರಿಗಳೂ ಪೂಜಾಮಂದಿರದ ಒಳಹೊಕ್ಕರು; ಅಚ್ಚರಿಗೊಂಡರು........

ಪೂಜಾಮಂದಿರ ವಿಶಾಲವಾಗಿತ್ತು. ಸಾಲಿಗ್ರಾಮ ಮತ್ತು ಬೆಳ್ಳಿಯ ನಾಗರುಗಳನ್ನೊಳಗೊಂಡ ಚಿತ್ತದ ಪೆಟ್ಟಿಗೆಯನ್ನಿಟ್ಟಿದ್ದ ಮಂದಾಸನ. ಮುಂದುಗಡೆ ಎರಡು ಬೆಳ್ಳಿಯ ನೀಲಾಂಜನ. ಸನಿಯದಲ್ಲಿಯೇ ತುಳಸೀದಳ ತುಂಬಿದ ಬೆಳ್ಳಿಯ ತಟ್ಟೆ, ತೀರ್ಥ ತುಂಬಿದ ಬೆಳ್ಳಿಯ ಬಟ್ಟಲುಗಳು—ಉದ್ಧರಣೆ ಮತ್ತು ಗಂಧದ ಕಲ್ಲು—ಕೊರಡು ಇದ್ದವು. ಇವುಗಳ ಮುಂದುಗಡೆ, ಒಬ್ಬರು ಓಡಾಡುವಷ್ಟು ಮಾತ್ರ ಸ್ಥಳವನ್ನು ಬಿಟ್ಟು, ಕೋಣೆಯ ತುಂಬ ಒಂದೇ ಒಂದು ದೊಡ್ಡ ಚಕ್ರವನ್ನು ಬೇಗನೆ ಅಳಿಸಿಹೋಗದ ಬಿಳಿಯ ಬಣ್ಣದಲ್ಲಿ

ಬರೆಯಲಾಗಿತ್ತು. ಸ್ವಲ್ಪ ಸ್ವಲ್ಪ ಸ್ಥಳ ಬಿಟ್ಟು ಚದುರಾಕಾರದಲ್ಲಿ ನಾಲ್ಕು ಗೆರೆಗಳನ್ನೆಳೆದು, ಒಂದರೊಳಗೊಂದರಂತೆ ನಾಲ್ಕು ಚದರಗಳನ್ನು ರಚಿಸ ಲಾಗಿತ್ತು. ನಾಲ್ಕು ಗೆರೆಗಳ ನಡುವೆ ಬಿಟ್ಟಿದ್ದ ಸ್ವಲ್ಪ ಸ್ವಲ್ಪ ಸ್ಥಳಗಳಲ್ಲಿ ಗಾಯತ್ರಿ, ಅಷ್ಟಾಕ್ಷರಿ ಮೊದಲಾದ ಹಲವಾರು ಮಂತ್ರಗಳನ್ನು ನಾಲ್ಕು ಕಡೆಯೂ ಬರೆಯಲಾಗಿತ್ತು. ಈ ಚದುರದ ಒಳಮೂಲೆಗಳಲ್ಲಿ ನಾಲ್ಕು ಕಡೆಯೂ 'ಓಂ' ಎಂದು ಬರೆದು, ಅಷ್ಟಾಕ್ಷರಿ-ಗಾಯತ್ರಿ ಸಮ್ಮಿಳನ ಮಂತ್ರ ಗಳನ್ನೂ; ಅಷ್ಟದಿಕ್-ವಂದನಾ ಮಂತ್ರಗಳನ್ನೂ ಬರೆಯಲಾಗಿತ್ತು. ಚದುರದ ನಡುವೆ ಇಪ್ಪತ್ತನಾಲ್ಕು ಸುತ್ತಿನ ಭಾರಿ ಚಕ್ರವನ್ನು ನಿರ್ಮಿಸಲಾಗಿತ್ತು. ಇವುಗಳಲ್ಲಿ ಹನ್ನೆರಡು ಕಿರಿಯ ಸುತ್ತಿನವು; ಉಳಿದ ಹನ್ನೆರಡು ಹಿರಿಯ ಸುತ್ತಿನವು. ಪ್ರತಿಯೊಂದು ಹಿರಿಯ ಸುತ್ತಿನ ನಡುವೆಯೂ ಮಾಲಾವರಣ ಗಳು. ಅವುಗಳಲ್ಲೆಲ್ಲಾ ಬೀಜಾಕ್ಷರಗಳು. ಚಕ್ರದ ನಟ್ಟ ನಡುವೆ ಷಟ್ ಕೋಣವೂ, ಅದರ ನಡುವೆ ಮಾಲಾವರಣವನ್ನೊಳಗೊಂಡ ಎರಡು ಸುತ್ತಿನ ಚಕ್ರವೂ, ಅದರ ಮಧ್ಯದಲ್ಲಿ 'ಓಂ ಅಂ ಮಮ ಸರ್ವಾಭೀಷ್ಟ ಸಿದ್ಧಿಂ ಕುರು ಕುರು ಸ್ವಾಹಾ' ಎಂಬ ಮಂತ್ರವೂ ಬರೆಯಲಾಗಿತ್ತು. ಅಕ್ಷರ ಬರವಣಿಗೆ ಯೆಲ್ಲಾ ದೇವ ನಾಗರಿಲಿಪಿಯಲ್ಲಿಯೇ ಇದ್ದಿತು.

"ಅಬ್ಬಾ ! ಎಷ್ಟು ದೊಡ್ಡ ಚಕ್ರ !!"

ಸಭಾಪತಿಶಾಸ್ತ್ರಿಗಳು ಆಶ್ಚರ್ಯದಿಂದ ನುಡಿದರು.

"ಇದನ್ನು ಬರೆಯುವುದಕ್ಕೆ ಎಷ್ಟು ದಿನ ಹಿಡಿಯಿತು ವಾಧ್ಯಾರ್ರೆ ?"

ಸುದರ್ಶನಯ್ಯಂಗಾರ್ಯರು ಕೇಳಿದರು.

"ಒಂದು ತಿಂಗಳು !"

"ದಿನವಹಿ ಪೂಜೆ ಮಾಡಬೇಕೋ ?"

"ಹ್ಞಾಂ. ತ್ರಿಕಾಲ ಪೂಜೆ—ಬೆಳಗಿನ ಝಾವ ನಾಲ್ಕು ಗಂಟೆಯಿಂದ ಎಂಟರವರೆಗೆ; ಮಧ್ಯಾಹ್ನ ಹನ್ನೆರಡರಿಂದ ನಾಲ್ಕರವರೆಗೆ; ಸಂಜೆ ಆರರಿಂದ ರಾತ್ರಿ ಹತ್ತರವರೆಗೆ. ಆಮೇಲೆ ಎರಡು ಗಂಟೆಗಳ ಕಾಲ ನಾರಾಯಣ ಜಪ. ಎಲ್ಲಾ ಮುಗಿಯುವ ವೇಳೆಗೆ ಹನ್ನೆರಡು ಹೊಡೆಯುತ್ತದೆ."

"ಊಟ ?"

"ದಿನಕ್ಕೊಂದೇ ಸಾರಿ. ಸಂಜೆ ಐದು ಗಂಟೆಗೆ ಊಟಮಾಡಿಬಿಟ್ಟರೆ ಮತ್ತೆ ಮರುದಿನ ಸಂಜೆಯೇ ಆ ಚಿಂತೆ !"

" ತುಂಬಾ ಕಠಿಣವಾದ ಸಾಧನೆ ಕೈ ಗೊಂಡಿದ್ದೀರಿ ! "

" ಇದೇ ಕಠಿಣವೆಂದರೆ, ಇನ್ನೂ ಕಠಿಣವಾದದ್ದನ್ನು ನೋಡಿದರೆ ನೀನೇ ನನ್ನುತ್ತೀಯೋ ? "

" ಅದು ಯಾವುದು ವಾಧ್ಯಾರ್ರೇ ? "

" ಶ್ರೀ ಚಕ್ರ........"

" ಅದೇ ಎಲ್ಲಕ್ಕಿಂತ ದೊಡ್ಡ ಚಕ್ರವೋ ? "

" ಹೌದು. ಅದು ಚಕ್ರರಾಜ ! ಯಂತ್ರರಾಜ ! ಉತ್ತರದೇಶದಲ್ಲಿ 'ಶ್ರೀನಗರ-ಸಾಧನಾ' ಎಂದು ಕರೆಯುತ್ತಾರೆ. 'ರುದ್ರ ಯಾಮಳ ತಂತ್ರ' ದಲ್ಲಿ 'ಮಹಾ ತ್ರಿಪುರ ಸುಂದರೀ ಯಂತ್ರ' ಎಂದು ಉಕ್ತವಾಗಿದೆ. "

" ನಿಮಗೆ ಉಪದೇಶ ಮಾಡಿದ ಗುರುಗಳಿದ್ದಾರೆಯೇ ವಾಧ್ಯಾರ್ರೇ ? "

" ಇಲ್ಲದೆ ಉಂಟೆ ?........ಅಥರ್ವಣವೇದವನ್ನೂ ತಂತ್ರಶಾಸ್ತ್ರಗಳನ್ನೂ ಓದಿದ ಮೇಲೆ, ಸ್ವತಂತ್ರವಾಗಿಯೇ 'ಚಕ್ರಪೂಜೆ' ಪ್ರಾರಂಭಿಸೋಣವೆಂದಿದ್ದೆ. ಆದರೆ, ಗುರುವಿಲ್ಲದ ವಿದ್ಯೆ ಮನಸ್ಸಿಗೆ ನಾಟುವುದಿಲ್ಲವೆಂದು, ಒಬ್ಬ ಮಹಾನು ಭಾವರ ಮರೆಹೊಕ್ಕೆ "

" ಆ ಪುಣ್ಯಪುರುಷರು ಇದೇ ಊರಿನಲ್ಲಿಯೇ ಇದ್ದಾರೆಯೇ ? "

" ಹ್ಞೂ, ಇಲ್ಲೇ-ನಮ್ಮ ಮನೆಯಿಂದ ನಾಲ್ಕನೆಯದೇ ಅವರ ಮನೆ."

" ಅವರು ದೊಡ್ಡ ವಿದ್ವಾಂಸರಿರಬೇಕು ! "

" ಸಕಲ ವಿದ್ಯಾಶಾಸ್ತ್ರ ಪಾರಂಗತರು. ಪರಮ ಸಾತ್ವಿಕ ಜೀವಿಗಳು. ಶುದ್ಧ ತಮಿಳು ಮತ್ತು ಸಂಸ್ಕೃತ-ಈ ಎರಡು ಭಾಷೆಗಳನ್ನು ಬಿಟ್ಟರೆ ಬೇರಾವ ಭಾಷೆಯೂ ಬರುವುದಿಲ್ಲ. ಅದೂ ತಮಿಳು ಭಾಷೆಯನ್ನು ಮನೆಯವರೊಡನೆ ಮಾತ್ರ ಮಾತನಾಡುತ್ತಾರೆ. ಬೇರೆ ಯಾರು ಬಂದರೂ ಸರಿಯೇ-ಸಂಸ್ಕೃತ ದಲ್ಲೇ ಮಾತು ! "

" ಅವರನ್ನು ನೋಡಿಕೊಂಡು ಬರೋಣವೇ ? "

" ಅಗತ್ಯವಾಗಿ "

" ಹಾಗೆಯೇ ಅವರಲ್ಲೊಂದು ವಿಷಯ ಪ್ರಸ್ತಾಪಿಸಬೇಕು "

" ಏನು ? "

" ನನ್ನ ಸ್ನೇಹಿತರು ಗಣಪತಿ ಔಪಾಸನೆ ಕಲಿಯಬೇಕೆಂದಿದ್ದಾರೆ. ಅವರಿಗೆ ಒಬ್ಬ ಗುರು ಬೇಕಾಗಿದ್ದಾರೆ........ "

" ಸುದರ್ಶನ, ಗುರುಗಳು ಈಗ ತುಂಬಾ ವಿರಕ್ತರಾಗಿದ್ದಾರೆ. ಯಾರಿಗೂ ಯಾವುದನ್ನೂ ಅವರು ಉಪದೇಶಿಸುವುದಿಲ್ಲ. ಹೇಳಿ ಕೊಡುವುದಿಲ್ಲ. ಸದಾ ಮೌನ ಧ್ಯಾನದಲ್ಲಿಯೇ ಕಾಲ ಕಳೆಯುತ್ತಾರೆ "

" ನನ್ನ ಸ್ನೇಹಿತರು ಈಗ ತುಂಬಾ ಇಕ್ಕಟ್ಟಿನ ಪ್ರಸಂಗದಲ್ಲಿ ಸಿಕ್ಕಿ ಕೊಂಡಿದ್ದಾರೆ ವಾಧ್ಯಾರ್ರೇ,......."

ಎನ್ನುತ್ತಾ ಸುದರ್ಶನಯ್ಯಂಗಾರ್‍ಯರು, ರುಕ್ಮಿಣಿಯ ಪ್ರಸಂಗವನ್ನೂ, ಭದ್ರಯ್ಯನ ದುಷ್ಟಶಕ್ತಿಯ ಕಿರುಕುಳವನ್ನೂ ಕೃಷ್ಣಮಾಚಾರ್‍ಯರಿಗೆ ವಿವರಿಸಿದರು.

" ಅಯ್ಯೋ ಪಾಪ !........ಈಗ ನಿನ್ನ ಸ್ನೇಹಿತರೇ ಗಣಪತಿ ಔಪಾಸ ನೆಯನ್ನು ಮಾಡಿ, ಭದ್ರಯ್ಯನ ಬಲಭಂಗ ಮಾಡಬೇಕೆಂದು ನಿಶ್ಚಯಿಸಿ ದ್ದಾರೆಯೇ ? "

" ಹೌದು ವಾಧ್ಯಾರ್ರೇ " ಎಂದರು ಸುದರ್ಶನಯ್ಯಂಗ್ಯಾರ್‍ಯರು.

ಕೃಷ್ಣಮಾಚಾರ್‍ಯರು ಸ್ವಲ್ಪ ಹೊತ್ತು ಮೌನವಾಗಿ ಯೋಚಿಸಿದರು.

" ವಾಧ್ಯಾರ್ರೇ, ನೀವು ಹೇಳಿದರೆ ಗುರುಗಳು ಕೃಪೆ ಮಾಡುವುದಿಲ್ಲವೇ?"

" ಒಬ್ಬರ ಕೈಯಲ್ಲಿ ಹೇಳಿಸಿಕೊಂಡು ಮಾಡುವಂತಹ ಸ್ವಭಾವದವ ರಲ್ಲಪ್ಪಾ ಅವರು "

" ಹಾಗಾದರೆ ನಾವು ಬಂದ ಕಾರ್‍ಯ ವ್ಯರ್ಥವೇ ? "

" ಸುದರ್ಶನ, ನನಗೊಂದು ವಿಷಯ ಹೊಳೆದಿದೆ........"

" ಹೇಳಿ, ವಾಧ್ಯಾರ್ರೇ "

" ನಮ್ಮ ಗುರುಗಳು ಸಕಲ ವಿದ್ಯಾ ಪಾರಂಗತರಾದರೂ, ವಾಮಾಚಾರ ವನ್ನಾಗಲಿ–ದಕ್ಷಿಣಾಚಾರವನ್ನಾಗಲಿ ಸಾಧನೆ ಮಾಡಿ, ಸಿದ್ಧಿಸಿಕೊಂಡವರಲ್ಲ. ಆದರೆ ಯಾವುದನ್ನು ಹೇಗೆ ಮಾಡಬೇಕೆಂಬ ವಿಷಯ ಅವರಿಗೆ ಚೆನ್ನಾಗಿ ಗೊತ್ತಿದೆ. ಅವರ ಜೀವನದಲ್ಲಿ–ಇದುವರೆಗೆ ಸಾಧಿಸಿರುವ ಒಂದೇ ಒಂದು ಶಕ್ತಿಯೆಂದರೆ–' ನರಸಿಂಹ ಯಂತ್ರ .' ಅದನ್ನೂ ಈಗ ಅವರು ಹೊಸದಾಗಿ ಮಾಡಿಕೊಡುವುದಿಲ್ಲ. ಹಿಂದೆ ಮಾಡಿದ್ದ ಯಂತ್ರಗಳೇನಾದರೂ ಇದ್ದರೆ, ಅದರಲ್ಲೊಂದನ್ನು ನಿನಗೆ ಕೊಡಿಸುತ್ತೇನೆ. ಆಗಬಹುದೇ ? "

" ಈ ' ನರಸಿಂಹ ಯಂತ್ರ 'ದಿಂದ ಏನು ಪ್ರಯೋಜನ ? "

" ' ನರಸಿಂಹ ಯಂತ್ರ 'ದಿಂದ ಹಲವಾರು ರೀತಿಯ ಸಿದ್ಧಿಗಳನ್ನು ಪಡೆ ಯಬಹುದು. ನಮ್ಮ ಗುರುಗಳು ಪಡೆದಿರುವ ಸಿದ್ಧಿಯಂತೂ ಅಪೂರ್ವವಾ

ದುದು. ಈ ಯಂತ್ರವನ್ನು ಕಟ್ಟಿಕೊಂಡವರ ಬಳಿ ಯಾವ ದುಷ್ಟ ಶಕ್ತಿಯೂ ಸುಳಿಯಲಾರದು. ಪ್ರಬಲಾಕರ್ಷಣೆಯುಳ್ಳ ಶಕ್ತಿಗಳೂ ಸಹ ಯಂತ್ರದಾರಿಯನ್ನು ಬಳಿಗೆ ಸೆಳೆದುಕೊಳ್ಳಬಲ್ಲವೇ ಹೊರತು, ಸ್ಪರ್ಶಿಸಲು ಸಾಧ್ಯವಿಲ್ಲ.... ಈಗ ನೀನು ಹೇಳಿದ ಆ ಭದ್ರಯ್ಯ ನಿನ್ನ ಸ್ನೇಹಿತರ ತಂಗಿಯನ್ನು ತನ್ನ 'ಶಾಕಿನಿ'ಯ ಪ್ರಬಲಾಕರ್ಷಣೆಯ ಶಕ್ತಿಯಿಂದ ತನ್ನ ಮನೆಗೆ ಸೆಳೆದುಕೊಳ್ಳಬಹುದು. ಆದರೆ ಆಕೆಯನ್ನು ಸುಮ್ಮನೆ ಮುಟ್ಟುವುದಕ್ಕೂ ಅವನಿಂದ ಸಾಧ್ಯವಾಗುವುದಿಲ್ಲ. ನರಸಿಂಹನ ಉಗ್ರಜ್ವಾಲೆ ಅವನನ್ನು ಮೂರು ಮಾರು ದೂರದಲ್ಲಿಯೇ ನಿಲ್ಲಿಸುತ್ತದೆ. ಇದರಿಂದ ಮಾನ ರಕ್ಷಣೆಗೆ ಪರಮಾನುಕೂಲ."

"ಸದ್ಯ, ಆ ಯಂತ್ರವನ್ನಾದರೂ ಕೊಡಿಸಿ ವಾಧ್ಯಾರ್‍ರೇ"

"ಸರಿ, ಬನ್ನಿ. ಅವರ ಮನೆಗೇ ಹೋಗೋಣ"

ಎಂದು ಕೃಷ್ಣಮಾಚಾರ್ಯರು ಎದ್ದು, ಗೋಡೆಯ ಕಡೆ ತಿರುಗಿ, ಪಟ್ಟೆ ಪಟ್ಟೆ ನಾಮದ—ಸೌಮ್ಯ ಗಂಭೀರ ಮುಖದ ವ್ಯಕ್ತಿಯ ಭಾವಚಿತ್ರಕ್ಕೆ—'ಅಡಿಯೇನ್ ದಾಸನ್' ಎಂದು ನಮಸ್ಕರಿಸಿದರು.

"ಆ ಫೋಟೋ ಯಾರದ್ದು ವಾಧ್ಯಾರ್‍ರೇ ?"

"ಅವರೇ ನನ್ನ ಗುರುಗಳು – ನರಸಿಂಹ ರಾಮಾನುಜ ಭಟ್ಟಾಚಾರ್ಯ ಎಂದು ಅವರ ಹೆಸರು" ವಾಧ್ಯಾರ್‍ರು ಹೊರಗಡಿಯಿಡುತ್ತಾ ನುಡಿದರು.

ಮೂವರೂ ಗುರು ಮನೆಯನ್ನು ಹೊಕ್ಕಾಗ, ಶ್ರೀ ಭಟ್ಟಾಚಾರ್ಯರು ತಮ್ಮ ಕೊಠಡಿಯಲ್ಲಿ ಕುಳಿತು, ಮುಗುಳುನಗೆ ನಗುತ್ತಾ ಮುದ್ದು ಬಾಲ ಕೃಷ್ಣನ ಭಾವಚಿತ್ರವನ್ನೇ ನಿಟ್ಟಿಸಿ ನೋಡುತ್ತಿದ್ದರು. 'ಅಡಿಯೇನ್ ದಾಸನ್' ಎಂದು ಹೇಳುತ್ತಾ ಕೃಷ್ಣಮಾಚಾರ್ಯರು ದೀರ್ಘದಂಡ ನಮಸ್ಕಾರ ಮಾಡಿದರು.

"ಶುಭಂ....ಶುಭಂ....ಕೃಷ್ಣ ಕೃಷ್ಣ" ಎನ್ನುತ್ತಾ ಶ್ರೀ ಭಟ್ಟಾಚಾರ್ಯರು ಆಗಂತುಕರೆಡೆಗೆ ವಾತ್ಸಲ್ಯದಿಂದ ನೋಡಿದರು.

ಕೃಷ್ಣಮಾಚಾರ್ಯರು ತಾವು ಬಂದ ಸಂಗತಿಯನ್ನು ಬಿನ್ನವಿಸಿಕೊಂಡರು ಸಂಸ್ಕೃತದಲ್ಲಿ.

ಎರಡು ಕ್ಷಣಗಳ ಬಳಿಕ, ಮರು ಮಾತಾಡದೆ ಶ್ರೀ ಭಟ್ಟಾಚಾರ್ಯರು ತಮ್ಮ ಪೂಜಾಗೃಹಕ್ಕೆ ತೆರಳಿ, ಒಂದು ಯಂತ್ರವನ್ನು ತಂದು ಕೃಷ್ಣಮಾಚಾರ್ಯರ ಕೈಗಿತ್ತರು.

ಈ ಸಾರಿ ಮೂವರೂ ದೀರ್ಘದಂಡ ನಮಸ್ಕಾರ ಮಾಡಿದರು.

" ಸನ್ಮಂಗಳಂ ಕುರು....ದೇವ ದೇವ....ಸನ್ಮಂಗಳಂ ಕುರು "

ಶ್ರೀ ನರಸಿಂಹ ರಾಮಾನುಜ ಭಟ್ಟಾಚಾರ್ಯರು ಆಶೀರ್ವದಿಸಿದರು.

ಮೂವರು ತಮ್ಮ ಕಣ್ಣುಗಳಲ್ಲಿ ಕೃತಜ್ಞತೆಯನ್ನು ಸೂಸುತ್ತಾ ಹೊರ ಬಂದರು.

" ವಾಧ್ಯಾರ್ರೇ, ನಿಮ್ಮಿಂದ ತುಂಬ ದೊಡ್ಡ ಉಪಕಾರವಾಯಿತು "

" ನನ್ನದೇನಿದೆ ? ಎಲ್ಲಾ ಶ್ರೀ ಗುರುಕೃಪೆ "

" ನಾವಿನ್ನು ಹೋಗಿ ಬರುತ್ತೇವೆ "

" ಒಳ್ಳೆಯದಪ್ಪ, ಹೋಗಿ ಬನ್ನಿ. ಇವತ್ತು ನೀವು ಪುಣ್ಯ ಮಾಡಿದ್ದಿರಿ. ಮಹಾನುಭಾವರ ದರ್ಶನವಾಯಿತು. ಅವರ ಮಹಾಸಿದ್ಧಿಯ ಯಂತ್ರ ದೊರಕಿತು !" ಎಂದರು ಕೃಷ್ಣಮಾಚಾರ್ಯರು.

ಸುದರ್ಶನಯ್ಯಂಗಾರ್ಯರೂ, ಸಭಾಪತಿಶಾಸ್ತ್ರಿಗಳೂ ಕೃತಜ್ಞತೆಯಿಂದ ಗಂಭೀರ ನಗೆ ಬೀರಿ ಬೀಳ್ಕೊಂಡರು.

ಇಬ್ಬರೂ ಚಾಮರಾಜಪೇಟೆಯವರೆಗೂ ನಡೆದು ಬಂದು, ಅಲ್ಲಿಂದ ಬಸ್ಸು ಹತ್ತಿ ಮಲ್ಲೇಶ್ವರ ಸೇರಿದರು.

" ನಿನ್ನೆ ರಾತ್ರಿ ನಾವು ನಿಶ್ಚಯಿಸಿದ್ದೇನು ? ಇವತ್ತು ಮಾಡಿದ್ದೇನು ?"

ಅದು ಸಭಾಪತಿಗಳ ಪ್ರಶ್ನೆ.

" ಎಲ್ಲ ಅನಿರೀಕ್ಷಿತ – ಸಭಾಪತಿ " ಎಂದರು ಸುದರ್ಶನಯ್ಯಂಗಾರ್ಯರು.

" ಹೇಗೋ, ಅಂತೂ ನಮಗೆ ದೊಡ್ಡ ಉಪಕಾರವಾಯಿತಲ್ಲ !"

" ನೋಡಿದೆಯಾ, ಎಂತೆಂತಹ ಜನರಿರುತ್ತಾರೆ—ಈ ಲೋಕದಲ್ಲಿ !"

" ಮಹಾನುಭಾವರು ಎಲ್ಲರ ಕಣ್ಣಿಗೂ ಬೀಳುತ್ತಾರೆಯೇ ಸುದರ್ಶನ ? ಅಂತಹವರ ದರ್ಶನ ಪಡೆಯುವುದಕ್ಕೇ ತುಂಬಾ ಪುಣ್ಯ ಮಾಡಿರಬೇಕು "

" ಈಗ ನಿನಗೆ ಸ್ವಲ್ಪ ನೆಮ್ಮದಿಯಾಗಿದೆಯಲ್ಲವೆ ?"

" ಹೌದಪ್ಪ. ಇನ್ನು ರುಕ್ಕು ಎಲ್ಲಿಗೆ ಹೋದರೂ ಪರವಾಗಿಲ್ಲ. ಅವಳ ಶೀಲಭಂಗವಾಗುವುದೆಂಬ ಅಂಜಿಕೆ ಇನ್ನಿಲ್ಲ....ಹಾಗೆಂದು ಅವಳನ್ನು ಅಲಕ್ಷಿಸಿ ಮನೆಯಿಂದ ಹೊರಗೆ ಬಿಟ್ಟು ಬಿಡುವುದಿಲ್ಲ !"

" ಸಭಾಪತಿ, ನಿಮ್ಮ ಎಚ್ಚರಿಕೆಯಲ್ಲಿ ನೀವು ಇದ್ದೇ ಇರಬೇಕು ಎಂಬುದನ್ನು ಮಾತ್ರ ಎಂದೆಂದಿಗೂ ಮರೆಯಬೇಡ "

ಎಂದರು ಸುದರ್ಶನಯ್ಯಂಗಾರ್ಯರು.

ಬಸ್ಸು ಮಲ್ಲೇಶ್ವರ ಸೇರಿದಾಗ, ಗೆಳೆಯರಿಬ್ಬರೂ ಇಳಿದು ತಮ್ಮ ತಮ್ಮ ಮನೆಗಳತ್ತ ಹೊರಟರು.

" ಸಾಯಂಕಾಲ ವೈದೇಹಮ್ಮನವರನ್ನು ಕರೆದುಕೊಂಡು ಬಾ ಆಮೇಲೆ ನಾವಿಬ್ಬರೂ ಮಾವಳ್ಳಿಗೆ ಹೋಗಿ ಬರೋಣ "

ಎಂದು ಕೂಗಿ ಹೇಳಿದರು ಸಭಾಪತಿಶಾಸ್ತ್ರಿಗಳು. ಅವರು ಮನೆಗೆ ಬಂದಾಗ, ಶಂಕರಶಾಸ್ತ್ರಿಗಳು ಆಗತಾನೆ ಪೂಜಾಮಂದಿರವನ್ನು ಹೊಕ್ಕರು. ಗಣೇಶ ಶಾಲೆಗೆ ಹೋಗಿದ್ದ. ಸೌಭಾಗ್ಯಮ್ಮನವರೂ ಕಮಲಮ್ಮನವರೂ ಅಡಿಗೆಮನೆ ಸೇರಿದ್ದರು. ಗೂಡಿನಲ್ಲಿದ್ದ ಅಲಾರಂ ಗಡಿಯಾರ ಹತ್ತೂವರೆ ತೋರಿಸುತ್ತಿತ್ತು.

" ರುಕ್ಮಿಣೀ...." ಸಭಾಪತಿಶಾಸ್ತ್ರಿಗಳು ಕೂಗಿದರು.

ಕೋಣೆಯಲ್ಲಿ ಕುಳಿತು ಯಾವುದೋ ಪುಸ್ತಕವೊಂದನ್ನು ಓದುತ್ತಿದ್ದ ರುಕ್ಮಿಣಿ ಅಣ್ಣನ ಕರೆ ಕೇಳಿ, ಅಂಗಳಕ್ಕೆ ಓಡಿಬಂದಳು.

" ಸ್ನಾನ ಆಯಿತೇನಮ್ಮ ?"

" ಹ್ಞು "

" ಇನ್ನೂ ಬಿಸಿ ನೀರಿದೆಯೋ ?"

" ಇದೆ "

" ಸರಿ, ಸೌಭಾಗ್ಯೂನ ಕರೆದು, ಒಳ ಅಂಗಳದಲ್ಲೇ ಈಶ್ವರನ ಫೋಟೋ ಇಟ್ಟು, ಪೂಜೆಗೆ ಸಿದ್ಧ ಮಾಡು ಅಂತ ಹೇಳು "

ಎಂದು ಹೇಳಿ ಶಾಸ್ತ್ರಿಗಳು ಸ್ನಾನ ಮಾಡಿಬರಲು ಹೋದರು.

ಗಂಡನ ಮಾತಿನಂತೆ ಸೌಭಾಗ್ಯಮ್ಮನವರು ಪೂಜಾಸಿದ್ಧತೆ ಮಾಡ ತೊಡಗಿದರು.

" ಅಪ್ಪ ಒಂದು ಕಡೆ — ಮಗ ಒಂದು ಕಡೆ ಪೂಜೆಗೆ ಕುಳಿತುಬಿಟ್ಟರೆ ವೈದಿಕರ ಮನೆ ಲಕ್ಷಣವಾಗಿರುತ್ತೆ ಕಣೆ ಸೌಭಾಗ್ಯ ! "

ಎಂದು ಕಮಲಮ್ಮನವರು ನಗೆಯಾಡಿದರು.

ಸ್ನಾನ ಮಾಡಿ ಬಂದ ಶಾಸ್ತ್ರಿಗಳು —

" ಇನ್ನೂ ಬಿಸಿ ನೀರಿದೆ. ನೀನೂ ಇನ್ನೊಂದು ಸಾರಿ ಸ್ನಾನ ಮಾಡಿ, ಮಡಿ ಸೀರೆ ಇದ್ದರೆ ಉಟ್ಕೊ " ಎಂದು ರುಕ್ಮಿಣಿಗೆ ಹೇಳಿದರು.

ಅಣ್ಣನ ಮಾತಿಗೆ ಪ್ರತಿ ನುಡಿಯದೆ, ಆಕೆ ಬಚ್ಚಲು ಮನೆಗೆ ಹೋದಳು.

" ಅಡಿಗೆ ಆಯಿತೇ ಸೌಭಾಗ್ಯ? "

" ಆಗುತ್ತಾ ಇದೆ ಅಂದ್ರೆ "

" ಬೇಗ ಆದರೆ, ಒಂದಿಷ್ಟು ಹೊಟ್ಟೆಗೆ ಹಾಕಿಕೊಂಡು, ಹಾಯಾಗಿ ಮಲಗಿಬಿಡಬೇಕು. ನಿದ್ರೆ ಬರುವಹಾಗಿದೆ ".

" ನಾರಾಯರು ಪೂಜೆಗೆ ಕುಳಿತರೆ ಏಳುವುದು ಎಷ್ಟುಹೊತ್ತಿಗೋ ! "

" ಅರ್ಧಗಂಟೆಗೆಲ್ಲಾ ಮುಗಿಸಿಬಿಡುತ್ತೇನೆ........ಇವತ್ತು ಒಬ್ಬರು ಪುಣ್ಯಾತ್ಮರ ಹತ್ತಿರ ಹೋಗಿ, ' ನರಸಿಂಹ ಯಂತ್ರ ' ತಂದಿದ್ದೇನೆ. ಅದಕ್ಕೆ ಪೂಜೆ ಮಾಡಿ, ರುಕ್ಮಿಣಿಯ ತೋಳಿಗೆ ಕಟ್ಟಿಬಿಟ್ಟರೆ ನನ್ನ ಕೆಲಸ ಮುಗಿಯಿತು. "

" ಸದ್ಯ, ಅವಳ ಗ್ರಹಚಾರ ತೊಲಗಿದಹಾಗೆ ತಾನೆ ? "

" ಇಲ್ಲ ಸೌಭಾಗ್ಯ. ಈ ಯಂತ್ರ ಅವಳ ಶೀಲ ರಕ್ಷಣೆಗೆ ಮಾತ್ರ ಸಹಕಾರಿ " ಎಂದು ಶಾಸ್ತ್ರಿಗಳು ' ನರಸಿಂಹಯಂತ್ರ 'ದ ಗುಣಗಳನ್ನು ಪತ್ನಿಗೆ ವಿವರಿಸಿದರು.

" ದೇವರು ಎಂದು ಕಣ್ಣೆತ್ತಿ ನೋಡುತ್ತಾನೆಯೋ ? ಅವತ್ತೇ ಅವಳ ಪೀಡೆ ಪರಿಹಾರ. ಪಾಪ, ವಯಸ್ಸು ಬಂದ ಹುಡುಗಿಗೆ ಬರಬಾರದು ; ಬಂದು ಅಮರಿಕೊಂಡಿತಲ್ಲ ! "

ವಿಷಾದದಿಂದ ಕುಗ್ಗಿದ ದನಿಯಲ್ಲಿ ನುಡಿದರು ಸೌಭಾಗ್ಯಮ್ಮ. ಅವರ ಮುಖ ಕಳೆಗೊಂದಿತ್ತು.

" ಸಾಯಂಕಾಲಕ್ಕೆ ನಿನ್ನ ಸ್ನೇಹಿತನು ಬರುತ್ತಾರೆ ಕಣೇ !........ ವೈದೇಹಮ್ಮನವರು ಬರುತ್ತಾರೆ ! "

" ನಿಜವೇ ಅಂದ್ರೆ ? "

" ಹ್ಞುಂ. ಪಾಪ ಅವರಿಗೆ ಒಬ್ಬರೇ ಇದ್ದು ಬೇಜಾರಾಗಿದೆ. ಕರೆದು ಕೊಂಡು ಬಾ ಎಂದು ಸುದರ್ಶನನಿಗೆ ಹೇಳಿದ್ದೇನೆ "

" ಪಾಪ ! ಬರಲೀಂದ್ರೆ. ಇವತ್ತು ಶುಕ್ರವಾರ. ಚಿನ್ನದಂತಹ ಗುಣವತಿ ಲಕ್ಷ್ಮಿಯ ಹಾಗೆ ನಮ್ಮ ಮನೆಗೆ ಬಂದರೆ, ನಿಜವಾಗಿಯೂ ಅದೇ ಒಂದು ದೊಡ್ಡ ಭಾಗ್ಯ ? "

ಪತ್ನಿಯ ಮೃದು ಹೃದಯವನ್ನು ಕಂಡು ಶಾಸ್ತ್ರಿಗಳ ಮನಸ್ಸೂ ಅರಳಿತು. ಅಷ್ಟರಲ್ಲಿ ರುಕ್ಮಿಣಿ ಸಿದ್ಧಳಾಗಿ ಬಂದಳು.

" ಸೌಭಾಗ್ಯು, ನೀನೂ ಮಡಿಯಲ್ಲಿಯೇ ಇದ್ದೀತಾನೆ? "

" ಹ್ಞಂ "

" ಹಾಗಾದರೆ, ರುಕ್ಕೂ ಜೊತೇಲೇ ಕೂತುಕೊಂಡಿರು. "

" ಒಂದು ನಿಮಿಷ ತಾಳಿ ಅತ್ತೆಮ್ಮನವರು ಏನು ಮಾಡುತ್ತಿದ್ದಾರೋ ನೋಡಿ, ಅವರಿಗೆ ಹೇಳಿ ಬರುತ್ತೇನಿ "

ಅಡಿಗೆ ಮನೆಯ ಕಡೆ ತೆರಳಿದ ಸೌಭಾಗ್ಯಮ್ಮ ಬೇಗನೆ ಹೊರಗೆ ಬಂದು, ರುಕ್ಮಿಣಿಯ ಜೊತೆಯಲ್ಲಿ ಕುಳಿತರು. ಸಭಾಪತಿ ಶಾಸ್ತ್ರಿಗಳಪೂಜೆ ಆರಂಭವಾಯಿತು. ಅವರ ಬಾಯಿಂದ ಮಂಜುಳ ಮಂತ್ರಘೋಷ ರವರವನೆ ಹರಿದು ಹೋಯಿತು. ಜೊತೆಗೇ ಉಪಚಾರಗಳೂ ಸಂದವು. ಅರ್ಧಗಂಟೆಯಲ್ಲಿ ಮುಗಿಸುತ್ತೇನೆಂದಿದ್ದ ಷೋಡಶೋಪಚಾರ ಪೂಜೆಯನ್ನು ಹನ್ನೆರಡು ಗಂಟೆಗೆ ಸರಿಯಾಗಿ ಮುಗಿಸಿದರು.

" ಸೌಭಾಗ್ಯು ಈ ಯಂತ್ರವನ್ನು ರುಕ್ಕುವಿನ ಎಡತೋಳಿಗೆ ಕಟ್ಟಿ, ಬಲವಾಗಿ ಗಂಟುಹಾಕು "

ಎಂದರು ಶಾಸ್ತ್ರಿಗಳು. ಸೌಭಾಗ್ಯಮ್ಮ ಹಾಗೆಯೇ ಮಾಡಿದರು.

" ಸರಿ ಇನ್ನು ಇಲ್ಲಿಯ ಕೆಲಸ ಮುಗಿದಹಾಗೆ. ಇನ್ನು ಎಲೆಹಾಕಿಬಿಡು. ಗಣಪತಿಯೂ ಬಂದಿದ್ದಾನೆ. ನಾನೂ — ನನ್ನ ಮಗನೂ ಜೊತೆಯಲ್ಲಿ ಕೂತು ಊಟ ಮಾಡಿಬಿಡುತ್ತೇವೆ "

" ಇವತ್ತು ನನಗೂ ನನ್ನ ಮಗನ ಜೊತೆಯಲ್ಲಿ ಕೂತು, ಊಟ ಮಾಡಬೇಕು ಅನ್ನಿಸುತ್ತದೆ! ಅವನ ಪಕ್ಕದಲ್ಲೇ ನನಗೂ ಎಲೆ ಹಾಕಿಬಿಡಮ್ಮಾ "

ಎನ್ನುತ್ತಾ ಪೂಜಾಮಂದಿರದಿಂದ ಹೊರಬಂದ ಶಂಕರಶಾಸ್ತ್ರಿಗಳು ನುಡಿದರು. ಆ ಮಾತು ಕೇಳಿ ಎಲ್ಲರಿಗೂ ನಗು ಬಂದಿತು. ಸ್ವಲ್ಪ ಹೊತ್ತಿನ ಬಳಿಕ ಹೊರಗೆ ಬಂದ ಕಮಲಮ್ಮನವರು, ತಂದೆ — ಮಗ — ಮೊಮ್ಮಗ ಒಟ್ಟಿಗೇ ಊಟಕ್ಕೆ ಕುಳಿತುದನ್ನು ಕಂಡು ಅಚ್ಚರಿಗೊಂಡರು.

" ಇವತ್ತು ಆಕಾಶದಲ್ಲಿ ಮೋಡ ಇದೆಯೇನೇ ಸೌಭಾಗ್ಯು? "

" ಇಲ್ಲ ಅತ್ತೆಮ್ಮ "

" ಮತ್ತೆ ಮಳೆ ಬರಬೇಕಲ್ಲಾ! ಹ್ಯಾಗೆ ಬರುತ್ತೆ? "

— ಎಂದು ನಕ್ಕರು ಕಮಲಮ್ಮ.

"ಹ್ಞ ಹ್ಞು, ಬರುತ್ತೇ ಕಣೇ ಬರುತ್ತೆ ಮಳೆ! ನನ್ನ ಮಗ — ಮೊಮ್ಮಗನ ಜೊತೆಯಲ್ಲಿ ಊಟಮಾಡೋದು ನೋಡಿ, ನಿನಗೆ ಹೊಟ್ಟೆಕಿಚ್ಚು ಕಣೇ! ಆ ಕಿಚ್ಚು ಆರೋದಿಕ್ಕೆ ಮಳೆ ಬರದಿದ್ದರೆ ಹ್ಯಾಗೆ ಹೇಳು?"

— ಹೆಂಡತಿ ಬಿಟ್ಟ ಬಾಣವನ್ನು ಅವರಿಗೇ ಹಿಂತಿರುಗಿಸಿಬಿಟ್ಟರು ಶಂಕರಶಾಸ್ತ್ರಿಗಳು ನಗುತ್ತಾ.

ಮಾತಿನ ಚಟಾಕಿ ಹಾರಿಸುತ್ತಾ, ನಗುನಗುತ್ತಾ, ಮೂವರೂ ಊಟ ಮುಗಿಸಿದರು.

ಸಭಾಪತಿಶಾಸ್ತ್ರಿಗಳು ತಮ್ಮ ಕೋಣೆಗೆ ಹೋಗಿ ಮಲಗಿಕೊಂಡರು. ಸಂಜೆಗೆ ವೈದೇಹಮ್ಮನವರೊಡನೆ ಬಂದ ಸುದರ್ಶನಯ್ಯಂಗಾರ್ಯರು ಎಬ್ಬಿಸಿದಾಗಲೇ ಅವರಿಗೆ ಎಚ್ಚರ.

"ಏನಯ್ಯಾ, ಈಚೆಗೆ ನೀನು ಕುಂಭಕರ್ಣನಾಗಿಬಿಟ್ಟೆ!"

ಎಂದು ನಕ್ಕರು ಸುದರ್ಶನಯ್ಯಂಗಾರ್ಯರು

"ರಾತ್ರಿ ಸರಿಯಾಗಿ ನಿದ್ರೆ ಮಾಡಲಿಲ್ಲ ಸುದರ್ಶನ"

ಎನ್ನುತ್ತಾ ಶಾಸ್ತ್ರಿಗಳು ಮುಖ ತೊಳೆಯಲು ಹೋದರು.

ಸೌಭಾಗ್ಯಮ್ಮನವರಿಗಂತೂ ತುಂಬಾ ಸಂತೋಷವಾಗಿತ್ತು–ವೈದೇಹಮ್ಮನವರನ್ನು ಕಂಡು ಅವರನ್ನು ಅಡಿಗೆಮನೆಯಲ್ಲೇ ಕೂಡಿಸಿಕೊಂಡು ಉಪಚರಿಸುತ್ತಾ, ಮಾತನಾಡುತ್ತಾ ಕುಳಿತುಬಿಟ್ಟರು ಸೌಭಾಗ್ಯಮ್ಮ.

"ವಿದುರಾಶ್ವತ್ಥಕ್ಕೆ ಹೋಗಿ ಬಂದಿರಾ ವೈದೇಹಮ್ಮ?"

"ಹೋಗಿ–ಅಶ್ವತ್ಥ ಪ್ರದಕ್ಷಿಣೆ ಮಾಡಿ ಬಂದೆನಮ್ಮ"

"ನಂಜನಗೂಡಿನ ನಂಜುಂಡೇಶ್ವರನಿಗೆ ಹರಿಸಿಕೊಂಡಿದ್ದರೆ ಚೆನ್ನಾಗಿತ್ತು"

"ಅದನ್ನೂ ಮಾಡಿದ್ದೇನೆ ತಾಯಿ....ಬೆಲ್ಲದ ತೂಕದ ಹರಕೆ ಹೊತ್ತಿದ್ದೇನೆ"

"ಇಲ್ಲೊಬ್ಬರು ಪಂಡಿತರಿದ್ದಾರೆ ವೈದೇಹಮ್ಮ. ಗರ್ಭ ನಿಲ್ಲುವುದಕ್ಕೆ ಒಳ್ಳೆ ಔಷಧಿ ಕೊಡುತ್ತಾರಂತೆ. ವಿಚಾರಿಸಿ ನೋಡಬೇಕು."

"ಇಲ್ಲ ಸೌಭಾಗ್ಯಮ್ಮ, ನನಗೇನೋ ನಂಬಿಕೆಯಿಲ್ಲ. ದೇವರು ನನಗೆ ಮಕ್ಕಳ ಸುಖ ಕೊಡುವುದಿಲ್ಲ. ಇಷ್ಟೇ ನನ್ನ ಹಣೆಯ ಬರಹ"

"ಇಷ್ಟು ನಿರಾಸೆಪಟ್ಟರೆ ಹೇಗೆ ವೈದೇಹಮ್ಮ?"

"ನಿರಾಸೆ ಪಡದೆ ಆಸೆ ಇಟ್ಟುಕೊಳ್ಳುವುದಕ್ಕೆ ಯಾವ ಆಧಾರವಿದೆ

ತಾಯಿ ? ಒನಕೆಗೆ ಆದ ಹಾಗೆ ನನಗೂ ವಯಸ್ಸಾಯಿತು. ಮಕ್ಕಳಾಗುತ್ತವೆ ಅಂತ ಇನ್ನೂ ಆಸೆ ಇಟ್ಟುಕೊಂಡು, ಕಾದು ಕೂತರೆ, ನೋಡುವವರು ನಗುವುದಿಲ್ಲವೇನಮ್ಮ ?"

ಅವರ ಮಾತಿಗೆ ಹೇಗೆ ಉತ್ತರಿಸಿ, ಸಮಾಧಾನ ಹೇಳಬೇಕೆಂಬುದೇ ತೋಚದೆ ಸುಮ್ಮನಾದರು ಸೌಭಾಗ್ಯಮ್ಮ.

" ಅತ್ತಿಗೆ, ಅಣ್ಣನಿಗೆ ಕಾಫಿ ಕೊಡುವುದಿಲ್ಲವೆ ?"

" ಇನ್ನೂ ಅವರು ಮಲಗೇ ಇದ್ದರಲ್ಲ – ಅದಕ್ಕೋಸ್ಕರ ಸುಮ್ಮನಿದ್ದೇನಮ್ಮ." ಎನ್ನುತ್ತಾ ಸೌಭಾಗ್ಯಮ್ಮ ಎರಡು ಬೆಳ್ಳಿಯ ತಟ್ಟೆಗಳಲ್ಲಿ ಉಪ್ಪಿಟ್ಟು, ಹೀರೇಕಾಯಿ ಬೋಂಡ, ರವೆ ಉಂಡೆಗಳನ್ನಿಟ್ಟು ರುಕ್ಮಿಣಿಯ ಕೈಗಿತ್ತರು.

" ಇದನ್ನು ಕೊಟ್ಟು ಬಾಮ್ಮ. ಆಮೇಲೆ ಕಾಫಿ ಕೊಡುತ್ತೇನೆ"

" ಉಪ್ಪಿಟ್ಟು ತುಂಬಾ ಚೆನ್ನಾಗಿ ಮಾಡಿದ್ದೀರಿ ಸೌಭಾಗ್ಯಮ್ಮ"

ಎಂದರು ವೈದೇಹಮ್ಮ.

" ವೈದೀಕರ ಮನೆಯ ಉಪ್ಪಿಟ್ಟನ್ನು ಹೊಗಳುತ್ತೀರಲ್ಲಾ ! ಅದರಲ್ಲೇನು ಮಣವಿದೆಯೆ–ಗುಣವಿದೆಯೆ ?"

" ಎಲ್ಲಾ ಇದೆಯಮ್ಮ. ಎಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ಕೈ ಅಮೃತ ಬಿದ್ದಿದೆಯಲ್ಲಾ ಸೌಭಾಗ್ಯಮ್ಮ !"

ಎಂದು ಮೃದುವಾಗಿ ನಕ್ಕರು ವೈದೇಹಮ್ಮ. ಸೌಭಾಗ್ಯಮ್ಮ ಎರಡು ಬಟ್ಟಲಿನಲ್ಲಿ ಕಾಫಿ ಬಗ್ಗಿಸಿ ರುಕ್ಕಮ್ಮನ ಕೈಗಿತ್ತು, ತನ್ನ ಗಂಡನಿಗೂ, ಸುದರ್ಶನ ಯ್ಯಂಗಾರ್ಯರಿಗೂ ಕೊಟ್ಟು ಬರಲು ಹೇಳಿದರು.

" ಸೌಭಾಗ್ಯಮ್ಮ, ನಿಮಗೊಂದು ಮಾತು ಹೇಳಬೇಕೂಂತ ಬಹಳ ದಿವಸದಿಂದ ಆಸೆ, ಆದರೆ ಅವಕಾಶವೇ ಸಿಕ್ಕಲಿಲ್ಲವಲ್ರೀ !"

" ಈಗ ಹೇಳಿ ವೈದೇಹಮ್ಮ"

" ನೀವು ಖಂಡಿತವಾಗಿಯೂ ನಡೆಸಿಕೊಡುತ್ತೀನಿ ಅಂದರೆ ಹೇಳುತ್ತೀನಮ್ಮ"

" ನಾನೇ ?" ಆಶ್ಚರ್ಯದಿಂದ ಕೇಳಿದರು ಸೌಭಾಗ್ಯಮ್ಮ.

" ಹೌದು ತಾಯಿ .... ನೀವೇ ! ನಿಮ್ಮ ಯಜಮಾನರಿಗೆ ಹೇಳಿ, ಹೇಗಾದರೂ ನಡೆಸಿಕೊಡಬೇಕು "

" ನಡೆಸಿಕೊಡುವವನು ಭಗವಂತನಮ್ಮ. ಆಗಲಿ ಹೇಳಿ "

"ನನ್ನ ಮಾತು ತೆಗೆದುಹಾಕಬಾರದು ಸೌಭಾಗ್ಯಮ್ಮ"

"ಇಲ್ಲ–ಹೇಳಿ"

"ವಂಶ ಇಷ್ಟಕ್ಕೇ ನಿಂತು ಹೋಯಿತಲ್ಲಾ ಅಂತ ನಮ್ಮ ಯಜಮಾನರು ತುಂಬಾ ಕೊರಗುತ್ತಿದ್ದಾರೆ. ನನಗೂ ಅದೇ ಕೊರಗು. ಹಳ್ಳಿಯಲ್ಲಿರುವ ನಮ್ಮ ಮಾವನವರಿಗೂ ಸಹ ಮೊಮ್ಮಕ್ಕಳಿಲ್ಲದ ಚಿಂತೆಯೇ ಆಗಿದೆ....ಅದಕ್ಕೋಸ್ಕರ ನೀವು ನಿಮ್ಮ ಯಜಮಾನರಿಗೆ ಹೇಳಿ, 'ಅವರ'ನ್ನು ಬೇರೆ ಮದುವೆಯಾಗಲು ಒಪ್ಪಿಸಬೇಕು."

"ವೈದೇಹಮ್ಮಾ, ನೀವು ಸಾಮಾನ್ಯ ಹೆಂಗಸಲ್ಲ ಕಾಣ್ರೀ. ಸಾಕ್ಷಾತ್ ದೇವತೆ....ದೇವತೆ...."

ಉದ್ವಿಗ್ನರಾಗಿ ನುಡಿದ ಸೌಭಾಗ್ಯಮ್ಮ ವೈದೇಹಮ್ಮನವರನ್ನು ಪ್ರೇಮಾತಿಶಯದಿಂದ ಅಪ್ಪಿಕೊಂಡು ಬಿಟ್ಟರು. ಅವರ ಕಣ್ಣುಗಳು ತುಂಬಿ ತುಳುಕಿದವು. 'ವೈದೇಹಮ್ಮನವರಿಗಿರುವಂತಹ ವಿಶಾಲ ಮನೋಭಾವ ಎಲ್ಲ ಹೆಣ್ಣುಗಳಿಗೂ ಇದ್ದರೆ ಈ ಭೂಮಿಯೇ ಸ್ವರ್ಗ'–ಎಂದು ಅವರ ಮನಸ್ಸು ಮೌನವಾಗಿ ನುಡಿಯಿತು.

ಅಷ್ಟರಲ್ಲಿ ಸಭಾಪತಿಶಾಸ್ತ್ರಿಗಳು ಅತ್ತ ಸುಳಿದರು.

"ಸೌಭಾಗ್ಯ, ವೈದೇಹಮ್ಮನವರು ಇಲ್ಲೇ ಇರಲಿ. ನಾವು ಹೀಗೇ ತಿರುಗಾಡಿಕೊಂಡು ಎಂಟು ಗಂಟೆಗೆ ಬರುತ್ತೇವೆ."

ಎನ್ನುತ್ತಾ ಶಾಸ್ತ್ರಿಗಳು ಹೊರಡಲನುವಾದರು.

"ಸ್ವಲ್ಪ ಈ ಕಡೆ ಬರುತ್ತೀರಾ ಅಂದ್ರೆ...."

ಗಂಡನನ್ನು ಹಿತ್ತಿಲು ಬಾಗಿಲಿನ ಕಡೆಗೆ ಕರೆದುಕೊಂಡು ಹೋಗಿ, ಅವರ ಕಿವಿಗೆ ವೈದೇಹಮ್ಮನವರು ಹೇಳಿದ ಮಾತನ್ನುಹಾಕಿದರು ಸೌಭಾಗ್ಯಮ್ಮ.

ಶಾಸ್ತ್ರಿಗಳು ಹೌಹಾರಿದರು!

"ಎಲ್ಲಾದರೂ ಉಂಟೆ ಸೌಭಾಗ್ಯ? ಸುದರ್ಶನ ಖಂಡಿತವಾಗಿಯೂ ಎರಡನೆ ಮದುವೆಗೆ ಒಪ್ಪುವುದಿಲ್ಲ."

"ಹೇಗಾದರೂ ಮಾಡಿ ಒಪ್ಪಿಸಿ ಅಂತ ಹಟ ಹಿಡಿದಿದ್ದಾರೆ ವೈದೇಹಮ್ಮ"

"ನನಗೇನೋ ನಂಬಿಕೆಯಿಲ್ಲ. ಆಗಲಿ, ಹೇಳಿ ನೋಡುತ್ತೇನೆ"

ಎನ್ನುತ್ತಾ ಸಭಾಪತಿಶಾಸ್ತ್ರಿಗಳು ಹೊರಗೆ ಬಂದರು. ಮತ್ತೆ ಏನೋ ನೆನಪು ಮಾಡಿಕೊಂಡವರಂತೆ ಬಂದು—

"ರುಕ್ಮೂನ ಹುಷಾರಾಗಿ ನೋಡಿಕೋ ಸೌಭಾಗ್ಯ. ನಾನು ಬರುವುದು ತಡವಾದರೆ, ಅವಳನ್ನು ಒಂಬತ್ತು ಗಂಟೆಗೇ ಕೋಣೆಯಲ್ಲಿ ಕೂಡಿ ಬೀಗ ಹಾಕಿ ಬಿಡು....ಇಲ್ಲದಿದ್ದರೆ ಅನರ್ಥವಾದೀತು"

ಎಂದು ಎಚ್ಚರಿಸಿದರು. ಅನಂತರ ಸುದರ್ಶನಯ್ಯಂಗಾರ್ಯರೊಡನೆ ಹೊರಟು, ಬಸ್ಸು ಹತ್ತಿ, ಮಾವಳ್ಳಿ ಸೇರಿದರು.

"ಇಷ್ಟು ಹೊತ್ತಿನಲ್ಲಿ ಮುನಿತಾಯಪ್ಪ ಮನೆಯಲ್ಲಿ ಇರುತ್ತಾನೆಯೋ ಇಲ್ಲವೋ ?" ಸುದರ್ಶನಯ್ಯಂಗಾರ್ಯರು ಸಂಶಯದಿಂದ ನುಡಿದರು.

"ಹೇಗೂ ಬಂದಿದ್ದಾಯಿತಲ್ಲ. ನೋಡಿಬಿಡೋಣ ಬಾ"

ಮಿತ್ರರಿಬ್ಬರೂ ಬೇಗಬೇಗನೆ ಹೆಜ್ಜೆ ಹಾಕುತ್ತಾ ಮುನಿತಾಯಪ್ಪನ ಮನೆ ಸೇರಿದರು.

ಅಂಗಳದಲ್ಲಿ ನಾಲ್ಕಾರು ಮಂದಿ ಕುಳಿತಿದ್ದರು. ಅವರಿಗೆ ತುಸು ದೂರದಲ್ಲಿ ಗಂಧದಕಡ್ಡಿಯ ಕಟ್ಟು ನಿಧಾನವಾಗಿ ಉರಿಯುತ್ತಾ ಪರಿಮಳವೆರಚುತ್ತಿತ್ತು. ಆದರೆ ಅಲ್ಲಿ ಮುನಿತಾಯಪ್ಪನಿರಲಿಲ್ಲ.

"ಮುನಿತಾಯಪ್ಪ ಎಲ್ಲಿ ?"

ಅಲ್ಲಿದ್ದ ಅಪಚರಿತನೊಬ್ಬನನ್ನು ಕೇಳಿದರು ಸುದರ್ಶನಯ್ಯಂಗಾರ್ಯರು.

"ಒಳಗೆ ಕುಂತವ್ರೆ ಸ್ವಾಮಿ—ಪೂಜೆ ಮಾಡ್ತಾ"

ಮಿತ್ರರಿಬ್ಬರೂ ಹೊರ ಜಗುಲಿಯ ಮೇಲೆಯೇ ಕಾದು ಕುಳಿತರು.

ಸುಮಾರು ಅರ್ಧ ಗಂಟೆಯ ಬಳಿಕ ಹೊರಗೆ ಬಂದ ಮುನಿತಾಯಪ್ಪ--

"ಇನ್ನೇನೂ ಹೆದರಬೇಡಿ. ಎಲ್ಲಾ ಸರಿ ಹೋಗುತ್ತದೆ. ಒಳ್ಳೆಯದಾಗುತ್ತದೆ" ಎಂದು ಅಂಗಳದಲ್ಲಿ ಕುಳಿತಿದ್ದವರಿಗೆ ಧೈರ್ಯ ಹೇಳಿದ.

"ಇದುವರೆಗೂ ನಮ್ಮ ಕಷ್ಟ - ಸುಖಕ್ಕೆ ತಾಯಿ - ತಂದೆ ಹಂಗೆ ಆಗಿದ್ದೀರಿ. ಇನ್ಮೇಲೂ ಹಿಂಗೇ ವಿಶ್ವಾಸ ಮಡಗಬೇಕಣ್ಣ. ಏನು ಹೆಚ್ಚು ಕಮ್ಮಿ ಆದರೂ ನಿಮ್ಮದೇನೇ !" ಅಪರಿಚಿತನೊಬ್ಬ ದೈನ್ಯದ ಧ್ವನಿಯಲ್ಲಿ ನುಡಿದ.

"ಆಗಲಪ್ಪ. ಭಗವಂತನೊಬ್ಬನಿದ್ದಾನೆ. ಅವನನ್ನು ಮರೀಬಾರದು"

ಎಂದು ಹೇಳಿ ಮುನಿತಾಯಪ್ಪ ಆಗಂತುಕರನ್ನು ಬೀಳ್ಕೊಟ್ಟ.

ಸುದರ್ಶನಯ್ಯಂಗಾರ್ಯರೂ ಸಭಾಪತಿಶಾಸ್ತ್ರಿಗಳೂ ಮನೆಯೊಳಗೆ ನಡೆದರು. ಅನಿರೀಕ್ಷಿತವಾಗಿ ಅವರನ್ನ ಕಂಡ ಮುನಿತಾಯಪ್ಪ ಆಶ್ಚರ್ಯಭರಿತನಾದ.

"ಓ ! ಬನ್ನಿ ಸ್ವಾಮಿ........ಬನ್ನಿ"

ಎನ್ನುತ್ತಾ ಚಾಪೆ ಹಾಸಿದ. ಮಿತ್ರರಿಬ್ಬರೂ ಕುಳಿತುಕೊಂಡರು

ಸಭಾಪತಿಶಾಸ್ತ್ರಿಗಳು—

"ನಾವು ಬೇಗನೆ ಹೋಗಬೇಕು ಮುನಿತಾಯಪ್ಪ" ಎಂದರು.

"ಈಗ ಬಂದಿರಿ – ಈಗಲೇ ಹೋಗಬೇಕೇ ಸ್ವಾಮಿ ?"

"ನಾವು ಬಂದು ಅರ್ಧ ಗಂಟೆಯಾಯಿತಪ್ಪ. ಆದರೆ ನಿನ್ನ ದರ್ಶನ ಸಿಕ್ಕಿದ್ದು ಈಗತಾನೆ !"

"ಶಾನೆ ದೊಡ್ಡ ಮಾತು ಬುದ್ಧಿ"

"ಈ ನಡುವೆ ನಿನಗೆ ಗಿರಾಕಿಗಳು ಹೆಚ್ಚು ಅಂತ ಕಾಣುತ್ತೆ !"

ಸುದರ್ಶನಯ್ಯಂಗಾರ್ಯರು ನಕ್ಕು ಕೇಳಿದರು.

"ಇಲ್ಲಾ ಸ್ವಾಮಿ. ಈಗ ಬಂದಿದ್ದೋರು ಒಳಗೆರೆಹಳ್ಳಿಯ ಗೌಡರ ಮನೆಯವರು. ಪಾಪ, ಅವರ ಮನೆಯಲ್ಲಿ ಒಬ್ಬರ ತಪ್ಪ ಒಬ್ಬರಿಗೆ ಪಿಶಾಚಿ ಹಿಡಿಯುತ್ತಲೇ ಇರುತ್ತದೆ. ಈಗಾಗಲೇ ಗೌಡರಿಗೆ, ಅವರ ಹೆಂಡತಿಗೆ, ದೊಡ್ಡ ಮಗನಿಗೆ ಹಿಡಿದಿದ್ದನ್ನ ಬಿಡಿಸಿದೆ; ಯಂತ್ರ ಕಟ್ಟಿದೆ. ಈಗ ಮತ್ತೆ– ಗೌಡರ ಎರಡನೆ ಮಗನಿಗೆ ಹಿಡಿದಿದೆಯಂತೆ ! ಒಳ್ಳೆ ಸರದಿಗಿಟ್ಟುಕೊಂಡು ಬಿಟ್ಟಿದೆ !! ಅದಕ್ಕೋಸ್ಕರ ಒಂದು 'ಗ್ರಹೋಚ್ಚಾಟನ ಯಂತ್ರ' ಮಂತ್ರಿಸಿ ಕೊಟ್ಟೆ. ಅದಕ್ಕೇ ಸ್ವಲ್ಪ ಹೊತ್ತಾಯಿತು....ಕ್ಷಮಿಸಿ ಸ್ವಾಮಿ."

"ಪರವಾಗಿಲ್ಲ. ಒಳ್ಳೆ ಕೆಲಸ ಮಾಡುವಾಗ ಸ್ವಲ್ಪ ಹಿಂಚು – ಮುಂಚಾದರೆ, ಅದಕ್ಕೇಕೆ ಕ್ಷಮೆ ?" ಎಂದರು ಸಭಾಪತಿಶಾಸ್ತ್ರಿಗಳು.

ಎರಡು ನಿಮಿಷ ಮೂವರು ಮೌನವಾಗಿದ್ದರು ಅನಂತರ—

"ಮುನಿತಾಯಪ್ಪ, ನೀನು ಅವತ್ತು 'ರಕ್ಷರೇಖೆ' ಹಾಕುತ್ತೀನಿ ಅಂದೆಯಲ್ಲಾ ಅದನ್ನು ಹಾಗೆಯೇ ಮರೆತುಬಿಟ್ಟೆ ?"

"ಮರೆಯೋದು ಉಂಟೆ ಸ್ವಾಮಿ ?"

"ಹಾಗಾದರೆ ಯಾವಾಗ ಹಾಕುತ್ತೀ ?"

"ಅವತ್ತೇ ಹಾಕಿಬಿಟ್ಟಿದ್ದೀನಿ ಸ್ವಾಮಿ !"

"ಇಲ್ಲಪ್ಪ. ಅವತ್ತು ನಮ್ಮ ಜೊತೆಯಲ್ಲಿ ಮಾತಾಡುತ್ತಾ ನೀನು ಹಾಗೆಯೇ ಹೊರಟುಹೋದೆ"

"ಹೌದು ಸ್ವಾಮಿ. ಆದರೆ ಅವತ್ತೇ ರಾತ್ರಿ ಸುಮಾರು ಹನ್ನೊಂದು ಗಂಟೆ ಹೊತ್ತಿಗೆ ಪುನಃ ಬಂದು, ನಿಮ್ಮ ಮನೆ ಕಾಂಪೌಂಡನ್ನು ಒಂದು ಸುತ್ತು

ಪ್ರದಕ್ಷಿಣೆ ಮಾಡಿ, ಮೂಳೆಯಿಂದ ಗೆರೆ ಎಳೆದುಬಿಟ್ಟು ಮನೆಗೆ ಬಂದೆ. ಗೆರೆ ಅಳಿಸಿದರೂ ಅದರ ಗುಣ ಅಳಿಸೋದಿಲ್ಲ ಸ್ವಾಮಿ."

ಮುನಿತಾಯಪ್ಪನ ಮಾತು ಕೇಳಿ ಮಿತ್ರರಿಬ್ಬರೂ ಆಶ್ಚರ್ಯಪಟ್ಟರು.

"ಹಾಗೆಯೇ ನಮ್ಮ ಮನೆಯೊಳಗೆ ಬರಬಾರದಾಗಿತ್ತೆ ಮುನಿತಾಯಪ್ಪ ?" ಕಳಕಳಿಯಿಂದ ಕೇಳಿದರು ಸಭಾಪತಿಶಾಸ್ತ್ರಿಗಳು.

"'ರಕ್ಷರೇಖೆ' ಹಾಕಿದ ಕೂಡಲೇ, ಹಾಕಿದವನು ಪ್ರವೇಶಿಸಬಾರದು ಸ್ವಾಮಿ. ಅದಕ್ಕೇ ನಾನು ಬರಲಿಲ್ಲ."

"ಮಾರನೆಯ ದಿನವಾದರೂ ಬರಬಹುದಾಗಿತ್ತು"

"ಬರಬೇಕೆಂದಿದ್ದೆ ಸ್ವಾಮಿ. ಆದರೆ ಪುರಸತ್ತಾಗಲಿಲ್ಲ"

"ಹೋಗಲಿ ಬಿಡು. ನಾವೇ ಬಂದೆವಲ್ಲ !"

"ಏನು ಸ್ವಾಮಿ ವಿಶೇಷ ?"

"ಅವರು 'ಗಣಪತಿ ಔಪಾಸನೆ' ಕಲಿಯಬೇಕೆಂದು ನಿರ್ಧರಿಸಿರುವುದೇ ಒಂದು ದೊಡ್ಡ ವಿಶೇಷ ಮುನಿತಾಯಪ್ಪ." ಎಂದರು ಸುದರ್ಶನಯ್ಯಂಗಾರ್ಯರು.

ಮುನಿತಾಯಪ್ಪ ಬೆರಗುಗಣ್ಣುಗಳಿಂದ ಶಾಸ್ತ್ರಿಗಳ ಮುಖ ನೋಡಿದ.

"ಹೌದು ಮುನಿತಾಯಪ್ಪ. ಅದಕ್ಕೀಗ ನಿನ್ನ ಸಹಾಯ ತುಂಬಾ ಮುಖ್ಯ."

"ನನ್ನ ಕೈಯಲ್ಲೇನಾಗುತ್ತದೆ ಸ್ವಾಮಿ ?"

"ನೀನು ನಿನ್ನ ಗುರುಕೃಪೆಯನ್ನು ದೊರಕಿಸಿ ಕೊಡಬೇಕು."

"ಅವರು ಇಲ್ಲಿಲ್ಲ ಸ್ವಾಮಿ : ತಿರುವಣ್ಣಾಮಲೈಯಲ್ಲಿದ್ದಾರೆ"

"ಅಲ್ಲಿಗೇ ಹೋಗೋಣ"

"ಅಲ್ಲಿಯೂ ಅವರನ್ನು ಹುಡುಕುವುದು ಕಷ್ಟವೇ. ಒಂದು ಸಮಯ ಅವರು ಸಿಕ್ಕಿದರೂ, ಅವರಿಂದ ವಿದ್ಯಾನುಗ್ರಹ ಮಾಡಿಸಿಕೊಳ್ಳುವುದು ತುಂಬಾ ಕಷ್ಟ"

"ಹೇಗಾದರೂ ಸರಿಯೆ. ಪ್ರಯತ್ನಿಸಿ ಬಿಡಬೇಕು ಮುನಿತಾಯಪ್ಪ"

"ನಿಮ್ಮ ಇಷ್ಟ ಸ್ವಾಮಿ"

"ಹಾಗಾದರೆ ಯಾವತ್ತು ಹೊರಡೋಣ ?"

"ನೀವೇ ಒಂದು ಒಳ್ಳೇದಿನ ನೋಡಿ"

"ಸೋಮವಾರ ತುಂಬಾ ಪ್ರಶಸ್ತವಾಗಿದೆ. ಆ ದಿನ ಸಪ್ತಮಾಶಿಥಿ,

ಪುನರ್ವಸು ನಕ್ಷತ್ರ, ಮಿಥುನ ಲಗ್ನ–ತುಂಬಾ ಸೊಗಸಾದ ದಿನ "

" ಸರಿ ಸ್ವಾಮಿ. ಹಾಗೇ ಆಗಲಿ "

" ನಾವಿನ್ನು ಹೊರಡೋಣವೋ ? "

" ತಡೀರಿ ಸ್ವಾಮಿ–ಒಂದು ನಿಮಿಷ "

ಮುನಿತಾಯಪ್ಪ ಒಳಗೆ ಹೋದ. ಹಿಂದಿರುಗುವಾಗ ಬಾಳೆ ಹಣ್ಣಿನ ತಟ್ಟೆಯೂ, ಎರಡು ಹಾಲಿನ ಬಟ್ಟಲುಗಳೂ ಅವನೊಡನೆ ಬಂದವು.

" ಇದೆಲ್ಲಾ ಯಾಕೆ ಮುನಿತಾಯಪ್ಪ ? "

" ವಿಷ್ಣು–ಈಶ್ವರರ ಹಾಗೆ ಬಂದಿದ್ದೀರಿ. ಬಡವನ ಭಕ್ತಿ ಇಷ್ಟಾದರೂ ಬೇಡವೆ ? "

" ಸರಿಯಪ್ಪ, ನಿನ್ನಿಷ್ಟ. ನಾವಂತೂ ಇವತ್ತು ರಾತ್ರಿಗೆ ಊಟ ಮಾಡುವ ಹಾಗಿಲ್ಲ ! "

ಫಲಾಹಾರ ಮುಗಿಸಿ ಮಿತ್ರರಿಬ್ಬರೂ ಹೊರಟರು. ಮುನಿತಾಯಪ್ಪನೂ ಮಾವಳ್ಳಿ ಚೌಕದವರೆಗೆ ಹಿಂಬಾಲಿಸಿದ. ಅದೇ ವೇಳೆಗೆ ಮಲ್ಲೇಶ್ವರದ ಬಸ್ಸೂ ಬಂದು ನಿಂತಿತು.

" ಇನ್ನೂ ಚೆನ್ನಾಗಿ ಯೋಚನೆ ಮಾಡಿ ಸ್ವಾಮಿ "

ಬಸ್ಸು ಹೊರಡುವ ಕೊನೆಯ ಗಳಿಗೆಯಲ್ಲೂ ಎಚ್ಚರಿಸಿದ ಮುನಿತಾಯಪ್ಪ.

" ಇನ್ನೇನೂ ಯೋಚಿಸಬೇಕಾಗಿಲ್ಲ ಮುನಿತಾಯಪ್ಪ. ನಿಶ್ಚಯ ನಿಶ್ಚಯವೇ. ಅದನ್ನು ಬದಲಿಸುವುದಕ್ಕಾಗುವುದಿಲ್ಲ "

ಶಾಸ್ತ್ರಿಗಳು ದೃಢವಾಗಿ ನುಡಿದು ಬಸ್ಸು ಹತ್ತಿದರು. ಮುನಿತಾಯಪ್ಪ ತನ್ನ ಮನೆಯ ಕಡೆಗೆ ಹೊರಟ. ಬಸ್ಸು ಮಲ್ಲೇಶ್ವರದ ಕಡೆಗೆ ಹೊರಟಿತು.

" ಈಗ ನನಗೆ ಸ್ವಲ್ಪ ಸಮಾಧಾನವಾಯಿತಪ್ಪ. ಆದರೆ ಇನ್ನೊಂದು ವಿಷಯ ನನ್ನ ತಲೆಯಲ್ಲಿ ಸೇರಿಕೊಂಡು ಕೊರೆಯುತ್ತಿದೆ ! "

" ಹ್ಞೂಂ, ಅದನ್ನೂ ಹೇಳಿಬಿಡು. ಏನಾದರೂ ಪರಿಹಾರ ಹುಡುಕಿ ಬಿಡೋಣ ? "

" ಪರಿಹಾರ ಹುಡುಕಿದ್ದಾಗಿದೆಯಪ್ಪ, ಆದರೆ ಅದನ್ನು ಕಾರ್ಯಗತ ಮಾಡಬೇಕಾದವನು ನೀನು ! "

" ನಾನೇ ? "

" ಹ್ಞಾಂ....ನೀನೇ ! "

" ನನ್ನಿಂದ ಆಗುತ್ತದೆ ತಾನೆ ? "

" ನೀನು ಮನಸ್ಸು ಮಾಡಿದರೆ ಖಂಡಿತ ಆಗುತ್ತದೆ "

" ಹೇಳು "

" ನೀನು ಆಗುವುದಿಲ್ಲ ಅನ್ನಬಾರದು "

" ಇಲ್ಲ "

" ಖಂಡಿತವಾಗಿಯೂ ನನ್ನ ಮಾತು ತೆಗೆದು ಹಾಕಬಾರದು "

" ಇಲ್ಲಾ–ಹೇಳು ಮಹಾರಾಯ ! "

" ನಿನಗೊಬ್ಬ ವಂಶೋದ್ಧಾರಕ ಬೇಕು ತಾನೆ ? "

" ಹೌದು. ಬೇಕು "

" ಅದಕ್ಕೋಸ್ಕರ........"

" ಅದಕ್ಕೋಸ್ಕರ ಏನು ಮಾಡಬೇಕು ಹೇಳು–ಸಂಕೋಚ ಯಾಕೆ ಪಡುತ್ತೀಯೋ "

" ವೈದೇಹಮ್ಮನವರಿಗೆ ಒಬ್ಬಳು ತಂಗಿ ಬೇಕಂತೆ....ನಿನಗಿನ್ನೊಬ್ಬಳು ಹೆಂಡತಿ........"

" ಸಭಾಪತೀ, ನೀನೇ ಈ ಮಾತು ಹೇಳುತ್ತಿದ್ದೀಯಾ ? "

" ಹೇಳಬೇಕಾಗಿ ಬಂದಿದೆ ಸುದರ್ಶನ "

" ವೈದೇಹಿಗೆ ಒಬ್ಬಳು ಸವತಿ ಬಂದರೆ, ನಾನು ಯಾವ ಸುಖ ಪಡುತ್ತೇನಪ್ಪ ? "

" ಬರುವವಳು ಸವತಿಯಾಗದೆ, ವೈದೇಹಮ್ಮನವರಿಗೆ ತಂಗಿಯಾಗುತ್ತಾಳಲ್ಲಾ ! "

" ಹಾಗೆ ಭಾವಿಸುವ ದೊಡ್ಡ ಗುಣ ವೈದೇಹಿಗಿದೆ. ಆದರೆ ಬರುವವಳಿಗೆ ಇರಬೇಕಲ್ಲಾ "

" ಯಾರು ಬಂದರೂ ಸರಿಯೆ. ಅವರನ್ನು ವೈದೇಹಮ್ಮನವರ ಚಿನ್ನದಂತಹ ಗುಣ, ವಿಶಾಲವಾದ ಹೃದಯ, ಧಾರಾಳವಾದ ಮನಸ್ಸು, ಪ್ರೀತಿಯ ಮಾತುಗಳೇ ಮಾರ್ಪಡಿಸಿಬಿಡುತ್ತವೆ. ಬರುವ ತಂಗಿ ಅಕ್ಕನ ಆದರ್ಶಕ್ಕೆ ಮಾರುಹೋಗಿ, ಮಮತೆಯಿಂದ ವರ್ತಿಸುತ್ತಾಳೆ ಸುದರ್ಶನಾ "

ಸುದರ್ಶನಯ್ಯಂಗಾರ್ಯರು ಮೌನವಾಗಿದ್ದರು.

" ವೈದೇಹಮ್ಮನವರು ಎಷ್ಟೊಂದು ಕೊರಗುತ್ತಾರೆ ಗೊತ್ತೇ ನಿನಗೆ ? ನಮ್ಮ ಸೌಭಾಗ್ಯವನ್ನು ಕೇಳು – ಅವಳೇ ಹೇಳುತ್ತಾಳೆ "

" ನನಗೆ ಗೊತ್ತಿಲ್ಲವೇ ಸಭಾಪತಿ. ಮನೆಯಲ್ಲಿ ನಿತ್ಯವೂ ಇದೇ ಮಾತೇ. ' ನೀವು ಇನ್ನೊಂದು ಮದುವೆ ಮಾಡಿಕೊಳ್ಳಿ. ನಮ್ಮಿಬ್ಬರಿಗೂ ನೆಮ್ಮದಿಯಾಗುತ್ತದೆ. ನಮ್ಮ ವಂಶ ಬೆಳೆಯುತ್ತದೆ ' ಎಂದು ಪ್ರತಿದಿನವೂ ಹೇಳುತ್ತಲೇ ಇದ್ದಾಳೆ. ನಾನೇ ಕಿವಿಯಮೇಲೆ ಹಾಕಿಕೊಂಡಿಲ್ಲ. "

" ಹೀಗೆ ಉಪೇಕ್ಷೆ ಮಾಡಿ, ಆ ಹೆಣ್ಣು ಜೀವದ ಮನಸ್ಸಿಗೆ ನೋವುಂಟು ಮಾಡಬಾರದಪ್ಪ "

" ನಾನೇನು ಮಾಡಲಿ ಹೇಳು "

" ನೀನು ಮದುವೆಗೆ ಒಪ್ಪಬೇಕು – ಅಷ್ಟೆ "

" ನಿಮ್ಮೆಲ್ಲರ ಇಷ್ಟ ಏನಿದೆಯೋ ಹಾಗೆಯೇ ಆಗಲಿ "

ಎಂದರು ಸುದರ್ಶನಯ್ಯಂಗಾರ್ಯರು. ಶಾಸ್ತ್ರಿಗಳಿಗೆ ತುಂಬಾ ಸಂತೋಷವಾಯಿತು.

" ವೈದೇಹಮ್ಮನವರ ಹಾಗೆಯೇ ನಿನ್ನದೂ ತುಂಬಾ ಸರಳ ಹೃದಯ ಸುದರ್ಶನ "

" ಅದೂ ಆ ಪುಣ್ಯವತಿಯಿಂದಲೇ ಬಂದಿದ್ದು ಸಭಾಪತಿ. ಕಠಿಣತೆಯನ್ನು ಕೋಮಲತೆಯನ್ನಾಗಿ ಪರಿವರ್ತಿಸುವ ' ಸ್ಪರ್ಶಮಣಿ 'ಯ ಪ್ರಭಾವ ಅವಳಿಗಿದೆ ! " ಎಂದು ಕೃತಜ್ಞತೆಯಿಂದ ಸುದರ್ಶನಯ್ಯಂಗಾರ್ಯರು ಮಾತು ಮುಗಿಸುವ ವೇಳೆಗೆ – ಮಲ್ಲೇಶ್ವರವನ್ನು ಸೇರಿದ ಬಸ್ಸು ನಿಂತಿತು. ಮಿತ್ರರಿಬ್ಬರೂ ಇಳಿದು ಮನೆಯ ಕಡೆ ಹೊರಟರು.

" ನಿಮ್ಮ ಕಡೆಯೇ ಯಾವುದಾದರೂ ಹೆಣ್ಣಿದೆಯೇನು ? "

" ಬೇಕಾದಷ್ಟು ಜನರಿದ್ದಾರಪ್ಪ! ನಮ್ಮ ಜನದಲ್ಲಿ ಹೆಣ್ಣಿಗೆ ಬಂತೆ ಬರ?"

" ಹದಿನಾಲ್ಕು – ಹದಿನೈದು ವಯಸ್ಸಿನ ಪಾಪಚ್ಚಿಯನ್ನು ಕಟ್ಟಿಕೊಂಡರೆ ಏನೂ ಪ್ರಯೋಜನವಿಲ್ಲ ಸುದರ್ಶನ ! "

" ಛೆ ! ವರಸಾಮ್ಯವಾದರೂ ಬೇಡವೇನಯ್ಯ ? "

ಎಂದು ನಕ್ಕು ಸುದರ್ಶನಯ್ಯಂಗಾರ್ಯರು ಮತ್ತೆ ಮುಂದುವರಿಸಿದರು ;

" ನಮ್ಮ ಜಾತಿಯಲ್ಲಿ ಇಪ್ಪತ್ತೆರಡು – ಇಪ್ಪತ್ತಮೂರು ವಯಸ್ಸಿಗೂ ಮೀರಿದ ಹುಡುಗಿಯರು ಮದುವೆ ಇಲ್ಲದೆ ನಿಂತಿದ್ದಾರೆ........ನೋಡು, ನಮ್ಮ

ಕೃಷ್ಣಮಾಚಾರ್ಯರ ಮಗಳಿಗೆ ಈಗ ಇಪ್ಪತ್ತೆರಡು ವಯಸ್ಸು. ಪಾಪ, ವರ ಸಿಕ್ಕಿಲ್ಲ; ಮದುವೆಯಾಗಿಲ್ಲ"

"ಆ ಹುಡುಗಿಯನ್ನೇ ನೀನು ಯಾಕೆ ಮದುವೆಯಾಗಬಾರದು ?"

ಆ ಪ್ರಶ್ನೆಗೆ ಸುದರ್ಶನಯ್ಯಂಗಾರ್‍ಯರು ಉತ್ತರಿಸಲಿಲ್ಲ.

ಅಷ್ಟರಲ್ಲಿ ಮನೆ ಸಮೀಪಿಸಿದ್ದರಿಂದ, ಗೆಳೆಯರಿಬ್ಬರೂ ಮೌನವಾಗಿ ಒಳಹೊಕ್ಕರು. ಗೂಡಿನಲ್ಲಿದ್ದ ಅಲಾರಂ ಗಡಿಯಾರ ಎಂಟೂವರೆ ತೋರಿಸುತ್ತಿತ್ತು.

ಒಳಗೆ ಬಂದ ಸುದರ್ಶನಯ್ಯಂಗಾರ್‍ಯರು –

"ನಾವಿನ್ನು ಹೊರಡೋಣ"

ಎಂದು ಪತ್ನಿಯ ಕಡೆಗೆ ನೋಡುತ್ತಾ ಹೇಳಿದರು. ಕೂಡಲೇ ವೈದೇಹಮ್ಮ ಎದ್ದು ನಿಂತರು. ಅಷ್ಟರಲ್ಲಿ ಸಭಾಪತಿಶಾಸ್ತ್ರಿಗಳು —

"ನಿಮ್ಮ ಗಂಡನಿಗೆ ಎಲ್ಲಾದರೂ ಹೆಣ್ಣು ನೋಡಿಟ್ಟಿದ್ದೀರಾ ತಾಯಿ?"

ಎಂದು ಕೇಳಿದರು.

ವೈದೇಹಮ್ಮ ನಾಚಿಕೆಯಿಂದ ತಲೆ ತಗ್ಗಿಸಿದರು.

"ಸೌಭಾಗ್ಯ, ನಮ್ಮ ಸುದರ್ಶನ ಮದುವೆಗೆ ಒಪ್ಪಿಕೊಂಡಿದ್ದಾನೆ ಕಣೆ!"

"ನಿಜವೇ ಅಂದ್ರೆ ?"

"ಹೆಣ್ಣು ಸಿದ್ಧವಾಗಿದ್ದರೆ ನಾಳೆಯೇ ಮದುವೆ !"

ವೈದೇಹಮ್ಮನವರಿಗೆ ನಂಬಲಾಗಲಿಲ್ಲ. ಅವರು ಅರಳಿದ ಕಣ್ಣುಗಳಿಂದ ತಮ್ಮ ಗಂಡನನ್ನೇ ನೋಡಿದರು.

"ಅಂತೂ ಸೌಭಾಗ್ಯಮ್ಮನವರ ಜೊತೆ ಸಂಧಾನ ಮಾಡಿ ನಿನ್ನ ಮಾತೇ ಗೆಲಿಸಿಕೊಂಡೆಯಲ್ಲ !"

ಎಂದು ಸುದರ್ಶನಯ್ಯಂಗಾರ್‍ಯರು ಪತ್ನಿಯನ್ನು ನೋಡುತ್ತಾ ನುಡಿದರು.

"ನಾನು ಆಗಲೇ ಹೆಣ್ಣನ್ನೂ ಹುಡುಕಿಬಿಟ್ಟಿದ್ದೇನೆ ಕಣೆ ಸೌಭಾಗ್ಯ!"

"ಅಬ್ಬಾ! ನಿಮ್ಮನ್ನು ಮುಂದುಮಾಡಿದರೆ ಏನುತಾನೆ ಮಾಡದೆ ಬಿಟ್ಟೀರಿ!"

"ನಿನ್ನ ಮಾತು ನಡೆಸದಿದ್ದರೆ, ನೀನು ಸುಮ್ಮನಿರುತ್ತೀಯಾ !"

ಕೊಂಕುದನಿಯಲ್ಲಿ ನುಡಿಯುತ್ತಾ ನಕ್ಕರು ಶಾಸ್ತ್ರಿಗಳು.

" ಹ್ಞಂ, ನೀವು ನೋಡಿದ ಹೆಣ್ಣು ಈ ಊರಿಂದೇ ತಾನೇ "

" ಗುಟ್ಟಹಳ್ಳಿ ಕೃಷ್ಣಮಾಚಾರ್ಯರ ಮಗಳು ಕಣೇ ! "

ಶಾಸ್ತ್ರಿಗಳ ಮಾತಿನಿಂದ ಅಚ್ಚರಿಗೊಂಡ ವೈದೇಹಮ್ಮ—

" ಯಾರು – ಅಲಮೇಲುವೇ ? " ಎಂದು ಕೇಳಿದರು.

" ಹೌದು, ಅವಳೇ ಅಲಮೇಲು ! "

" ಆ ಹುಡುಗಿಯನ್ನು ನೀವು ನೋಡಿದ್ದೀರಾ ವೈದೇಹಮ್ಮ ? "

ಸೌಭಾಗ್ಯಮ್ಮ ಕೇಳಿದರು.

" ನೋಡಿದ್ದೇನೆ. ಅವರೂ ನಮಗೆ ದೂರದ ಸಂಬಂಧವೇ ಕಾಣ್ರೀ – ನಮ್ಮ ತಾಯಿಯ ಕಡೆಯಿಂದ "

" ಹುಡುಗಿ ಚೆನ್ನಾಗಿದ್ದಾಳೆ ತಾನೆ ? "

" ಅವರನ್ನೇಕೆ ಕೇಳುತ್ತೀಯೋ ! ಸುದರ್ಶನನನ್ನೇ ಕೇಳು. ಅವನೇ ಕಣ್ಣಾರ ಇವತ್ತು ಬೆಳಿಗ್ಗೆ ನೋಡಿದ್ದಾನೆ ! " ಎಂದರು ಶಾಸ್ತ್ರಿಗಳು.

" ಓ ! ಆಗಲೇ ನೋಡಿ – ಮೆಚ್ಚಿದ್ದೂ ಆಯ್ತೇನು ? "

ಆಶ್ಚರ್ಯಭರಿತರಾದ ಸೌಭಾಗ್ಯಮ್ಮ ಹುಬ್ಬೇರಿಸಿ ನಕ್ಕು ಕೇಳಿದರು. ವೈದೇಹಮ್ಮನವರೂ ಅವರೊಡನೆ ನಕ್ಕರು.

" ನಾವು ಮಾಡಬೇಕಾದ್ದೆಲ್ಲಾ ಮಾಡಿದ್ದೀವಿ. ಇನ್ನು ವೈದೇಹಮ್ಮನವರು ಏನು ಹೇಳುತ್ತಾರೋ ? "

ಶಾಸ್ತ್ರಿಗಳು ಸೌಭಾಗ್ಯಮ್ಮನವರ ಕಡೆಗೆ ನೋಡಿ ಹೇಳಿದರು. ಸೌಭಾಗ್ಯಮ್ಮ ವೈದೇಹಮ್ಮನವರ ಕಡೆಗೆ ನೋಡಿ, ಅವರ ಉತ್ತರಕ್ಕಾಗಿ ಕಾದರು.

" ಏನು ಹೇಳುವುದಕ್ಕೂ ನನಗೆ ಬಾಯೇ ಬರುವುದಿಲ್ಲ ಸೌಭಾಗ್ಯಮ್ಮ ! ನನ್ನ ಮನಸ್ಸಿನಲ್ಲಿದ್ದಹಾಗೆ ನಡೆಯಿತಲ್ಲಾ – ಅಷ್ಟಕ್ಕೇ ನನಗೆ ತುಂಬಾ ಸಂತೋಷವಾಗಿ ಬಿಟ್ಟಿದೆ !! "

" ನಿಮಗೆ ಆ ಹೆಣ್ಣು ಒಪ್ಪಿಗೆ ತಾನೆ ? "

" ' ಅವರು ' ಒಪ್ಪಿದ್ದು ನನಗೂ ಒಪ್ಪು. ಅವರ ಸುಖವೇ ನನ್ನ ಸುಖ "

ವೈದೇಹಮ್ಮನವರ ಬಾಯಿಂದ ಬಂದ ಆತ್ಮೀಯತೆಯ ಸವಿ ಮಾತು ಸುದರ್ಶನಯ್ಯಂಗಾರ್ಯರನ್ನು ಪುಳಕಗೊಳಿಸಿತು ; ಶಾಸ್ತ್ರಿಗಳ ಹೃದಯವನ್ನು ತುಂಬಿತು.

" ತಾಯಿ ವೈದೇಹಿಯ ಕಾಲ ತ್ರೇತಾಯುಗಕ್ಕೇ ಮುಗಿಯಲಿಲ್ಲ ಸೌಭಾಗ್ಯ. ಆಕೆ ಈ ಕಲಿಯುಗದಲ್ಲಿಯೂ ಅಂಶ ಅಂಶವಾಗಿ ಅವತರಿಸುತ್ತಿದ್ದಾಳೆ....ವೈದೇಹಮ್ಮನವರಂತಹವರು ಇನ್ನೂ ಇರುವುದರಿಂದಲೇ ಪ್ರಪಂಚ ಸ್ವಲ್ಪಮಟ್ಟಿಗೆ ನೆಮ್ಮದಿಯಾಗಿದೆ. ಇಲ್ಲದಿದ್ದರೆ ಎಷ್ಟು ಅಲ್ಲೋಲಕಲ್ಲೋಲವಾಗುತ್ತಿತ್ತೋ ? "

" ಆ ಮಾತು ನೂರು ಸಾರಿ ಹೇಳೀಂದ್ರೆ....ಸಾವಿರ ಸಾರಿ ಹೇಳಿ.... "

ಸತ್ಯವನ್ನು ಸಾರುವ ದೃಢವಾದ ದನಿಯಲ್ಲಿ ನುಡಿದರು ಸೌಭಾಗ್ಯಮ್ಮ.

ಎರಡು ನಿಮಿಷ ಎಲ್ಲರೂ ಮೌನವಾಗಿದ್ದರು. ಅನಂತರ ಸುದರ್ಶನಯ್ಯಂಗಾರ‍್ಯರು—

" ಸಭಾಪತಿ, ಒಂಬತ್ತು ಗಂಟೆಯಾಗುತ್ತಾ ಬಂದಿತು. ನಾವಿನ್ನು ಹೊರಡುತ್ತೇವೆ" ಎಂದರು.

" ಅತ್ತೆಮ್ಮ ಅಡಿಗೆಮಾಡಿಟ್ಟಿದ್ದಾರೆ. ಇಲ್ಲೇ ಊಟ ಮಾಡಿಕೊಂಡು ಹೋದರಾಯಿತು "

" ಬೇಡ ಸೌಭಾಗ್ಯಮ್ಮ. ಅಲ್ಲಿ ಮಾಡಿಟ್ಟ ಅಡಿಗೆ ಇದೆ. ಅನ್ಯಾಯವಾಗುತ್ತೆ " ಎಂದರು ವೈದೇಹಮ್ಮ.

" ಲಕ್ಷ್ಮಿಯ ಹಾಗೆ ಬಂದಿದ್ದೀರಿ – ಶುಕ್ರವಾರದ ದಿನ. ನೈವೇದ್ಯ ಸ್ವೀಕರಿಸದೆ ಹೋಗುತ್ತೀರಾ ತಾಯಿ ? "

" ಬಂದ ಕೂಡಲೇ ಭೂತಶಾಂತಿ ಮಾಡಿಬಿಟ್ಟಿರಲ್ಲಾ ಸೌಭಾಗ್ಯಮ್ಮ— ಉಪ್ಪಿಟ್ಟು, ಬೋಂಡ, ರವೆ ಉಂಡೆ ಕೊಟ್ಟು. ಅದಕ್ಕಿಂತ ಇನ್ನೇನು ಬೇಕು ನೈವೇದ್ಯ? " ನಗುತ್ತಾ ಹೇಳಿದರು ವೈದೇಹಮ್ಮ.

" ಚೆನ್ನಾಗಿ ಹೇಳಿದಿರಿ "

ಎನ್ನುತ್ತಾ ಸೌಭಾಗ್ಯಮ್ಮ ಒಳಗೆ ಹೋದರು. ಅದುವರೆಗೆ ಒಳ ಅಂಗಳದಲ್ಲಿ ಕುಳಿತು 'ರಾಮಧ್ಯಾನ' ಮಾಡುತ್ತಿದ್ದ ಕಮಲಮ್ಮನವರು ಆಗತಾನೆ ಹೊರಗೆ ಬಂದರು. ಅವರೊಡನೆ ಸೌಭಾಗ್ಯಮ್ಮನವರೂ ಹಿಂತಿರುಗಿದರು.

" ರುಕ್ಕು, ಅಮ್ಮನವರಿಗೆ ಕುಂಕುಮ ಕೊಡು "

ವೈದೇಹಮ್ಮ ಮಣೆಯ ಮೇಲೆ ಕುಳಿತರು – ರುಕ್ಮಿಣಿಯ ಬಲವಂತಕ್ಕೆ.

ಸೌಭಾಗ್ಯಮ್ಮ ಎಲಡಿಕೆಯನ್ನೂ, ಜತೆಗೆ ಒಂದು ರವಿಕೆ ಕಣವನ್ನೂ ಬೆಳ್ಳಿ ತಟ್ಟೆಯಲ್ಲಿಟ್ಟು ರುಕ್ಮಿಣಿಯ ಕೈಯಲ್ಲಿ ವೈದೇಹಮ್ಮನವರಿಗೆ ಕೊಡಿಸಿದರು.

"ನಮಸ್ಕಾರ ಮಾಡಮ್ಮಾ ರುಕ್ಮಿಣಿ. ಸುಮಂಗಲಿಯರ ಆಶೀರ್ವಾದ ದೊಡ್ಡದು" ಎಂದರು ಕಮಲಮ್ಮ. ರುಕ್ಮಿಣಿ ನಮಸ್ಕರಿಸಿದಳು.

"ದೇವರು ನಿನಗೆ ಒಳ್ಳೆಯದು ಮಾಡಲಿ ಕಂದಾ"

ರುಕ್ಮಿಣಿಯ ತಲೆಯನ್ನು ನೇವರಿಸುತ್ತಾ ನುಡಿದರು ವೈದೇಹಮ್ಮ.

"ನಾನಿನ್ನು ಹೋಗಿ ಬರಲೇ ತಾಯಿ ?"

ಕಮಲಮ್ಮನವರ ಕಡೆಗೂ, ಸೌಭಾಗ್ಯಮ್ಮನವರ ಕಡೆಗೂ ಕೃತಜ್ಞತೆಯ ನೋಟವನ್ನು ಬೀರುತ್ತಾ ವೈದೇಹಮ್ಮ ಕೇಳಿದರು.

"ಬಿಡುವಾದಾಗ ಈಕಡೆ ಬನ್ನಿ ವೈದೇಹಮ್ಮ"

"ಬರದೆ ಏನಮ್ಮ. ಇನ್ನುಮೇಲೆ ಬರದೆ–ಹೋಗದೆ ಇದ್ದರೆ ಆಗುತ್ತದೆಯೆ ? ನೀವೇ ಮುಂದೆ ನಿಂತುಕೊಂಡು, ಅವರ ಕೈಗೆ ಕಂಕಣ ಕಟ್ಟಿಸಬೇಕು"

"ವೈದೇಹಮ್ಮಾ, ನೀವು ಸಾಮಾನ್ಯ ಹೆಣ್ಣಲ್ಲ ಕಾಣ್ರೀ. ಸಾಕ್ಷಾತ್ ದೇವತೆ. ನಿಮ್ಮ ಮನಸ್ಸು ದೊಡ್ಡದು. ನಿಮಗಾಗಿ ಯಾರು ಏನು ಬೇಕಾದರೂ ಮಾಡಬಲ್ಲರು. ಹಾಗೆ ಮಾಡಿಸುವ ಶಕ್ತಿ ಇದೆ ನಿಮ್ಮ ಬಂಗಾರದ ಹೃದಯಕ್ಕೆ."

"ತುಂಬಾ ದೊಡ್ಡ ಮಾತು ಹೇಳಿದಿರಿ ಸೌಭಾಗ್ಯಮ್ಮ. 'ಅವರ' ಶ್ರೇಯಸ್ಸು ನಿಮ್ಮೆಲ್ಲರ ಆಶೀರ್ವಾದ, ದೇವರ ದಯೆ–ಇಷ್ಟೇ ನನಗೆ ಮುಖ್ಯವಮ್ಮ"

ಎನ್ನುತ್ತಾ ವೈದೇಹಮ್ಮನವರು ತಮ್ಮ ಪತಿಯೊಡನೆ ಹೊರ ಹೊರಟರು. ಅಂದು ಎಲ್ಲರೂ ತುಂಬಾ ಆನಂದವಾಗಿದ್ದರೂ, ಏಕೋ ಅವರ ಹೃದಯಗಳು ಮೂಕಸಂಕಟವನ್ನನುಭವಿಸುತ್ತಿದ್ದವು.

ಆ ದಂಪತಿಗಳನ್ನು ಸ್ವಲ್ಪ ದೂರ ಹಿಂಬಾಲಿಸಿ, ಅನಂತರ ಸಭಾಪತಿ ಶಾಸ್ತ್ರಿಗಳು ಹಿಂತಿರುಗಿದರು. ಅಷ್ಟರಲ್ಲಿ ಸೌಭಾಗ್ಯಮ್ಮ ಎಲ್ಲರಿಗೂ ಎಲೆ ಹಾಕಿದ್ದರು. ಅರ್ಧ ಊಟದಲ್ಲಿಯೇ ರುಕ್ಮಿಣಿಗೆ ಆವೇಶ ಬಂದುಬಿಟ್ಟಿತು. ಶಾಸ್ತ್ರಿಗಳು ಕೂಡಲೇ ಎದ್ದು, ಅವಳನ್ನು ಬಲವಾಗಿ ಹಿಡಿದು ಎಳೆದುಕೊಂಡು ಹೋಗಿ ಕೋಣೆಯಲ್ಲಿ ಕೂಡಿಹಾಕಿ ಬಂದರು. ಎಂದಿನಂತೆ ಮರುಕಳಿಸಿದ ಆ ಪ್ರಸಂಗವನ್ನು ಕಂಡು, ಶಾಸ್ತ್ರಿಗಳ ಮನಸ್ಸು ಮತ್ತೆ ಕದಡಿತು. ಊಟ ಮುಗಿಸಿದ ಕೂಡಲೇ ಹಳೆಯ ಪುಸ್ತಕಗಳ ಕಡತವನ್ನು ತೆಗೆದು, 'ಶಿವ

ಪುರಾಣ 'ವನ್ನು ಹುಡುಕಿ, ಅದರ ಮಾನಸಿಕ ಪಠಣದಲ್ಲಿ ಮಗ್ನರಾದರು.

"ಗಂಟೆ ಹನ್ನೊಂದಾಯಿತು. ಎಲ್ಲರೂ ಮಲಗಿ ಎಷ್ಟೋ ಹೊತ್ತಾಯಿತು ! ನೀವು ಮಾತ್ರ ಏನೋ ಓದುತ್ತಾ ನಿದ್ರೆ ಕೆಡುತ್ತಿದ್ದೀರಲ್ಲಾ ಅಂದ್ರೆ"

ಸೌಭಾಗ್ಯಮ್ಮ ಪತಿಯನ್ನು ಎಚ್ಚರಿಸಿದರು.

"ಏನು ಓದಿದರೂ ಮನಸ್ಸಿಗೆ ಸಮಾಧಾನವೇ ಇಲ್ಲವಲ್ಲ ಸೌಭಾಗ್ಯ"

"ದಿನವೂ ಹೀಗೆಯೇ ಕೊರಗಿದರೆ ಏನು ಸುಖ ? ನೀವೂ ಮಾಡಬೇಕಾದ ಪ್ರಯತ್ನವೆಲ್ಲಾ ಮಾಡಿದ್ದೀರಿ. ಇನ್ನು ಅದರ ಫಲಾಫಲ ದೇವರಿಗೆ ಬಿಟ್ಟದ್ದು"

"ರುಕ್ಮಿಣಿಯ ಸ್ಥಿತಿಯನ್ನು ನೆನಸಿಕೊಂಡರೆ ನನ್ನ ಕರುಳು ಚುಚ್ಚುತ್ತೆ"

ಆ ಮಾತು, ಆ ನೆನಪು ಸೌಭಾಗ್ಯಮ್ಮನವರ ಕರುಳನ್ನೂ ಚುಚ್ಚಿತು.

"ಸೌಭಾಗ್ಯೊ, ನಿನಗೆ ಒಂದು ವಿಷಯ ಹೇಳುವುದು ಮರೆತುಬಿಟ್ಟೆ"

"ಏನೂಂದ್ರೆ ?"

"ಸೋಮವಾರ ನಾನು ತಿರುವಣ್ಣಾಮಲೈಗೆ ಹೊರಡುತ್ತೇನೆ. ಮುನಿತಾಯಪ್ಪನೂ ಜೊತೆಯಲ್ಲಿ ಬರುತ್ತಾನೆ. ಗಣಪತಿ ಔಪಾಸನೆಯನ್ನು ಸಾಧನೆ ಮಾಡಿಕೊಂಡು, ಬೇಗನೆ ಬಂದು ಬಿಡುತ್ತೇನೆ."

ಸೌಭಾಗ್ಯಮ್ಮ ಮಾತನಾಡಲಿಲ್ಲ.

"ಯಾಕೆ, ಸುಮ್ಮನಾಗಿ ಬಿಟ್ಟೆಯಲ್ಲಾ ?"

"ಇನ್ನೇನು ಮಾಡಲೀಂದ್ರೆ ?"

"ನಾನು ಹೋಗುವುದು ನಿನಗೆ ಇಷ್ಟವಿಲ್ಲವೇ ಸೌಭಾಗ್ಯ ?"

"ನಿಮ್ಮ ಇಷ್ಟವೇ ನನ್ನ ಇಷ್ಟ....ದೇವರು ಬುದ್ಧಿ ಕೊಟ್ಟಹಾಗೆ ಮಾಡೀಂದ್ರೆ"

"ನಾನು ಇಷ್ಟೆಲ್ಲಾ ಮಾಡುತ್ತಿರುವುದು ರುಕ್ಕುವಿಗಾಗಿಯೇ ಅಲ್ಲವೇ?"

"ಆ ವಿಷಯ ನನಗೆ ಗೊತ್ತಿದೇಂದ್ರೆ"

"ಒಳ್ಳೆಯ ಕೆಲಸ ಹೌದೋ–ಅಲ್ಲವೋ ?"

"ಅಲ್ಲವೆಂದರೆ ಯಾರು ಒಪ್ಪುತ್ತಾರೆ ?"

"ನೀನು....!"

"ನಾನೇ. ..?"

"ಹ್ಞುಂ"

" ಯಾವಾಗ ?"

" ಯಾವಾಗಲೂ "

" ನಿಜವೇಂದ್ರೆ ?"

" ಸುಳ್ಳು ಹೇಳುತ್ತೇನೆಯೆ ?"

" ಬಾಯಿ ತಪ್ಪಿ ಆಡಿದ್ದರೆ ಕ್ಷಮಿಸಿಬಿಡಿ "

" ಬಾಯಲ್ಲೇ ಆಡಿಲ್ಲವಲ್ಲಾ !"

" ಇನ್ನು ಹೇಗೆ ಹೇಳುತ್ತೀರಿ ?"

" ಮನಸ್ಸಿನಲ್ಲೇ ಅಂದುಕೊಂಡಿದ್ದೀ !"

" ನಿಮ್ಮ ಮನಸ್ಸೇ ನನ್ನ ಮನಸ್ಸು. ನಿಮ್ಮ ಮನಸ್ಸಿನಲ್ಲೇನಾದರೂ ಅಂದುಕೊಂಡಿದ್ದರೆ ಇರಬಹುದು ! ನಾನಾಗಿ ನಾನು ಖಂಡಿತ ನನ್ನ ಮನಸ್ಸಿನಲ್ಲಿ ಹಾಗೆ ಅಂದುಕೊಂಡಿಲ್ಲಾ ಅಂದ್ರೆ !"

" ಹೌದು ಸೌಭಾಗ್ಯ. ನಾನೇ ಮನಸ್ಸಿನಲ್ಲಿ ಹಾಗೆ ಅಂದುಕೊಂಡಿದ್ದೆ! ನನ್ನ ಊಹೆ ತಪ್ಪು !"

ಎನ್ನುತ್ತಾ ಸಭಾಪತಿಶಾಸ್ತ್ರಿಗಳು ತಮ್ಮ ಎರಡೂ ಕೈಗಳಿಂದ ಸೌಭಾಗ್ಯಮ್ಮನವರ ಮುಖವನ್ನು ಹಿಡಿದುಕೊಂಡು ರಮಿಸಿದರು.

" ಇನ್ನಾದರೂ ಮಲಗಿ ನಿದ್ದೆ ಮಾಡೀಂದ್ರೆ "

" ಆಗಲಿ, ನಿನ್ನ ಅಪ್ಪಣೆ ಮೀರುವುದಕ್ಕಾಗುತ್ತದೆಯೆ !"

ಎನ್ನುತ್ತಾ ಶಾಸ್ತ್ರಿಗಳು ಪುಸ್ತಕವನ್ನು ಮುಚ್ಚಿಟ್ಟು, ಹಾಸಿಗೆಗೆ ಒರಗಿದರು. ಸೌಭಾಗ್ಯಮ್ಮ ದೀಪ ಕಿರಿದು ಮಾಡಿ, ಗಣಪತಿಗೆ ಸರಿಯಾಗಿ ಹೊದಿಸಿ, ತಾವು ಮಲಗಿದರು.

ಮರುದಿನ ಶಾಸ್ತ್ರಿಗಳು ಎದ್ದಾಗ ಏಳು ಗಂಟೆಯಾಗಿತ್ತು. ಅವರಿಗಿಂತ ಮೊದಲೇ ಎದ್ದು, ಶನಿವಾರದ ಬೆಳಗಿನ ಶಾಲೆಗೆ ಹೊರಡಲು ಸಿದ್ಧನಾಗಿದ್ದ ಗಣಪತಿ— " ಅಪ್ಪಾ, ನಿನಗಿಂತ ನಾನೇ ಮೊದಲು ಎದ್ದು ಬಿಟ್ಟೆ ! ಈವಾಗ ಹೇಳು—ಸೋಮಾರಿ ಯಾರೂಂತ ? "

ಎನ್ನುತ್ತಾ ತಂದೆಯನ್ನು ಅಣಕಿಸಿದ. ಪ್ರತಿದಿನವೂ ಶಾಸ್ತ್ರಿಗಳು— ' ಏಳೋ ಸ್ಕೂಲಿಗೆ ಹೊತ್ತಾಯಿತು-ಸೋಮಾರಿ. ಶುದ್ಧ ಸೋಮಾರಿ— ಏಳೋದು ಏಳು ಗಂಟೆಗೆ ! ' ಎಂದು ಮಗನ ಕಿವಿಯ ಹತ್ತಿರ ಕೂಗಿ ಹೇಳಿ, ಅವನನ್ನು ಎಚ್ಚರಿಸುತ್ತಿದ್ದರು. ಪುಟ್ಟ ಗಣಪತಿ ಅದೇ ಮಾತನ್ನು ಇಂದು

ತಂದೆಗೇ ಹೇಳಿ ಸಂತೋಷಪಟ್ಟುಕೊಂಡ.

"ಅಮ್ಮಾ, ಅಪ್ಪ ಸೋಮಾರಿ! ಇವತ್ತು ಅಪ್ಪ ಸೋಮಾರಿ!"

ಎಂದು ಗಣಪತಿ ಚಪ್ಪಾಳೆ ತಟ್ಟಿಕೊಂಡು ನಕ್ಕಾಗ,

ಸೌಭಾಗ್ಯಮ್ಮ—

"ಶ್ಯ್, ಹಾಗೆಲ್ಲಾ ದೊಡ್ಡವರನ್ನ ಅನ್ನಬಾರದು. ಬಾ, ಸ್ಕೂಲಿಗೆ ಹೊತ್ತಾಯಿತು. ಕಾಫಿ ಕುಡಿದು ಹೋಗುವಿಯಂತೆ"

ಎಂದು ಮಗನನ್ನು ಕರೆದುಕೊಂಡು ಹೋದರು.

"ಪರವಾಗಿಲ್ಲ ಕಣೆ ನಿನ್ನಮಗ! ಅಪ್ಪನನ್ನೂ ಬಿಡೋಲ್ಲ–ಅಪ್ಪನ ಅಪ್ಪನನ್ನೂ ಬಿಡೋಲ್ಲ. ಸೇಡು ತೀರಿಸಿಕೊಂಡು ಬಿಡುತ್ತಾನೆ!"

ನಕ್ಕು ನುಡಿದರು ಸಭಾಪತಿಶಾಸ್ತ್ರಿಗಳು.

"ಸೇಡು ತೀರಿಸಿಕೊಳ್ಳುವುದರಲ್ಲಿ ನೀವೇನು ಕಡಿಮೆಯೇ? ಸೇರಿಗೆ ಸವ್ವಾಸೇರು! ಅದೇ ಗುಣವೇ ಮಗನಿಗೂ. ಎಷ್ಟಾದರೂ ತಂದೆಯಂತೆ ಮಗ ತಾನೆ?"

ಸೌಭಾಗ್ಯಮ್ಮನವರೂ ನಕ್ಕು ಹೇಳಿದರು.

"ಅಣ್ಣಯ್ಯ, ನೀರು ತೋಡಿಟ್ಟಿದ್ದೇನೆ. ಸ್ನಾನ ಮಾಡಿಬಿಡು"

ಶಾಸ್ತ್ರಿಗಳನ್ನು ಎಚ್ಚರಿಸಿದಳು ರುಕ್ಮಿಣಿ.

"ಏನಾದರೂ ಒಂದಿಷ್ಟು ತಿಂಡಿ ಮಾಡಿದರೆ ನಿನಗೆ ತುಂಬಾ ಪುಣ್ಯ ಬರುತ್ತೆ ಕಣೆ ಸೌಭಾಗ್ಯ"

ಎನ್ನುತ್ತಾ ಶಾಸ್ತ್ರಿಗಳು ಸ್ನಾನಕ್ಕೆ ಹೋದರು.

ಅವರ ನಿತ್ಯಕರ್ಮಗಳೆಲ್ಲಾ ಮುಗಿಯುವ ವೇಳೆಗೆ ವೆಂಕಟೇಶಯ್ಯ ಅನಿರೀಕ್ಷಿತವಾಗಿ ಬಂದ.

"ನರಸಮ್ಮ ಆರೋಗ್ಯವಾಗಿದ್ದಾಳೆಯೇ?"

ಬಾಗಿಲಮರೆಯಲ್ಲಿಯೇ ನಿಂತು ಕೇಳಿದರು ಸೌಭಾಗ್ಯಮ್ಮ.

"ಪರವಾಗಿಲ್ಲ. ಸರಾಗವಾಗಿ ಓಡಾಡಿಕೊಂಡಿದ್ದಾಳೆ"

ಎಂದ ವೆಂಕಟೇಶಯ್ಯ.

"ಈಚೆಗೆ ಭದ್ರಯ್ಯ ಸಿಕ್ಕಿದ್ದನೇ ವೆಂಕಟೇಶ?"

"ನಿನ್ನೆ ತಾನೆ ಸಿಕ್ಕಿದ್ದ ಅಣ್ಣಯ್ಯ"

"ಏನು ಸಮಾಚಾರ?"

" ಎಲ್ಲಿದ್ದೀರಿ, ಏನು–ಅಂತ ಕೇಳಿದ "

" ಸತ್ಯ ಹರಿಶ್ಚಂದ್ರನ ಹಾಗೆ ಎಲ್ಲಾ ಹೇಳಿ ಬಿಟ್ಟೆಯೋ....! "

" ಇಲ್ಲ ಅಣ್ಣಯ್ಯ. ಮುನಿತಾಯಪ್ಪ ಹೇಳಿದ ಹಾಗೆ ಒಂದು ನಾಟಕಾನೇ ಆಡಿ ಬಿಟ್ಟೆ ! "

" ಏನಂದ ? "

" ಅವನೂ ಒಂದು ತರಹ ನಾಟಕ ಆಡಿದ ಅನ್ನು ! – ಬೂಟಾಟಿಕೆ ನಾಟಕ ! ' ಅಯ್ಯೋ, ನರಸಮ್ಮನೋರು ಹೋಗಿಬಿಟ್ಟರಾ ? ಅಂಥಾ ಒಳ್ಳೆ ಹೆಂಗಸರು–ಮಹಾ ಪತಿವ್ರತೇರು ಈ ಕಲಿಗಾಲದಲ್ಲಿ ಶಾನೆ ದಿನ ಬದುಕೋಕಿಲ್ಲ ಸ್ವಾಮಿಾ ' ಅಂದ "

" ನಮ್ಮ ವಿಷಯ ಏನಾದರೂ ಬಂತೋ ? "

" ನಿಮ್ಮ ಮನೆ ಎಲ್ಲಿದೆ ತೋರಿಸು–ಅಂದ "

" ನಮ್ಮ ಮನೆಯೋ ?–ಈ ಮನೆಯೋ ? "

" ಹ್ಞಂ "

" ತೋರಿಸಿದೆಯಾ ? "

" ತೋರಿಸದಿದ್ದರೆ, ಅವನು ಸುಮ್ಮನೆ ಬಿಡುತ್ತಾನೆಯೋ ? "

" ಛೆ, ಎಂಥ ಕೆಲಸ ಮಾಡಿಬಿಟ್ಟೆ ವೆಂಕಟೇಶ "

ಅಸವಸೆ ಅಸಮಾಧಾನಗಳಿಂದ ನುಡಿದರು ಶಾಸ್ತ್ರಿಗಳು.

" ಗಾಬರಿ ಪಡಬೇಕಾಗಿಲ್ಲ ಸುಮ್ಮನಿರು ಅಣ್ಣಯ್ಯ. ಏನೂ ಆಗೋಲ್ಲ!"

" ಆಗಬೇಕಾದ್ದೆಲ್ಲಾ ಆಗಿ ಹೋಯಿತಪ್ಪ. ಎಲ್ಲಾ ಮಿಾರಿ ನಡೆದು ಹೋಯಿತು. "

" ನೀನು ತಪ್ಪು ತಿಳಿದುಕೊಂಡೆ ಅಣ್ಣಯ್ಯ....ವುಹ್ಞ....ನಾನೇ ತಪ್ಪು ಹೇಳಿದೆ "

" ಏನದು ? "

" ಭದ್ರಯ್ಯನಿಗೆ ತೋರಿಸಿದ್ದು ಈ ಮನೆಯನ್ನಲ್ಲ ! ಹದಿನೈದನೇ ರಸ್ತೆಯಲ್ಲಿ ಒಂದು ದೊಡ್ಡ ಕಾಂಪೌಂಡಿರುವ ಮನೆ ಇದೆ. ಮರ ಗಿಡಗಳು, ತೋಟ–ಎಲ್ಲಾ ಅಚ್ಚುಕಟ್ಟಾಗಿದೆ. ಆದರೆ ' ದೆವ್ವದ ಕಾಟ ' ಎಂದು ಪುಕಾರೆದ್ದು, ಆ ಮನೆಗೆ ಒಂದು ವರ್ಷದಿಂದ ಯಾರೂ ಬಾಡಿಗೆಗೆ ಬಂದಿಲ್ಲ. ಆ ಮನೆ ತೋರಿಸಿದೆ ಭದ್ರಯ್ಯನಿಗೆ. ''

ವೆಂಕಟೇಶಯ್ಯನ ಮಾತು ಕೇಳಿ ಎಲ್ಲರಿಗೂ ನಗು ಬಂದಿತು.

" ಒಳ್ಳೆ ಕೆಲಸ ಮಾಡಿದೆ ಬಿಡು ! " ಎಂದರು ಶಾಸ್ತ್ರಿಗಳು.

ಸೌಭಾಗ್ಯಮ್ಮ ಇಬ್ಬರಿಗೂ ಉಪಾಹಾರ ತಂದಿತ್ತರು.

ಅದೇ ಸಮಯಕ್ಕೆ ಹೊರಗಡೆ ಬಂದ ಕಮಲಮ್ಮನವರನ್ನು ಕಂಡು—

" ನರಸು ನಿಮ್ಮನ್ನೆಲ್ಲಾ ಕರೆದುಕೊಂಡು ಬಾ ಅಂತ ನನ್ನ ಕಳಿಸಿದ್ದಾಳೆ ಚಿಕ್ಕಮ್ಮ" ಎಂದು ಹೇಳಿದ ವೆಂಕಟೇಶಯ್ಯ.

" ಆಗಲಪ್ಪ. ಸಂತೋಷ"

" ಬೇಗ ಕೆಲಸ ಮುಗಿಸಿಕೊಳ್ಳಿ- ನಾಲ್ಕು ಗಂಟೆಯ ಹೊತ್ತಿಗೆ ಬಂದು ಕರೆದುಕೊಂಡು ಹೋಗುತ್ತೇನೆ" ವೆಂಕಟೇಶಯ್ಯ ಹೊರಡಲನುವಾದ.

" ಕೂತುಕೊಳ್ಳಯ್ಯ ಹೋದರಾಯಿತು "

" ಇಲ್ಲ ಅಣ್ಣಯ್ಯ, ಪಾಠಗಳ ಮನೆಗೆ ಹೋಗಬೇಡವೆ ?"

" ಈಗ ಸಂಪಾದನೆ ಜೋರು ಅಂತ ಕಾಣುತ್ತೆ !"

" ಏನೋ – ಎಲ್ಲಾ ಒಂದು ಇನ್ನೂರು ರೂಪಾಯಿ ಸಿಕ್ಕುತ್ತೆ "

" ಸಾಕಪ್ಪ ಸಾಕು. ದೇವರು ಕೊಟ್ಟಷ್ಟೇ ಸಾಕು....ನಿನ್ನ ಸಂಸಾರಕ್ಕೆ ಅಷ್ಟು ಸಾಲದೇನೊ ವೆಂಕಟೇಶೂ ?" – ಕಮಲಮ್ಮನವರು ಕೇಳಿದರು.

" ಸಾಕು ಚಿಕ್ಕಮ್ಮ "

" ಬಂದಿದ್ದರಲ್ಲೇ ಅಲ್ಪ ಸ್ವಲ್ಪ ಮಿಗಿಸಿಡಪ್ಪ. ದುಂದು ಮಾಡಬೇಡ. ನಿನಗೂ ಮಕ್ಕಳು ಮರಿ ಇವೆ. ಮದುವೆ ಮುಂಜಿ ಕಾಲಕ್ಕೆ ಹಲ್ಲು ಕಿರಿಯೋದು ಬೇಡ !"

" ಖರ್ಚಿನ ಇಲಾಖೆ ನರಸೂಗೆ ಸೇರಿದ್ದು ಚಿಕ್ಕಮ್ಮ. ನನ್ನದೇನಿದ್ದರೂ ಕೈಲಾದಷ್ಟು ಸಂಪಾದಿಸೋದು – ಅವಳ ಕೈಗೆ ಹಾಕಿಬಿಡೋದು !"

" ನರಸಮ್ಮ ಬುದ್ಧಿವಂತೆ. ತಕ್ಕಷ್ಟು ವಿದ್ಯಾವಂತೆ. ಅವಳಿಗೆ ಹೇಳಿ ಕೊಡಬೇಕೇ ?" ಎಂದರು ಸೌಭಾಗ್ಯಮ್ಮ.

" ನಿನ್ನ ಪಾಠಗಳೆಲ್ಲಾ ಇಲ್ಲಿಲ್ಲೇನೋ ಅಥವಾ ಚಾಮರಾಜಪೇಟೆ, ಗುಟ್ಟಹಳ್ಳಿ, ಬಸವನಗುಡಿ ಕಡೆಯೂ ಇಟ್ಟುಕೊಂಡಿದ್ದೀಯೋ ?"

ಸಭಾಪತಿಶಾಸ್ತ್ರಿಗಳು ಕೇಳಿದರು.

ಆ ಕಡೆಯೂ ಒಂದೆರಡು ಪಾಠಗಳಿವೆ. ಮಿಕ್ಕಿದ್ದೆಲ್ಲಾ ಇಲ್ಲೇ.

ನಿಮ್ಮ ಮನೆಯಿಂದ ಈ ಕಡೆ – ಐದನೇ ಮನೇಲ್ಲೂ ಒಂದು ಪಾಠ ಒಪ್ಪಿಕೊಂಡಿದ್ದೇನೆ"

"ಹಾಗಾದರೆ ನಿತ್ಯವೂ ಇಲ್ಲಿಗೆ ಬಂದೇ ಬಂದೇ ಬರುತ್ತೀ ಅನ್ನು"

"ಬರದಿದ್ದರೆ ಹೊಟ್ಟೆ ತುಂಬಬೇಕಲ್ಲ !"

ಎನ್ನುತ್ತಾ ವೆಂಕಟೇಶಯ್ಯ ಕೈಗಡಿಯಾರ ನೋಡಿಕೊಂಡ. ಎಂಟೂವರೆಯಾಗಿದ್ದನ್ನು ಕಂಡು ಆತುರಾತುರದಿಂದ ಹೊರಹೊರಟ.

"ಸಾಯಂಕಾಲ ಬರುತ್ತೇನೆ ಚಿಕ್ಕಮ್ಮ.....ಅಣ್ಣಯ್ಯಾ, ನೀನೂ ಮನೇಲ್ಲೇ ಇರುತ್ತೀ ತಾನೆ ?"

"ಹ್ಞಂ........ನಾನೆಲ್ಲಿಗೆ ಹೋಗಲಪ್ಪ ?"

ಎನ್ನುತ್ತಾ ಶಾಸ್ತ್ರಿಗಳೂ ಎದ್ದರು.

"ನೀನೂ ವೆಂಕಟೇಶನ ಜೊತೆಯಲ್ಲೇ ಹೊರಟೆಯೇನೋ ?"

ಕಮಲಮ್ಮನವರು ಕೇಳಿದರು.

"ಇಲ್ಲಮ್ಮ, ಇಲ್ಲೇ ಒಬ್ಬ ಸ್ನೇಹಿತರನ್ನು ನೋಡಿಕೊಂಡು ಬರಬೇಕು"

ಎಂದರು ಶಾಸ್ತ್ರಿಗಳು.

ವೆಂಕಟೇಶಯ್ಯ ಪಾಟದ ಮನೆಯ ಕಡೆಗೆ ಹೊರಟ. ಶಾಸ್ತ್ರಿಗಳು ಸೊಸೈಟಿಯ ಬಳಿಗೆ ಬಂದು ಬಸ್ಸು ಹತ್ತಿದರು. ಅವರು ಗುಟ್ಟೆಹಳ್ಳಿ ಸೇರಿ, ಕೃಷ್ಣಮಾಚಾರ್ಯರ ಮನೆ ಸೇರುವ ವೇಳೆಗೆ ಒಂಬತ್ತೂವರೆಯಾಗಿತ್ತು. ಆಚಾರ್ಯರು ಆಗ ತಾನೆ ಅಂಗಳಕ್ಕೆ ಬಂದು ಕಾಲು ನೀಡಿಕೊಂಡು ಕುಳಿತಿದ್ದರು.

"ನಮಸ್ಕಾರ ಸ್ವಾಮಿ"

"ನಮಸ್ಕಾರ....ಬನ್ನಿ....ಸುದರ್ಶನ ಬರಲಿಲ್ಲವೇನು ?"

"ಇಲ್ಲ ಸ್ವಾಮಿ. ಅವನಿಗೆ ಇವತ್ತು ಬೆಳಗಿನ ಆಫೀಸು"

"ಏನು ವಿಶೇಷ ಶಾಸ್ತ್ರಿಗಳೆ ?"

"ನಿಮ್ಮ ಹತ್ತಿರವೇ ಒಂದು ವಿಶೇಷ ಕೆಲಸಕ್ಕಾಗಿ ಬಂದೆ"

"ಅಗತ್ಯವಾಗಿ ಹೇಳೋಣವಾಗಲಿ. ಈ ಅಡಿದಾಸನ ಕೈಯಲ್ಲಿ ಆಗುವುದಾದರೆ ಧಾರಾಳವಾಗಿ ಮಾಡೋಣ !"

"ನಿಮ್ಮ ಮನೆತನಕ್ಕೆ ಸಂಬಂಧಿಸಿದ ವಿಷಯ ಕೇಳುತ್ತೇನೆ – ಅಂತ ತಪ್ಪು ತಿಳಿಕೋಬಾರದು"

" ಉಂಟೆ ? ನೀವು ನಮ್ಮ ಸುದರ್ಶನನ ಸ್ನೇಹಿತರು ಅಂದ ಮೇಲೆ ನಮ್ಮ ಮನೆಯವರ ಹಾಗೆಯೇ ಆದಿರಿ !"

ಶಾಸ್ತ್ರಿಗಳು ಎರಡು ನಿಮಿಷ ತಡೆದು, ಹೇಳಿದರು –

" ನಿಮ್ಮ ಮಗಳಿಗೆ ಇನ್ನೂ ವಿವಾಹವಾಗಿಲ್ಲ ಎಂದು ತಿಳಿಯಿತು "

" ಹೌದು ವರನೇ ಸಿಕ್ಕಲಿಲ್ಲವಲ್ಲಾ ! ನನಗೂ ಹುಡುಕಿ ಹುಡುಕಿ ಸಾಕಾಯ್ತು. "

" ನನಗೆ ತಿಳಿದಹಾಗೆ ಒಬ್ಬರಿದ್ದಾರೆ "

" ಸಂತೋಷ. ಒಪ್ಪಿದರೆ ಕನ್ಯಾದಾನ ಮಾಡಲು ಸಿದ್ಧವಾಗಿದ್ದೇನೆ "

" ಆದರೆ ಎರಡನೇ ಮದುವೆ "

" ಮೊದಲನೇ ಹೆಂಡತಿ ? "

" ಆಕೆಯೂ ಇದ್ದಾರೆ "

" ಮತ್ತೇಕೆ ಎರಡನೆ ಮದುವೆ ? "

" ಆಕೆಗೆ ಮಕ್ಕಳಿಲ್ಲ. ಆದ್ದರಿಂದ ಅಕೆಯೇ ತನ್ನ ಗಂಡನಿಗೆ ಎರಡನೆ ಮದುವೆ ಮಾಡಲು ತರದೂದು ಮಾಡುತ್ತಿದ್ದಾರೆ "

ಅಷ್ಟರಲ್ಲಿ ನಾಮಗಿರಿಯಮ್ಮನೂ ಅಲ್ಲಿಗೆ ಬಂದರು. ಅವರಿಗೂ ವಿಷಯ ತಿಳಿಸಿದ್ದಾಯಿತು.

" ಹೆಣ್ಣಿನ ಮೇಲೆ ಹೆಣ್ಣು ಕೊಡುವುದು ಹೇಗಪ್ಪ ? "

" ಅಮ್ಮಾ, ನೀವೇನೂ ಯೋಚಿಸಬೇಡಿ. ಆ ಮೊದಲನೆ ಹೆಂಡತಿಯ ಗುಣ ಅಪ್ಪಟ ಚಿನ್ನ, ನಿಮ್ಮ ಹುಡುಗಿಯನ್ನ ಅವರು ಸವತಿಯಹಾಗೆ ನೋಡಿಕೊಳ್ಳುವುದಿಲ್ಲ. ತಂಗಿಯ ಹಾಗೆ ಕಾಣುತ್ತಾರೆ "

" ಆಗಲಿ ಶಾಸ್ತ್ರಿಗಳೆ, ಮೊದಲು ವರನನ್ನು ನೋಡೋಣ "

" ನೀವು ನೋಡಿದ್ದೀರಾ ಸ್ವಾಮಿಾ "

" ಯಾರು ? "

" ನಮ್ಮ ಸುದರ್ಶನನೇ ! "

ಶಾಸ್ತ್ರಿಗಳ ಮಾತು ಕೇಳಿ ಆಚಾರ್ಯರೂ ನಾಮಗಿರಿಯಮ್ಮನೂ ಬೆರಗಾದರು.

" ಮೊದಲೇ ಹೇಳಲಿಲ್ಲವಲ್ಲಾ ಶಾಸ್ತ್ರಿಗಳೇ ! "

" ನಿಮ್ಮ ಮನಸ್ಸು ತಿಳಿದುಕೊಳ್ಳದೆ ಹೇಗೆ ಹೇಳಲಿ ಸ್ವಾಮಿ ? "

" ಅವನ ಹೆಂಡತಿ ವೈದೇಹಿ – ನನಗೆ ದೂರದ ಸಂಬಂಧ. ತುಂಬಾ ಒಳ್ಳೆಯ ಹುಡುಗಿ " ಎಂದರು ನಾಮಗಿರಿಯಮ್ಮ.

" ಸುದರ್ಶನ ನಮ್ಮ ಹುಡುಗಿಯನ್ನು ಒಪ್ಪಿದ್ದಾನೆಯೇ ಶಾಸ್ತ್ರಿಗಳೇ ? "

" ನಾನೇ ಒಪ್ಪಿಸಿದ್ದೇನೆ ಸ್ವಾಮಿ "

"ಶಾಸ್ತ್ರಿಗಳೇ ನಿಮ್ಮ ಸ್ನೇಹ ನಿಜವಾಗಿಯೂ ನನ್ನ ಪುಣ್ಯ. ನನಗೆ ತಿಳಿಯದ ಹಾಗೆ ನನ್ನ ಕನ್ಯಾಸೆರೆ ಬಿಡಿಸಿ, ಮರೆಯಲಾರದಂತಹ ದೊಡ್ಡ ಉಪಕಾರ ಮಾಡಿದ್ದೀರಿ ! "

" ನಮ್ಮ ನಮ್ಮಲ್ಲಿ ಈ ಉಪಕಾರ ಸ್ಮರಣೆಯ ಮಾತೇಕೆ ಸ್ವಾಮಿ ? ನೀವು ನಮಗೆಲ್ಲಾ ಹಿರಿಯರು ! ನಮ್ಮ ತಂದೆಯ ಸ್ನೇಹಿತರು. ನನ್ನ ಸುದರ್ಶನನ ಪರಮ ಹಿತೈಷಿಗಳು ; 'ನರಸಿಂಹಯಂತ್ರ' ಕೊಡಿಸಿ ನನ್ನ ತಂಗಿ ಮಾನ ಸಂರಕ್ಷಣೆ ಮಾಡಿಕೊಳ್ಳಲು ಅನುಕೂಲ ಮಾಡಿಕೊಟ್ಟವರು – ಎಂದ ಮೇಲೆ ನೀವು ನಿಮಗೇ ತಿಳಿಯದ ಹಾಗೆ ನಮ್ಮವರಾಗಿದ್ದೀರಲ್ಲಾ ಸ್ವಾಮಿ ! "

ಶಾಸ್ತ್ರಿಗಳ ವಿಶಾಲ ವಿಶ್ವ ಮನೋಭಾವನೆಯನ್ನು ಕಂಡು ಕೃಷ್ಣಮಾಚಾರ್ಯರು ಆನಂದತುಂದಿಲರಾದರು.

ಲಗ್ನಪತ್ರಿಕೆಯನ್ನು ಬರೆಸಿಕೊಂಡು, ಅಂದು ಮಧ್ಯಾಹ್ನ ಮನೆಗೆ ಹಿಂತಿರುಗಿದಾಗ ಶಾಸ್ತ್ರಿಗಳು ತುಂಬಾ ಗೆಲುವಾಗಿದ್ದರು. ಅವರು ರಾತ್ರಿಯೆಲ್ಲಾ ಚಿಂತಿಸುತ್ತಾ ಕೊರಗುತ್ತಿದ್ದುದನ್ನು ಕಂಡಿದ್ದ ಸೌಭಾಗ್ಯಮ್ಮ –

" ನಿಮ್ಮ ನಡವಳಿಕೆ ರಾತ್ರಿ – ಹಗಲು ಇದ್ದಹಾಗೆ ಅಂದ್ರೆ ! " ಎಂದರು.

" ಹಾಗಂದರೆ ? "

" ಕತ್ತಲೆ – ಬೆಳಕು........ "

ಶಾಸ್ತ್ರಿಗಳಿಗೆ ಅರ್ಥವಾಗಲಿಲ್ಲ.

" ಕತ್ತಲೆಯಾದರೆ ರಾತ್ರಿ. ರಾತ್ರಿಯೆಲ್ಲಾ ನಿಮಗೆ ಚಿಂತೆ – ಕೊರಗು. ಬೆಳಕಾದರೆ ಹಗಲು. ಹಗಲೆಲ್ಲಾ ನಿಮ್ಮ ಮುಖ ಗೆಲುವು ! "

" ಈಚೀಚೆಗೆ ನೀನು ತುಂಬಾ ಜಾಣೆಯಾಗುತ್ತಿದ್ದೀ ಸೌಭಾಗ್ಯ. ಸೌಭಾಗ್ಯಲಕ್ಷ್ಮಿಯಾಗಿದ್ದವಳಿಗೆ ಈಗ ಸರಸ್ವತಿಯ ಸೌಭಾಗ್ಯವೂ ಸಿಕ್ಕಿಬಿಟ್ಟಿದೆ ! "

ಸಂತೋಷದಿಂದ ನಗುತ್ತಾ ಶಾಸ್ತ್ರಿಗಳು ತಮ್ಮ ಪತ್ನಿಯ ಕೈಗೆ ಲಗ್ನಪತ್ರಿಕೆಯನ್ನಿತ್ತರು. ಇನ್ನು ಆರು ದಿನಗಳಿಗೆ – ಮುಂದಿನ ಶುಕ್ರವಾರವೇ

ಸುದರ್ಶನಯ್ಯಂಗಾರ್ಯರ ಮದುವೆ! ಎರಡೇ ನಿಮಿಷದಲ್ಲಿ ಸುದ್ದಿ ಮನೆಯ ಲ್ಲೆಲ್ಲಾ ಹರಡಿತು. ಎಲ್ಲರಿಗೂ ಆನಂದೋತ್ಸಾಹ!

ನಾಲ್ಕು ಗಂಟೆಯ ಸಮಯಕ್ಕೆ ಬಂದ ಸುದರ್ಶನಯ್ಯಂಗಾರ್ಯರು ಮಿತ್ರನ ಕಾರ್ಯತತ್ಪರತೆಯನ್ನು ಕಂಡು ಅವಾಕ್ಕಾದರು. ಸ್ವಲ್ಪ ಹೊತ್ತಿನ ಬಳಿಕ – "ನೀನು ತಪ್ಪು ಕೆಲಸ ಮಾಡಿದೆ ಸಭಾಪತಿ"

ಎಂದರು ಸುದರ್ಶನಯ್ಯಂಗಾರ್ಯರು.

"ಏನು"

"ನೀನು ಶುಕ್ರವಾರ ಇಲ್ಲಿರುವುದೇ ಇಲ್ಲವಲ್ಲ! ಸೋಮವಾರ ತಿರು ವಣ್ಣಾಮಲೈಗೆ ಹೋದರೆ ಬರುವುದು ಯಾವಾಗಲೋ ಏನೋ?"

"ನಾನಿಲ್ಲದಿದ್ದರೆ ನೀನು ಮದುವೆಯಾಗಬಾರದೇನು?"

"ಗೆಳೆಯನಿಲ್ಲದ ಮದುವೆ – ಅಳಿಯನಿಲ್ಲದ ದೀಪಾವಳಿ ಎರಡೂ ಒಂದೇ! ಈಗ ನೀನು ಗೆಳೆಯನಿಗಿಂತ ಹೆಚ್ಚಾಗಿ ಸೂತ್ರಧಾರ!!"

"ಸೂತ್ರಧಾರ ನಾಟಕಕ್ಕೆ ಮೊದಲು ಸ್ವಲ್ಪಕಾಲ ರಂಗದಮೇಲೆ ಕಾಣಿಸಿಕೊಳ್ಳುತ್ತಾನೆಯೇ ಹೊರತು, ನಾಟಕ ಷುರು ಆದಮೇಲೆ ಅವನಿಗೆ 'ಎತ್ತಂಗಡಿ'ಯೇ ತಾನೆ!" ಶಾಸ್ತ್ರಿಗಳು ನಕ್ಕು ಹೇಳಿದರು.

ಅಷ್ಟರಲ್ಲಿ ವೆಂಕಟೇಶಯ್ಯನೂ ಬಂದ. ಅವನಿಗೂ ಮದುವೆಯ ಸುದ್ದಿ ತಿಳಿಯಿತು. ಸುದರ್ಶನಯ್ಯಂಗಾರ್ಯರನ್ನು ಅಭಿನಂದಿಸಿದ.

ಕಾಫಿ ಸಮಾರಾಧನೆ ಮುಗಿಯಿತು.

"ಇನ್ನು ಹೊರಡೋಣವೇ ಚಿಕ್ಕಮ್ಮ?"

ವೆಂಕಟೇಶಯ್ಯ ಕಮಲಮ್ಮನವರ ಮುಖ ನೋಡಿದ.

"ಇವತ್ತು ಬೇಡ ವೆಂಕಟೇಶು. ಇನ್ನೊಂದು ಸಾರಿ ಬರುತ್ತೇನೆ."

"'ಅವಳು' ನಿನಗೋಸ್ಕರ ಕಾದಿರುತ್ತಾಳೆ ಚಿಕ್ಕಮ್ಮ"

"ರುಕ್ಕುವನ್ನು ಬಿಟ್ಟು ಹೇಗೆ ಬರಲೋಪ್ಪ? .... ಇವತ್ತು ಸೌಭಾಗ್ಯ ವನ್ನು ಕರೆದುಕೊಂಡು ಹೋಗು. ಇನ್ನೊಂದು ಸಾರಿಗೆ ನಾನು ಬರುತ್ತೇನೆ"

"ಹಾಗೇ ಆಗಲಿ ಚಿಕ್ಕಮ್ಮ. ಅತ್ತಿಗೆಯನ್ನೇ ಕಳಿಸು"

ಎಂದ ವೆಂಕಟೇಶಯ್ಯ. ಅದೇ ಸಮಯಕ್ಕೆ ಒಳಗೆ ಹೋದ ಶಾಸ್ತ್ರಿಗಳನ್ನು—

"ನಾನು ವೈದೇಹಮ್ಮನವರನ್ನು ನೋಡಬೇಕೂ ಅಂದ್ರೆ"

ಎಂದು ಕೇಳಿದರು ಸೌಭಾಗ್ಯಮ್ಮ.

"ಅವರ ಮನೆಗೇ ಹೋಗಿ ಬರೋಣ"

"ನರಸೂ ಮನೆಗೆ ?"

"ಅಲ್ಲಿಗೂ ಹೋಗೋಣ. ವಾಪಸ್ಸು ಬರುವಾಗ ವೈದೇಹಮ್ಮನವರ ಮನೆಗೆ ಹೋದರಾಯಿತು." ಎಂದರು ಶಾಸ್ತ್ರಿಗಳು.

ಸೌಭಾಗ್ಯಮ್ಮ ಸಿಸ್ತಾದರು. ಪುಟ್ಟ ಗಣೇಶನೂ ಹೊರಡಲು ಸಿದ್ಧನಾದ.

"ಹಾಗಾದರೆ ನಾನು ಹೋಗಲೆ ಸಭಾಪತಿ ?"

ಎಂದು ಕೇಳಿದರು ಸುದರ್ಶನಯ್ಯಂಗಾರ್ಯರು.

"ನಾವು ವೆಂಕಟೇಶಯ್ಯನ ಮನೆಗೆ ಹೋಗಿಬಿಟ್ಟು, ಬರುವಾಗ ನಿಮ್ಮ ಮನೆಗೆ ಬರುತ್ತೇವೆ....ವೈದೇಹಮ್ಮನವರಿಗೆ ಹೇಳು"

ಎನ್ನುತ್ತಾ ಶಾಸ್ತ್ರಿಗಳು ಮಿತ್ರನನ್ನು ಕಳುಹಿಸಿದರು.

ದಾರಿಯಲ್ಲಿ ಶಾಸ್ತ್ರಿಗಳು ತಾವು ತಿರುವಣ್ಣಾಮಲೈಗೆ ಹೋಗಲಿರುವ ಸಂಗತಿಯನ್ನೂ, ಗಣಪತಿ ಔಪಾಸನೆ ಕೈಗೊಳ್ಳಲಿರುವ ಸಂಗತಿಯನ್ನೂ ವೆಂಕಟೇಶಯ್ಯನಿಗೆ ತಿಳಿಸಿದರು. ಈ ವಿಷಯಗಳನ್ನೆಲ್ಲಾ ಗುಟ್ಟಾಗಿಟ್ಟಿರ ಬೇಕೆಂದು ಒತ್ತಿ ಒತ್ತಿ ಹೇಳಿದರು.

"ಆಗಲಿ ಅಣ್ಣಯ್ಯ, ದೇವರು ನಿನ್ನಂತಹವರಿಗೆ ನೂರು ವರ್ಷ ಆಯುಸ್ಸು ಕೊಟ್ಟು ಕಾಪಾಡಬೇಕು. ನಿಮ್ಮಂತಹವರಿಂದಲೇ ನನ್ನಂತಹ ಸಾವಿರಾರು ಜನ ಸುಖ ಪಡುತ್ತಾರೆ"

"ಯಾರಿಂದ ಯಾರೂ ಅಲ್ಲ ವೆಂಕಟೇಶ. ಅದೆಲ್ಲಾ ಭ್ರಾಂತಿ! ನಡೆಯುವವನೂ ನಡೆಸುವವನೂ, ಮಾಡುವವನೂ ಮಾಡಿಸುವವನೂ ಒಬ್ಬನೇ–ಪರಮೇಶ್ವರ. ನಾವು ಸೂತ್ರದ ಗೊಂಬೆಗಳು"

"ನಾನು ದೇವರ ವಿಷಯದಲ್ಲಿ ನಂಬಿಕೆ ಕಳೆದುಕೊಂಡಿದ್ದೆ ಅಣ್ಣಯ್ಯ. ಆದರೆ ನರಸುವಿನ ಪ್ರಸಂಗ ಮತ್ತೆ ನನ್ನ ಕಣ್ಣು ತೆರೆಯಿಸಿತು. ತೆರೆದ ಕಣ್ಣು ಮುಚ್ಚಿ ಮಬ್ಬು ಕವಿಯುದ ಹಾಗೆ ನೀನು ಪವಾಡ ಮಾಡುತ್ತಿದ್ದೀಯೆ !"

ಎಂದ ವೆಂಕಟೇಶಯ್ಯ.

ಮನೆ ಸಮೀಪಿಸಿತ್ತು. ಬಾಗಿಲ ಬಳಿಯೇ ನಿಂತು ಹಣಿಕಿ ನೋಡು ತ್ತಿದ್ದ ನರಸಮ್ಮ ಉತ್ಸಾಹದಿಂದ ಸ್ವಾಗತಿಸಿದಳು. ತಂಗಿಯನ್ನು ಕಂಡ ಅಕ್ಕನಂತೆ ಸೌಭಾಗ್ಯಮ್ಮ ಅವಳನ್ನು ಅಪ್ಪಿಕೊಂಡರು.

"ನರಸೂ, ಈಗ ಮೈ ಸ್ವಸ್ಥವಾಗಿದೆಯೇನಮ್ಮ?"

"ನಿಮ್ಮ ಆಶೀರ್ವಾದ – ಅಕ್ಕಯ್ಯ."

"ಮಕ್ಕಳೆಲ್ಲಾ ಎಲ್ಲಿ ? – ಕಾಣುವುದೇ ಇಲ್ಲವಲ್ಲಾ !"

"ಸ್ಕೂಲಿಗೆ ಸೇರಿಸಿದ್ದಾರೆ........"

"ಮನೆಯಲ್ಲಿ ನೀನೊಬ್ಬಳೇ – ಬೇಜಾರು !"

"ಇದೋ, ಬೇಜಾರು ಕಳೆಯೋದಿಕ್ಕೆ ಇದೊಂದು ಇದೆಯಲ್ಲಾ !

ನರಸಮ್ಮ ತನ್ನ ಕೈಗೂಸನ್ನು ತೋರಿಸುತ್ತಾ ಮುತ್ತಿಟ್ಟಳು.

"ಅದಕ್ಕೇ ಕಾಣೆ ನರಸೂ , ಮಕ್ಕಳಾಗಬೇಕು ಅನ್ನೋದು !"

ನಕ್ಕು ನುಡಿದರು ಸೌಭಾಗ್ಯಮ್ಮ.

"ಹ್ಞಂ, ಮನೆ ಅಚ್ಚುಕಟ್ಟಾಗಿದೆ ತಾನೆ ?"

ಸೌಭಾಗ್ಯಮ್ಮನವರಿಗೆ ಮನೆಯಲ್ಲಾ ತೋರಿಸಿದಳು ನರಸಮ್ಮ.

ಹೊರಗಡೆ ಎರಡು ಕೋಣೆ, ಚಿಕ್ಕ ಹಜಾರ, ಅಡಿಗೆ ಮನೆ, ಅದರ ಎದುರಿಗೆ ಬಚ್ಚಲು ಮನೆ. ಹಿಂದುಗಡೆ ಬೃಂದಾವನ ಮತ್ತು ಹೂಗಿಡ ಬೆಳಸಲು ಅನುಕೂಲವಾದ ಪುಟ್ಟ ಬಯಲು

"ನಿಮ್ಮ ಆ ಅಲಸೂರು ಪೇಟೆಯ ಮನೆಗಿಂತ ಈ ಮನೆ ತುಂಬಾ ಚೆನ್ನಾಗಿದೆಯಮ್ಮ" ಎಂದರು ಸೌಭಾಗ್ಯಮ್ಮ.

ತಟ್ಟನೆ ನರಸಮ್ಮನಿಗೆ ರುಕ್ಮಿಣಿಯ ನೆನಪು ಹುಳಿಯಾಯಿತು.

"ಅಕ್ಕಾ, ರುಕ್ಕೂ ಗ್ರಹಚಾರ ಹಾಗೇ ಇದೆಯಾ ?"

"ಹೌದಮ್ಮ"

"ಅದಕ್ಕೇನೂ ಮಾಡುವುದಕ್ಕಾಗುವುದಿಲ್ಲವೆ ?"

"ಮಾಡುವುದನ್ನೆಲ್ಲಾ ಮಾಡಿದ್ದಾರಮ್ಮ. ಅದಕ್ಕಾಗಿ ನಿಮ್ಮ ಭಾವನೇ 'ಮಂತ್ರವಿದ್ಯೆ' ಕಲಿಯಲು ನಿಶ್ಚಯ ಮಾಡಿದ್ದಾರೆ"

ನರಸಮ್ಮನಿಗೆ ಆಶ್ಚರ್ಯವಾಯಿತು.

"ಭಾವನೇ ?"

"ಹೌದಮ್ಮ. ಅದಕ್ಕೋಸ್ಕರ ಸೋಮವಾರ ಬೆಂಗಳೂರು ಬಿಡುತ್ತಾರೆ"

"ಬರುವುದು ?"

"ಅದು ಹೇಗಮ್ಮ ಹೇಳೋದು ? ಹೋದ ಮೇಲೆ ವಿದ್ಯೆ ಕಲಿಯದೆ

ಬರುವುದಿಲ್ಲ. ಅದಕ್ಕೆ ಎಷ್ಟುದಿನ ಬೇಕೋ ಏನೋ ?"

ನರಸಮ್ಮ ಮೂಕಳಾದಳು.

"ನೀವು ಗಂಡ – ಹೆಂಡತಿಯರು ನಮ್ಮ ಹಾಗೆ ಮನುಷ್ಯರಲ್ಲ ಅಕ್ಕ. ಮನುಷ್ಯರ ಉದ್ಧಾರಕ್ಕೇ ಮನುಷ್ಯ ರೂಪ ಧರಿಸಿ ಬಂದ ದೇವತೆಗಳು"

ನರಸಮ್ಮನ ಕಣ್ಣುಗಳು ತುಂಬಿದವು. ಅವಳ ಹೃದಯ ಭಾವಾವೇಗ ದಿಂದ ಮೊರೆಯಿತು. ಸೌಭಾಗ್ಯಮ್ಮ ಅವಳ ಮನಸ್ಥಿತಿಯನ್ನು ಅರಿತುಕೊಂಡರು. ಎರಡು ಕ್ಷಣ ಸುಮ್ಮನಿದ್ದು, ಅನಂತರ—

"ನೀವೆಲ್ಲಾ ಹೀಗೆಯೇ ನಮ್ಮನ್ನು ಉಬ್ಬಿಸುತ್ತೀರಿ! ಕೊನೆಗೆ, ಆಕಡೆ ದೇವತೆಗಳೂ ಅಲ್ಲ – ಈಕಡೆ ಮನುಷ್ಯರೂ ಅಲ್ಲ....ಮೃಗಗಳೇ ಆಗಿ ಬಿಡು ತ್ತೇವೋ ಏನೋ !"

ಎಂದು ನಗುತ್ತಾ ಮಾತು ಮರೆಸಲು ಯತ್ನಿಸಿದರು ಸೌಭಾಗ್ಯಮ್ಮ.

"ಸರಿ, ಬಾ ಇನ್ನು ಅಡಿಗೆ ಮನೆ ಅರಮನೆಗೆ. ಏನೇನು ಮಾಡಿಟ್ಟಿ ದ್ದೀಯೋ ನೋಡೋಣ"

ಮೆಲುನಗೆ ನಕ್ಕು ನರಸಮ್ಮ ಅಡಿಗೆ ಮನೆಗೆ ಬಂದಳು.

"ಕೇಸರಿ – ಗೋಡಂಬಿಯ ವಾಸನೆ ಬರುತ್ತಿದೆಯಲ್ಲೇ ನರಸು ! ಏನು ಮಾಡಿದ್ದೀಯೇ ?"

"ಏನೂ ಇಲ್ಲ ಅಕ್ಕ"

ಎನ್ನುತ್ತಾ ಸಂಕೋಚದಿಂದ ಡಬರಿಯ ಮುಚ್ಚಳ ತೆಗೆದಳು ನರಸಮ್ಮ.

"ಓಹೋ ! ಕೇಸರಿ ಭಾತೋ ?....ಹ್ಞುಂ, ಸರಿ....ಖಾರ ?"

"ಒಂದೆರಡು ಆಂಬೊಡೆ ಮಾಡಿದ್ದೀನಕ್ಕ"

"ಆಮೇಲೆ ?"

"ಅಷ್ಟೇ ಅಕ್ಕ"

"ಕಾಫಿ ?"

"ಕಾಫಿ ಮಾಡದಿದ್ದರೆ ಆಗುತ್ತದೆಯೇ ?"

"ಸದ್ಯ, ಇಷ್ಟೇ ತಾನೆ ! ಅಥವಾ ಇನ್ನೂ ಏನಾದರೂ ಮಾಡಿಟ್ಟೇ ದ್ದೀಯೋ ?"

"ಇಲ್ಲಕ್ಕ"

"ಸುಳ್ಳು ಹೇಳುತ್ತೀಯಲ್ಲೇ"

ಎನ್ನುತ್ತಾ ಸೌಭಾಗ್ಯಮ್ಮ ತುಸು ದೂರದಲ್ಲಿ, ಗೋಡೆಯ ಬದಿಯಲ್ಲಿ ಇಟ್ಟಿದ್ದ ತಟ್ಟೆಯ ಕಡೆಗೆ ನೋಡಿದಳು.

ನರಸಮ್ಮ ನಾಚಿಕೆಯಿಂದ ನಗುತ್ತಾ—

" ಒಂದೆರಡು ಕಿತ್ತಲೆಹಣ್ಣು – ಅಷ್ಟೇ ಅಕ್ಕ " ಎಂದಳು.

ಸೌಭಾಗ್ಯಮ್ಮ ಅವಳ ಬೆನ್ನಿನ ಮೇಲೆ ಮೃದುವಾಗಿ ಹೊಡೆದು—

" ಸಾಕೇನೇ ನರಸೂ ?"

ಎನ್ನುತ್ತಾ ಕೋಮಲವಾಗಿ ನರಸಮ್ಮನ ಕೆನ್ನೆ ಹಿಂಡಿದರು.

' ಬಂಧುತ್ವದಲ್ಲಿ ಓರಗಿತ್ತಿಯಾದ ಸೌಭಾಗ್ಯಮ್ಮನಿಗೆ ಯಾವ ಜನ್ಮದಲ್ಲಿ ನಾನು ತಂಗಿಯಾಗಿ ಹುಟ್ಟಿದ್ದೆನೋ ! ಈಗಂತೂ ಅವಳು ನನಗೆ ಮುದ್ದು ಅಕ್ಕನಾಗಿ – ಅಮ್ಮನಾಗಿ ಇದ್ದಾಳೆ. ಅವಳ ಅಗಾಧ ಪ್ರೇಮ ಪ್ರೀತಿಗಳಿಗೆ ಪ್ರತಿಯಾಗಿ ನಾನೇನು ಕೊಡಬಲ್ಲೆ ? ಈ ಜನ್ಮಾಂತರದ ಋಣವನ್ನು ಎಂದು ತೀರಿಸಬಲ್ಲೆ ?' – ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು ನರಸಮ್ಮ.

ಹಜಾರದಲ್ಲಿ ಎಲ್ಲರೂ ಒಟ್ಟಿಗೇ ಕುಳಿತು ಉಪಾಹಾರ ಮಾಡಿದರು. ಅನಂತರ ಸ್ವಲ್ಪ ಹೊತ್ತು ಎಲ್ಲರೂ ಸಂತೋಷದಿಂದ ಮಾತನಾಡುತ್ತಿದ್ದರು. ಗಣಪತಿ ವೆಂಕಟೇಶಯ್ಯನ ಮಕ್ಕಳೊಡನೆ ಹಳೆಯ ಗೆಳೆತನದ ವೈಭವವನ್ನು ಮತ್ತೆ ಮೆರೆಸಿದ.

ಹೊರಡುವಾಗ ಸೌಭಾಗ್ಯಮ್ಮನ ಹಣೆಗೆ ಕುಂಕುಮವಿಟ್ಟು, ಎಲೆಯಡಿಕೆ ಕೊಟ್ಟಳು ನರಸಮ್ಮ. ರುಕ್ಮಿಣಿ ಮತ್ತು ಕಮಲಮ್ಮನವರಿಗಾಗಿ ಕೈ ಚೀಲ ದಲ್ಲಿ ಹಣ್ಣುಗಳನ್ನು ತುಂಬಿಕೊಟ್ಟಳು.

" ಅಕ್ಕಾ, ಇನ್ನು ನೀವು ಬರುವುದು ಯಾವಾಗಲೋ ?"

" ಬರುತ್ತೇನಮ್ಮ "

" ನಾನಂತೂ ಈ ' ಪರಿವಾರ ' ಕಟ್ಟಿಕೊಂಡು ಎಲ್ಲಿಗೂ ಹೋಗಿ ಬರು ವಂತಿಲ್ಲ. ನೀನಾದರೂ ಬಂದು ಈ ತಬ್ಬಲಿ ತಂಗಿಯನ್ನು ವಿಚಾರಿಸಿಕೊಳ್ಳ ದಿದ್ದರೆ ಹೇಗಕ್ಕ ?" ಎಂದಳು ನರಸಮ್ಮ.

ಸೌಭಾಗ್ಯಮ್ಮನವರ ಕಣ್ಣು ಹಸಿಯಿಟ್ಟಿತು. ಅವರು ನರಸಮ್ಮನನ್ನು ಅಪ್ಪಿಕೊಂಡು—

" ನೀನೇಕೆ ತಬ್ಬಲಿಯೇ ತಾಯಿ ?–ನಾವೆಲ್ಲಾ ಇರುವಾಗ. ನಿನ್ನಂತಹ ತಂಗಿ ಸಿಕ್ಕಬೇಕಾದರೆ ನಾನೆಷ್ಟು ಜನ್ಮದಲ್ಲಿ ಬಯಸಿದ್ದೆನೋ "

" ಆ ಮಾತು ನಾನು ಹೇಳಬೇಕು ಅಕ್ಕಯ್ಯ "

" ಪರವಾಗಿಲ್ಲಮ್ಮ "

ಇಬ್ಬರ ಕಣ್ಣಲ್ಲಿಯೂ ನೀರು. ಮಗಳನ್ನು ಗಂಡನ ಮನೆಯಲ್ಲಿ ಬಿಟ್ಟು ಹೊರಟ ತಾಯಿಯಂತಾಗಿದ್ದರು ಸೌಭಾಗ್ಯಮ್ಮ. ಹೆಂಡತಿಯನ್ನು ಕಂಡು ಶಾಸ್ತ್ರಿಗಳಿಗೂ ಮನಸ್ಸು ಬಿರಿದಿತ್ತು.

ಪತಿ-ಪತ್ನಿಯರು ಕುಮಾರ ಕಂಠೀರವನೊಡನೆ ಸುದರ್ಶನಯ್ಯಂಗಾರ್ಯರ ಮನೆ ಸೇರಿದರು. ಅಷ್ಟರಲ್ಲಿ ಗಂಟೆ ಎಂಟು ಹೊಡೆಯಿತು.

" ಇಲ್ಲಿ ಹೆಚ್ಚು ಹೊತ್ತು ಇರುವುದಕ್ಕೆ ಆಗುವುದಿಲ್ಲಪ್ಪಾ "

ಎನ್ನುತ್ತಲೇ ಶಾಸ್ತ್ರಿಗಳು ಒಳಗೆ ಬಂದರು.

ವೈದೇಹಮ್ಮನವರು ಸೌಭಾಗ್ಯಮ್ಮನವರನ್ನು ಒಳಗೆ ಕರೆದುಕೊಂಡು ಹೋದರು.

" ಸೌಖ್ಯವಾಗಿದ್ದೀರಾ ವೈದೇಹಮ್ಮ ?"

" ನಿಮ್ಮಂತಹ ತಾಯಿ ನಮ್ಮ ಕಡೆ ಕಣ್ಣುಬಿಟ್ಟು ನೋಡಿದ ಮೇಲೆ ಸುಖವಾಗಿಲ್ಲದೆ ಇರುತ್ತೇವೆಯೇ ಸೌಭಾಗ್ಯಮ್ಮ ?"

ಎನ್ನುತ್ತಾ ವೈದೇಹಮ್ಮ ಅಡಿಗೆಮನೆಗೆ ನಡೆದರು. ಬರುವಾಗ ಅವರೊಡನೆ ತಿಂಡಿಯ ತಟ್ಟೆ ಬಂದೇ ಬಂದಿತು !

" ನನಗೆ ಗೊತ್ತಿತ್ತು ವೈದೇಹಮ್ಮ !"

" ಏನು ?"—ಗಾಬರಿಯಿಂದ ಕೇಳಿದರು ವೈದೇಹಮ್ಮ.

" ತಿಂಡಿ ತರುತ್ತೀರಿ ಅಂತ "

" ಓ, ಅಷ್ಟೇ ತಾನೆ !"

" ಯಾಕೆ – ಸಾಲದೇನು ?"

" ಸಾಕು ತಾಯಿ ಸಾಕು ! ಸಂತಾನಲಕ್ಷ್ಮಿಯನ್ನೇ ನಮ್ಮ ಮನೆಗೆ ತಂದುಕೊಡುತ್ತೀರಲ್ಲಾ – ಅದಕ್ಕಿಂತ ಹೆಚ್ಚೇನು ಈ ತಿಂಡಿ ತಿನಸು ?"

" ಹ್ಞಂ, ಪ್ರೀತಿಯಿಂದ ಕೊಟ್ಟರೆ ಯಾವುದು ಕಡಿಮೆ ಹೇಳಿ ?"

" ನಿಮ್ಮ ಹತ್ತಿರ ಮಾತಾಡಿ ಗೆಲ್ಲಲಾರೆನಮ್ಮ ! "

ಎಂದು ನಕ್ಕರು ವೈದೇಹಮ್ಮ.

" ಮದುವೆಯಾದ ಮಾರನೇ ದಿನವೇ ಮನೆ ತುಂಬಿಸಿಕೊಳ್ಳುತ್ತೀರಾ ವೈದೇಹಮ್ಮ ?"

"ಮದುವೆಯ ದಿನವೇ – ರಾತ್ರಿ ಆ ಕೆಲಸ ಮಾಡಿಬಿಡೋಣ ಅಂತ ಆಸೆ. ಅವತ್ತು ಹೇಗಿದ್ದರೂ ಶುಕ್ರವಾರ. ಸಂತಾನಲಕ್ಷ್ಮಿಯ ಹಾಗೆ ನನ್ನ ತಂಗಿ ತನ್ನ ಮನೆಗೆ ಬಂದು ಬೆಳಗಲಿ"

"ಹೌದಮ್ಮ. ನಿಮ್ಮದು ಒಳ್ಳೆಯ ಯೋಚನೆಯೇ. ಆದರೆ ಹೆಣ್ಣಿನ ಕಡೆಯವರು ಏನು ಹೇಳುತ್ತಾರೆಯೋ?"

"ಅದಕ್ಕೊಂದು ಪಿತೂರಿ ಮಾಡಿದ್ದೀನಿ ಸೌಭಾಗ್ಯಮ್ಮ!"

ಎಂದು ವೈದೇಹಮ್ಮನವರು ನಗುತ್ತಾ,

"ಹೇಗಿದ್ದರೂ ದೇವಸ್ಥಾನದಲ್ಲಿ ಮದುವೆಯ ಶಾಸ್ತ್ರ. ಅಲ್ಲಿಂದ ನೇರ ವಾಗಿ ಎಲ್ಲರನ್ನೂ ಕರೆದುಕೊಂಡು ಹೆಣ್ಣಿನ ಮನೆಗೆ ಹೋಗದೆ, ಈ ಮನೆಗೇ ಬಂದು ಬಿಡುವುದು. ರಾತ್ರಿಗೆ ನಿಷೇಕದ ಶಾಸ್ತ್ರ ಮುಗಿಸಿ, ಹುಡುಗಿಯನ್ನು ಇಲ್ಲೇ ಇಟ್ಟುಕೊಂಡು ಬಿಡೋದು!" ಎಂದರು.

"ಎಷ್ಟೊಂದು ಆಸೇರಿ ವೈದೇಹಮ್ಮ ನಿಮಗೆ?"

"ನಾನು ಏನು ಆಸೆಪಟ್ಟರೂ ನಡೆಸಿಕೊಡೋದಕ್ಕೆ ನೀವಿದ್ದೀರಲ್ಲಾ ಸೌಭಾಗ್ಯಮ್ಮ! ನನಗೇನು ಚಿಂತೆ?"

"ಹ್ಞಂ, ನಾವೇನಮ್ಮ ಅಂತಹ ಯಕ್ಷಿಣಿ ಮಾಡೋದು?"

"ನೀವು ಮಾಡೋದು ಯಾವುದು ತಾನೆ ಯಕ್ಷಿಣಿಯಲ್ಲ – ಹೇಳಿ"

ಎಂದರು ವೈದೇಹಮ್ಮ.

ಮನಸ್ಸಿನಲ್ಲಿಯೇ ಕೃತಜ್ಞತೆಯಿಂದ ದೇವರನ್ನು ಸ್ಮರಿಸುತ್ತಾ ತಿಂಡಿಯ ತಟ್ಟೆಗೆ ಕೈಯಿಟ್ಟರು ಸೌಭಾಗ್ಯಮ್ಮ.

"ಮದುವೆಗೆ ಮುಖ್ಯವಾಗಿ ನಿಮ್ಮ ಯಜಮಾನರೇ ಇರುವುದಿಲ್ಲವಲ್ಲ, ಸೌಭಾಗ್ಯಮ್ಮ"

ವಿಷಾದದ ದನಿಯಲ್ಲಿ ವೈದೇಹಮ್ಮ ಕೇಳಿದರು.

ಅದೇ ಸಮಯಕ್ಕೆ 'ಯಜಮಾನ'ರು –

"ಎಂಟೂವರೆ ಆಯಿತು ಸೌಭಾಗ್ಯ" ಎಂದು ಎಚ್ಚರಿಸಿದರು.

"ಹೌದು ವೈದೇಹಮ್ಮ. ನಮ್ಮ ರುಕ್ಕು ಸ್ಥಿತಿ ನಿಮಗೆ ತಿಳಿದಿದೆಯಲ್ಲ. ಅವಳ ಗತಿ ನೆಟ್ಟಗಾಗುವವರೆಗೂ ಮನೆಯಲ್ಲಿ ಯಾರಿಗೂ ಸಮಾಧಾನವಿಲ್ಲ. ಅದಕ್ಕೋಸ್ಕರವೇ 'ಅವರು' ಸೋಮವಾರ ತಿರುವಣ್ಣಾಮಲೈಗೆ ಹೋಗು ತ್ತಾರೆ. ಬರುವುದು ಸ್ವಲ್ಪ ತಡ....ನೋಡಿ, ಈಗಲೂ ಎಂಟೂವರೆಯಾಯಿತು

ಅಂತ ಅವಸರಿಸುತ್ತಿದ್ದಾರೆ. ರುಕ್ಕೂಗೆ ಆವೇಶ ಬರುವ ಹೊತ್ತು ಸಮೀಪಿಸುತ್ತಾ ಇದೆ. ಆ ಸಮಯದಲ್ಲಿ ಮನೆಯಲ್ಲಿ ಯಾರಾದರೂ ಗಂಡಸರಿರಲೇಬೇಕು" ಎನ್ನುತ್ತಾ ಸೌಭಾಗ್ಯಮ್ಮನವರು ಹೊರಡಲನುವಾದರು.

"ಕಾಫಿ ತೆಗೆದುಕೊಳ್ಳಿ ಸೌಭಾಗ್ಯಮ್ಮ"

ಅನಂತರ ಕಂಕುಮ ಕೊಟ್ಟು, ತಾಂಬೂಲ ಕೊಟ್ಟು ಸೌಭಾಗ್ಯಮ್ಮನವರನ್ನು ಬೀಳ್ಕೊಟ್ಟರು ವೈದೇಹಮ್ಮ.

ಕೊನೆಯ ಗಳಿಗೆಯಲ್ಲಿ –

"ನಾಳೆ ನಾನೂ – 'ಅವರೂ' ಹಳ್ಳಿಗೆ ಹೋಗಿ ಬರು[illegible]ವೆ ಸೌಭಾಗ್ಯಮ್ಮ. ನಮ್ಮ ಮಾವನವರಿಗೆ ನಾನೇ ಈ ಮದುವೆಯ ವಿಷಯ ತಿಳಿಸಬೇಕು. ಹಾಗೆಯೇ ಬಂಧು – ಬಳಗವನ್ನೂ ಕರೆದುಬಿಟ್ಟು ಬರುತ್ತೇನೆ"

ಎಂದರು ವೈದೇಹಮ್ಮ.

"ಒಳ್ಳೆಯದು ತಾಯಿ, ಹೋಗಿ ಬನ್ನಿ. ದೇವರು ನಿಮಗೆ ಎಂದೆಂದೂ ಒಳ್ಳೆಯದು ಮಾಡುತ್ತಾನೆ"

ಎನ್ನುತ್ತಾ ಸೌಭಾಗ್ಯಮ್ಮ ಪತಿ – ಪುತ್ರರೊಡನೆ ತಮ್ಮ ಮನೆಯ ಕಡೆ ನಡೆದರು.

ಆ ರಾತ್ರಿ ಸೌಭಾಗ್ಯಮ್ಮನವರಿಗೆ ಮೈ ಬಿಸಿಯಾಗಿತ್ತು. ಹಾಸಿಗೆ ಮೇಲೆ ಹೊರಳಾಡುತ್ತಾ ಬೆಳಗಿನವರೆಗೂ ಮುಲುಕುತ್ತಲೇ ಇದ್ದರು. ಎದ್ದಾಗ ಮುಖ ದುಮುಗುಟ್ಟುತ್ತಿತ್ತು. ಪತ್ನಿಯ ಪರಿಸ್ಥಿತಿಯನ್ನು ಕಂಡು ಶಾಸ್ತ್ರಿಗಳು ಅಧೀರರಾದರು. ಕಮಲಮ್ಮನವರಿಗೆ ಕೈ ಮುರಿದಂತಾಯಿತು.

ರುಕ್ಮಿಣಿ ಅತ್ತಿಗೆಯ ಸೇವೆಗೆ ನಿಂತಳು.

ಮನೆಯಲ್ಲಿ ಏಕೋ ಎಲ್ಲರಿಗೂ ಬೇಸರ. ಯಾರ ಮುಖದಲ್ಲಿಯೂ ಗೆಲುವಿಲ್ಲ, ಕಳೆಯಿಲ್ಲ. 'ಬಿಕೋ' ಎನ್ನಿಸುತ್ತಿತ್ತು ಮನೆಯೆಲ್ಲಾ.

"ನನ್ನ ಸೊಸೆ ಒಂದು ದಿನ ಕಾಯಿಲೆ ಅಂತ ಮಲಗಿಕೊಂಡುಬಿಟ್ಟರೆ ನನ್ನ ಮನೆ ಹಾಳು ಸುರಿಯುತ್ತೆ ಕಣೆ ರುಕ್ಕು"

ಎಂದರು ಕಮಲಮ್ಮ. ಹೆತ್ತ ಮಗಳಿಗಿಂತ ಹೆಚ್ಚಾದ ಮಗಳಾಗಿದ್ದಳು ಸೊಸೆ ಅವರ ಕಣ್ಣಿಗೆ.

ಡಾಕ್ಟರು ಬಂದರು. ಅವರು ಬಂದರೆಂಬ ಪ್ರಜ್ಞೆಯೂ ಇರಲಿಲ್ಲ ಸೌಭಾಗ್ಯಮನವರಿಗೆ. 'ಸ್ಟೆತೋಸ್ಕೋಪ್'ನಿಂದ ಪರೀಕ್ಷಿಸಿದ ಬಳಿಕ,

ಕೂಡಲೇ ಒಂದು ಇಂಜಕ್ಷನ್ ಕೊಡುವುದು ಅಗತ್ಯ ಎಂದರು ಡಾಕ್ಟರ್. ಯಾರೂ ಬೇಡವೆನ್ನಲಿಲ್ಲ.

ಸೂಜಿ ಮದ್ದೇರಿದ ಸ್ವಲ್ಪ ಹೊತ್ತಿನ ಬಳಿಕ ತಿಳಿವು ಮೂಡಿತು ಸೌಭಾಗ್ಯಮ್ಮನವರಿಗೆ.

ಜ್ವರ....ಜ್ವರ....ಬಳಿಗೆ ಬರುವ ವೇಳೆಗೆ ಸಾರುತ್ತಿತ್ತು ಜ್ವರದ ಹಬೆ.

ಡಾಕ್ಟರು ಪರೀಕ್ಷಿಸಿದರು – ನಿಧಾನವಾಗಿ – ಇನ್ನೊಮ್ಮೆ.

' ಜ್ವರಕ್ಕೆ ಕಾರಣವಿಲ್ಲ........'

ಶಾಸ್ತ್ರಿಗಳು ತಮ್ಮಷ್ಟಕ್ಕೆ ತಾವೇ ಅಂದುಕೊಂಡರು.

ಕಮಲಮ್ಮನವರದ್ದೂ ಅದೇ ಅಭಿಪ್ರಾಯವೇ.

' ದೈಹಿಕವಾಗಿನೂ ಅಸ್ವಸ್ಥೆಯೇನೂ ಆದಂತಿಲ್ಲವಲ್ಲಾ ! "

ಡಾಕ್ಟರು ಯೋಚಿಸಿದರು.

ಅವರ ಉಷ್ಣಮಾಪಕಯಂತ್ರ ಜ್ವರದ ಕಾವನ್ನು ಅಳೆಯಿತು. ಆದರೆ ಅದಕ್ಕಿಂತಲೂ ಹೆಚ್ಚಾಗಿ ಬೇಯುತ್ತಿದ್ದ ಮನಸ್ಸಿನ ನೋವಿನ ಕಾವನ್ನು ಆ ಉಷ್ಣಮಾಪಕ ಯಂತ್ರ ಅಳೆಯ ಬಲ್ಲುದೇ ?

ಹಿಂದಿನ ರಾತ್ರಿ ವೈದೇಹಮ್ಮನವರ ಮನೆಯಿಂದ ಹಿಂತಿರುಗುವಾಗ ಸೌಭಾಗ್ಯಮ್ಮನವರು ರುಕ್ಮಿಣಿಯ ವಿಷಯವನ್ನೇ ತೀವ್ರವಾಗಿ ಯೋಚಿಸುತ್ತಾ ಮನೆ ಸೇರಿದ್ದರು. ನಾದಿನಿಗೆ ಒದಗಿದ್ದ ಸ್ಥಿತಿ ಅವರ ಕರುಳನ್ನೇ ಹಿಂಡಿತ್ತು. ಊಟವೂ ಬೇಕಿರಲಿಲ್ಲ.

" ಇದೇನೇ ಇಷ್ಟು ಕಮ್ಮಿ ಊಟ ಸೌಭಾಗ್ಯ ? "

ಕಮಲಮ್ಮನವರು ಕೇಳಿದ್ದರು.

" ಎರಡು ಮನೆಯಲ್ಲೂ ತಿಂಡಿ ಹೆಚ್ಚಾಯಿತು ಅತ್ತೆಮ್ಮ "

' ಇದ್ದರೂ ಇರಬಹುದು ' ಎಂದುಕೊಂಡರು ಕಮಲಮ್ಮ.

" ಯಾಕೆ ಸೌಭಾಗ್ಯ, ಒಂದು ಥರಾ ಇದ್ದೀಯಲ್ಲಾ ? "

ಮಲಗಿದಾಗ ಕೇಳಿದ್ದರು ಶಾಸ್ತ್ರಿಗಳು.

" ಇಲ್ಲ ಅಂದರೆ – ಸ್ವಲ್ಪ ಆಯಾಸ ಅಷ್ಟೆ "

" ಹೌದು. ಪಾಪ, ಇವತ್ತು ತಿರುಗಾಟ ಹೆಚ್ಚಾಯಿತು "

ಮರುಕದಿಂದ ಸಮಾಧಾನ ಪಟ್ಟರು ಶಾಸ್ತ್ರಿಗಳು.

ಆದರೆ ಸೌಭಾಗ್ಯಮ್ಮನ ಸ್ಥಿತಿ .... ಅವರ ದೃಷ್ಟಿಯಲ್ಲಿ—

ರುಕ್ಮಿಣಿ ಮಗಳಾಗಿದ್ದಳು. ರುಕ್ಮಿಣಿ ತಂಗಿಯಾಗಿದ್ದಳು.

ರುಕ್ಮಿಣಿಯೇ ತಾನಾಗಿದ್ದಳು.

ತಾನೇ ರುಕ್ಮಿಣಿಯಾಗಿದ್ದಳು ಸೌಭಾಗ್ಯಮ್ಮ!

ರುಕ್ಮಿಣಿಯ ಮೂಕ ಸಂಕಟದ ಮನಸ್ಸು, ಭದ್ರಯ್ಯನಿಂದ ಒದಗಿದ್ದ ಕುತ್ತು, ನಿತ್ಯ ಅನುಭವಿಸುವ ಕಾಲುಗಂಟೆಯ ನರಕ........

ಅಯ್ಯೋ....ಅಯ್ಯೋ........

ಸಹಿಸಲಾರದೆ ಮೊರೆಯಿತು ಆ ಸಾತ್ವಿಕ ಹೃದಯ.

ಇದೇನು ಕೀಟಲೆ ? ಪರೀಕ್ಷೆಯೋ – ಪರಿಹಾಸವೊ ?

ಮೌನವಾಗಿ ಕೇಳಿತು ಮನಸು.

ಉತ್ತರಕಾಣದೆ ತೋಳಲಾಡಿತು....ಬರಿಯ ಕನಸು !

ಆರಂಭದ ತಾರುಣ್ಯದಲ್ಲಿ, ತುಂಬಿದ ಚಂದಿರನಂತೆ ಕಂಗೊಳಿಸಬೇಕಾದ ರುಕ್ಮಿಣಿ ಬರಬಾರದ ಕುತ್ತಿಗೆ ತುತ್ತಾಗಿ ಕಂಗಾಲಾದಳೇ....

' ರುಕ್ಕೂ....ರುಕ್ಕೂ....' ಕನವರಿಸಿಕೊಂಡಿದ್ದರು ಸೌಭಾಗ್ಯಮ್ಮ.

" ಯಾಕೆ ಸೌಭಾಗ್ಯ, ರುಕ್ಮಿಣಿಯನ್ನು ಕರೆಯಬೇಕೇನು ? "

ಮೆಲುದನಿಯಲ್ಲಿ, ಇನಿ ನುಡಿಯಲ್ಲಿ ಶಾಸ್ತ್ರಿಗಳು ಕೇಳಿದ್ದರು.

ಸೌಭಾಗ್ಯಮ್ಮ ಉತ್ತರಿಸಿರಲಿಲ್ಲ.

ಅವರ ಮನಸ್ಸು ಮೊರೆಯಿಟ್ಟಿತು ಯಾರಿಗೋ—

' ರುಕ್ಕುವಿನ ಕಷ್ಟ ನನಗೆ ಬರಲಿ—

' ರುಕ್ಕುವಿನ ಸಂಕಟ ನನಗೆ ಬರಲಿ—

' ನನ್ನ ಪಾಲಿಗೇನಾದರೂ ಸುಖವಿದ್ದರೆ ಅದು ರುಕ್ಕುವಿಗೆ ಸೇರಲಿ—

' ಹಿಂದೆ ನಾನೇನಾದರೂ ಪುಣ್ಯ ಮಾಡಿದ್ದರೆ, ಅದರ ಫಲ ರುಕ್ಕುವಿಗೆ ಸೇರಿ, ಅವಳಿಗೆ ಒಳ್ಳೆಯದುಂಟಾಗಲಿ........

' ಯಾಕೆ – ಆಗುವುದಿಲ್ಲವೇನು ? '

' ಆಗದಿದ್ದರೆ ನಾನು ಸಹಿಸಲಾರೆ....ಅವಳ ನೋವಿನ ಬಾಳನ್ನು ಕಂಡು ಸಹಿಸಲಾರೆ. ಸಹಿಸಿ ಬದುಕಲಾರೆ........'

' ಬದುಕಲಾರೆ – ಈ ಜೀವವನ್ನೇ ಬಳಲಿಸಿ—'

' ರುಕ್ಕೂ....ಕಂದಾ....ರುಕ್ಕಮ್ಮಾ........'

ಇನ್ನೊಮ್ಮೆ ಕನವರಿಕೆಯ ಮಾತು ಕೇಳಿಸಿತ್ತು ಶಾಸ್ತ್ರಿಗಳಿಗೆ.

ಅವರು ಕೂಡಲೇ ಎದ್ದು ಅಂಗಳಕ್ಕೆ ಹೋಗಿ ದೀಪ ಹೊತ್ತಿಸಿದರು. ರುಕ್ಮಿಣಿಯನ್ನು ಎಬ್ಬಿಸಿ, ಸೌಭಾಗ್ಯಮ್ಮನವರ ಬಳಿಗೆ ಕರೆತಂದರು.

"ಅತ್ತಿಗೇ, ಅತ್ತಿಗೇ, ಕರೆದೆಯಾ ಅತ್ತಿಗೆ? ನಾನು ಬಂದಿದ್ದೀನಿ ಅತ್ತಿಗೆ"

ಸೌಭಾಗ್ಯಮ್ಮನವರು ಎಚ್ಚರಗೊಳ್ಳಲಿಲ್ಲ. ಹುಚ್ಚಾಗಿತ್ತು ಅವರ ಮನಸ್ಸು ದುಃಖಾವೇಗದಿಂದ.

ಅತ್ತಿಗೆಯ ಹಾಸಿಗೆಯ ಬಳಿ ಸ್ವಲ್ಪ ಹೊತ್ತು ಕುಳಿತಿದ್ದ ರುಕ್ಮಿಣಿ, ಅನಂತರ ಎದ್ದು ಹೋಗಿ ಮಲಗಿದ್ದಳು........

ಬೆಳಗಾಯಿತು. ಜ್ವರ ಹೆಚ್ಚಾಗಿತ್ತು.

ಡಾಕ್ಟರು ಬಂದರು—

ಬಗೆಹರಿಯದ ಕಾಯಿಲೆ ಗರ ಬಡಿಸಿತ್ತು ಮನೆಯವರಿಗೆ.

ಶಂಕರಶಾಸ್ತ್ರಿಗಳೂ ಮಂಕಾಗಿದ್ದರು.

ಸ್ನಾನ, ಜಪ, ತಪ, ಪೂಜೆ– ಏಕೋ ಯಾವುದರ ಕಡೆಗೂ ಮನಸ್ಸಿಲ್ಲ ಅವರಿಗೆ. ಕಮಲಮ್ಮನವರೇ ನಾಲ್ಕಾರು ಬಾರಿ ಎಚ್ಚರಿಸಿದ ಮೇಲೆ ಅವರ ಆಹ್ನೀಕ ಪ್ರಾರಂಭವಾಯಿತು.

ಪೂಜೆಗೆ ಕುಳಿತರು ಹಿರಿಯ ಶಾಸ್ತ್ರಿಗಳು. ಅಲೆದಾಡುವ ಮನಸ್ಸನ್ನು ಮಹಾದೇವನ ಕಡೆಗೆ ತಿರುಗಿಸಲು ತುಂಬಾ ಪ್ರಯಾಸಪಡಬೇಕಾಯಿತು. ಆದರೂ ಹೆಚ್ಚು ಕಾಲ ಪೂಜಾ ಮಗ್ನರಾಗಿರಲು ಅವರಿಗೆ ಸಾಧ್ಯವಾಗಲಿಲ್ಲ.

ಸಭಾಪತಿಶಾಸ್ತ್ರಿಗಳು ಪತ್ನಿಯ ಬಳಿ ಕುಳಿತು ಯೋಚನಾಕ್ರಾಂತರಾಗಿದ್ದರು.

ಎಂದಿನಂತೆ, ಅದೇ ಬೀದಿಯಲ್ಲಿದ್ದ ಪಾಠದ ಮನೆಗೆ ಬಂದಿದ್ದ ವೆಂಕಟೇಶಯ್ಯ ತನ್ನ ಚಿಕ್ಕಮ್ಮನ ಮನೆಗೂ ಬಂದು ಹೋದ. ಸೌಭಾಗ್ಯಮ್ಮನವರು ಹಾಸಿಗೆ ಹಿಡಿದ ವಿಷಯ ಅವನನ್ನೂ ಪಾತಾಳಕ್ಕೆ ಕುಗ್ಗಿಸಿತು.

ವ್ಯಸನದಿಂದ ತನ್ನ ಮನೆಗೆ ಹಿಂತಿರುಗಿದ ವೆಂಕಟೇಶಯ್ಯ ನರಸಮ್ಮನಿಗೂ ವಿಷಯ ತಿಳಿಸಿದ. ಆಕೆ ಕೂಡಲೇ ಸೌಭಾಗ್ಯಮ್ಮನವರನ್ನು ನೋಡಲು ಚಡಪಡಿಸಿದಳು. ಮಧ್ಯಾಹ್ನ ನಾಲ್ಕು ಗಂಟೆಯ ವೇಳೆಗೆ ವೆಂಕಟೇಶಯ್ಯ ತನ್ನ ಪರಿವಾರವನ್ನು ಕರೆದುಕೊಂಡು ಶಾಸ್ತ್ರಿಗಳ ಮನೆಗೆ ಬಂದ. ನರಸಮ್ಮ ಸೌಭಾಗ್ಯಮ್ಮನವರ ಬಳಿಗೆ ಧಾವಿಸಿದಳು.

" ಅಕ್ಕಾ....ಅಕ್ಕಾ.... "

" ನರಸೂ....ನೀನೂ ಬಂದೆಯೇನಮ್ಮಾ?"

" ನಿನ್ನೆ ಕಳಕಳಾಂತ ನಗುನಗುತ್ತಿದ್ದೋಳು ಇವತ್ತು.... "

" ಇಲ್ಲಮ್ಮ, ನನಗೇನೂ ಆಗಿಲ್ಲ.... "

ನರಸಮ್ಮ ಅಕ್ಕನ ಮೈಮುಟ್ಟಿ ನೋಡಿದಳು. ಜ್ವರ ಬಿಟ್ಟಿತ್ತು.

" ನರಸೂ, ನನ್ನ ಸ್ವಲ್ಪ ಎಬ್ಬಿಸುತ್ತೀಯೇನೇ ?"

" ಬೇಡ, ಮಲಗಿಕೋ ಅಕ್ಕ "

" ಬೆನ್ನೆಲ್ಲಾ ನೋಯುತ್ತೆ ಕಣೆ-ಮಲಗೀ ಮಲಗೀ "

ನರಸಮ್ಮ ಅಕ್ಕನ ಬೆನ್ನು ಹಿಡಿದು ನಿಧಾನವಾಗಿ ಎಬ್ಬಿಸಿದಳು.

" ರುಕ್ಕು ಎಲ್ಲಿ ? ನರಸಾ ಸ್ವಲ್ಪ ರುಕ್ಕೂನ ಕರೆಯೆ "

ಅದೇ ಸಮಯಕ್ಕೆ ಒಳಗಿದ್ದ ರುಕ್ಮಿಣಿ ಹೊರಗೆ ಬಂದಳು. ಅತ್ತಿಗೆಯ ಬಳಿ ಕುಳಿತಳು.

" ಪುಟ್ಟಾ, ಇನ್ನೂ ಜಡೆ ಹೆಣೆದುಕೊಳ್ಳಲಿಲ್ಲವೇನಮ್ಮ ?"

" ಇಲ್ಲಾ ಅತ್ತಿಗೆ. ಯಾಕೋ ಬೇಜಾರು "

" ಯಾಕಮ್ಮ ?"

" ನೀವು ಹಾಸಿಗೆ ಹಿಡಿದರೆ ಈ ಮನೆಯಲ್ಲಿ ಯಾರಿಗೆ ತಾನೆ ಸಂತೋಷ ಅತ್ತಿಗೆ ? ಇವತ್ತು ಅಪ್ಪ ಕೂಡ ಸ್ನಾನ-ಪೂಜೆ ಮಾಡದೆ ತೆಪ್ಪಗೆ ಕೂತುಬಿಟ್ಟಿದ್ದರು. ಅಣ್ಣನಂತೂ ಊಟವೇ ಮಾಡಿಲ್ಲ. ಅಮ್ಮನಿಗೆ ಆಕಾಶವೇ ತಲೆಯ ಮೇಲೆ ಬಿದ್ದಹಾಗೆ ಆಗಿದೆ. ಒಂದು ತುತ್ತು ತಿನ್ನುವಷ್ಟಕ್ಕೇ ಗಣೂಗೆ ಊಟ ಸಾಕಾಗಿದೆ.... "

" ಪುಟ್ಟ, ನನ್ನಿಂದ ಎಷ್ಟೊಂದು ಅನರ್ಥವೇ ?"

" ಅತ್ತಿಗೇ, ನೀನೇ ಈ ಮನೆಯ ಬೆಳಕು. ಬೆಳಕು ಮಂಕಾದರೆ, ಮಬ್ಬು ಕತ್ತಲೆಯಲ್ಲಿ-ಕಣ್ಣು ಮಂಜಿನಲ್ಲಿ ಯಾರು ಏನು ತಾನೆ ಮಾಡಲಾದೀತು ? ಎಲ್ಲರೂ ತೊಳಲಾಡಬೇಕಲ್ಲವೇ ?"

" ನಿಜ ರುಕ್ಕು, ನಿಜ. ನಿನ್ನ ಮಾತು ನೂರಕ್ಕೆ ನೂರು ಸತ್ಯ "

ರುಕ್ಮಿಣಿಗೆ ಬೆಂಬಲವಿತ್ತಳು ನರಸಮ್ಮ.

" ರುಕ್ಕೂ, ಎಲ್ಲರಿಗಿಂತ ಹೆಚ್ಚಾಗಿ ನಿನ್ನ ಚಿಂತೆಯೇ ನನಗೆ ದೊಡ್ಡದಾಗಿದೆ ಮಗು "

ರುಕ್ಮಿಣಿ ಮಾತನಾಡಲಿಲ್ಲ.

" ನಿನ್ನ ಮನಸ್ಸು ಎಷ್ಟು ನೊಂದಿದೆಯೋ ಪಾಪ"

"ಇಲ್ಲ ಅತ್ತಿಗೆ" ನಾನು ಮೊದಲಿನ ಹಾಗೆಯೇ ಸಂತೋಷವಾಗಿದ್ದೇನೆ. ನಿನ್ನಂತಹ ದೇವಿಯ ಆಶ್ರಯದಲ್ಲಿರುವಾಗ ನಾನು ಯಾವುದಕ್ಕೂ ಹೆದರುವುದಿಲ್ಲ. ಯೋಚಿಸುವುದೂ ಇಲ್ಲ"

" ಧೈರ್ಯವಾಗಿರು ರುಕ್ಕೂ. ದೇವರು ನಿನ್ನ ಕೈ ಬಿಡುವುದಿಲ್ಲ"

" ಆಗಲಿ ಅತ್ತಿಗೆ"

"ಮನಸ್ಸಿಗೆ ಎಂದೂ ನೊಂದುಕೊಳ್ಳಬೇಡ. ಸಂತೋಷವಾಗಿರು. ನಿನ್ನ ಆನಂದವೇ ನನ್ನ ಆನಂದ. ನೀ ನಕ್ಕರೆ ನಾನೂ ನಕ್ಕ ಹಾಗೆ!.. ಹೋಗು, ಹೆಳಲು ಹಾಕಿಕೋ. ನರಸೂ, ರುಕ್ಕೂಗೆ ಜಡೆ ಹೆಣಿಯಮ್ಮ......"

ಎಂದರು ಸೌಭಾಗ್ಯಮ್ಮ. ರುಕ್ಮಿಣಿಯ ಮಾತಿನಿಂದ ಹೃದಯದಲ್ಲಿ ತುಂಬಿದ್ದ ದುಃಖದ ಭಾರ ತುಸು ಕಡಿಮೆಯಾದಂತಿತ್ತು.

ನರಸಮ್ಮ ಜಡೆ ಹೆಣೆದಮೇಲೆ, ರುಕ್ಮಿಣಿ ಮುಖ ತೊಳೆದುಕೊಂಡು ಕುಂಕುಮವಿಟ್ಟುಕೊಂಡು ಅತ್ತಿಗೆಯ ಬಳಿಗೆ ಬಂದಳು.

" ರುಕ್ಕು ಚಿನ್ನದ ಬೊಂಬೆಯ ಹಾಗೆ ಇದ್ದಾಳಲ್ಲವೇನೇ ನರಸೂ ?"

" ಹೌದಕ್ಕ"

"ಸದಾ ಅವಳು ಹೀಗೆಯೇ ಇದ್ದರೆ ನನಗೇನೂ ಕಾಯಿಲೆ ಬರುವುದಿಲ್ಲವಮ್ಮ!"

ಮೆಲುನಗೆ ನಗುತ್ತಾ ನುಡಿದ ಸೌಭಾಗ್ಯಮ್ಮ ತಮ್ಮ ಕಾಯಿಲೆಯ ಕಾರಣವನ್ನು ಸೂಕ್ಷ್ಮವಾಗಿ ಹೇಳಿದರು.

" ಸರಿ, ನಾನೊಂದಿಷ್ಟು ಮುಖ ತೊಳೆಯಬೇಡವೇ ?"

" ಬಾ ಅತ್ತಿಗೆ, ಬಿಸಿನೀರು ತರುತ್ತೇನೆ" ಎಂದಳು ರುಕ್ಮಿಣಿ.

ಸೌಭಾಗ್ಯಮ್ಮನವರು ನರಸಮ್ಮನ ಸಹಾಯದಿಂದ ಎದ್ದು ಮುಖ ತೊಳೆದುಕೊಂಡರು. ಅಸ್ತವ್ಯಸ್ತವಾದ ಕೇಶರಾಶಿಯನ್ನು ಹಿಂದಕ್ಕೆ ನೇವರಿಸಿಕೊಂಡು, ಕುಂಕುಮವಿಟ್ಟುಕೊಂಡರು.

" ಹ್ನುಂ, ಇನ್ನು ಹಾಸಿಗೆ ಸುತ್ತಿಡು ರುಕ್ಕು"

ಎನ್ನುತ್ತಾ ಸೌಭಾಗ್ಯಮ್ಮ ಅಡಿಗೆ ಮನೆಯ ಕಡೆಗೆ ಹೊರಟರು.

ಕಮಲಮ್ಮನವರು ಗೋಡೆಗೆ ಒರಗಿ, 'ರಾಮಧ್ಯಾನ' ಮಾಡುತ್ತಾ ಕುಳಿ

ತಿದ್ದರು. ಸೌಭಾಗ್ಯಮ್ಮನವರು ಅವರ ಕಾಲುಗಳನ್ನು ಮುಟ್ಟಿ ನಮಸ್ಕಾರ ಮಾಡಿದರು. ಹಸ್ತ ಸ್ಪರ್ಶದಿಂದ ಎಚ್ಚೆತ್ತು, ಕಣ್ತೆರೆದು ನೋಡಿದ ಕಮಲಮ್ಮನವರು ಅವಾಕ್ಕಾದರು

" ಸೌಭಾಗ್ಯ........ " — ಮುಂದೆ ಮಾತು ಹೊರಡಲಿಲ್ಲ.

" ಅತ್ತೆಮ್ಮಾ........ "

ನಿಮಿಷಕಾಲ ಮೌನವಾವರಿಸಿತು.

" ನನ್ನ ಜೀವವೇ ಹೊರಟು ಹೋಗಿತ್ತಲ್ಲೇ ತಾಯಿ ?"

" ಅತ್ತಿಗೆ ಈಗ ವಾಪಸ್ಸು ತಂದರಲ್ಲಮ್ಮಾ ! "

ರುಕ್ಮಿಣಿ ನಕ್ಕು ಹೇಳಿದಳು.

" ಹೌದಮ್ಮ ಹೌದು. ತಂದಳು....ತರದಿದ್ದರೆ ಈ ಮುದುಕಿ ಈಗ ಮಾತಾಡುತ್ತಿದ್ದಳೇನೇ ? "

ಕಮಲಮ್ಮನವರು ಮಾತು ಮುಗಿಸುವ ವೇಳೆಗೆ, ಹೊರಗಡೆ ಜಗುಲಿಯ ಮೇಲೆ ಕುಳಿತು ಚಿಂತಾಕ್ರಾಂತರಾಗಿದ್ದ ಶಂಕರಶಾಸ್ತ್ರಿಗಳು ಸಭಾಪತಿಶಾಸ್ತ್ರಿಗಳೊಡನೆ ಒಳಗೆ ಬಂದರು.

" ಏನಪ್ಪಾ ದೇವರೆ, ಕತ್ತಲಾಗುತ್ತಾ ಬಂತಲ್ಲಾ, ಬೆಳಕಿಗೇನು ಮಾಡಲಿ? ಈ ಎಲೆಕ್ಟ್ರಿಕ್ ದೀಪ ಏನು ತಾನೆ ಬೆಳಕು ಕೊಟ್ಟೀತು ? ನನ್ನ ' ಮನೆಯ – ದೀಪ 'ದ ಬೆಳಕಿಲ್ಲದಿದ್ದರೆ ಈ ಎಲೆಕ್ಟ್ರಿಕ್ ದೀಪವೂ ಮಂಕಾಗಿಯೇ ಇರುತ್ತದಲ್ಲಾ ಅಂತಿದ್ದೆ. ದೇವರು ಕೇಳಿಸಿಕೊಂಡ ಅಂತ ಕಾಣುತ್ತೆ. ಕೂಡಲೇ ನನ್ನ ' ಮನೆಯ – ದೀಪ 'ವನ್ನು ಬೆಳಗಿಸಿದ ಆ ಪರಂಜ್ಯೋತಿ ! "

ವಿಶಾಲವಾದ ಬಯಲಿನಲ್ಲಿ ಮಂದಗತಿಯಿಂದ ಹರಿಯುವ ತುಂಬಿದ ನದಿಯಂತೆ ನುಡಿದರು ಶಂಕರಶಾಸ್ತ್ರಿಗಳು – ಸೊಸೆಯ ಕಡೆಗೆ ನೋಡುತ್ತಾ.

ಸಭಾಪತಿಶಾಸ್ತ್ರಿಗಳಿಗೂ ತುಂಬಾ ಆನಂದವಾಯಿತು – ಪತ್ನಿ ಗುಣಮುಖಳಾದುದನ್ನು ಕಂಡು.

ಸೌಭಾಗ್ಯಮ್ಮನವರು ಅಂಗಳಕ್ಕೆ ಬಂದು, ರುಕ್ಮಿಣಿಯನ್ನು ಹತ್ತಿರಕ್ಕೆ ಕರೆದು, ಅವಳ ಕಿವಿಯಲ್ಲಿ—

" ನನಗೀಗ ಒಂದು ಥರಾ ಬೇಕು ಕಣೆ ! "

ಎಂದು ಮಗುವಿನಂತೆ ಕೇಳಿದರು.

" ತರುತ್ತೀನಿ ಅತ್ತಿಗೆ "

" ನರಸೂಗೆ ಅದು ತುಂಬಾ ಇಷ್ಟಕಣೆ! "

" ತಿಳಿಯಿತು ಅತ್ತಿಗೆ "

ರುಕ್ಮಿಣಿ ಒಳಗೆ ಓಡಿದಳು. ಹತ್ತು ನಿಮಿಷಗಳ ಬಳಿಕ ಹಿಂತಿರುಗಿದಳು ಕಾಫಿಯ ಬಟ್ಟಲುಗಳೊಡನೆ.

" ನೀನು ತುಂಬಾ ಜಾಣೆ ಕಣೆ ರುಕ್ಕು "

" ಆ ಜಾಣತನ ಕಲಿಸಿದ್ದು ನೀವೇ ತಾನೆ ! "

ಮೂವರೂ ಮೆಲುನಗೆ ನಕ್ಕರು. ಅನಂತರ ಕಾಫಿಯ ಬಟ್ಟಲುಗಳನ್ನು ಬರಿದು ಮಾಡಿಟ್ಟರು.

ಅಲಾರಂ ಗಡಿಯಾರ ಎಂಟು ಗಂಟೆ ತೋರಿಸಿತು – ರಾತ್ರಿಯ ಎಂಟು ಗಂಟೆ. ಅದೇ ಸಮಯಕ್ಕೆ ತನ್ನ ಸಂಗೀತ ಪಾಠಗಳನ್ನೆಲ್ಲಾ ಮುಗಿಸಿಕೊಂಡು ವೆಂಕಟೇಶಯ್ಯನೂ ಬಂದ. ಸೌಭಾಗ್ಯಮ್ಮನವರಿಗೆ ಸ್ವಲ್ಪ ಮಟ್ಟಿಗೆ ಗುಣವಾಗಿರುವುದನ್ನು ಕಂಡು ಅವನಿಗೂ ಆನಂದವಾಯಿತು.

ಬಲವಂತಮಾಡಿ ಎಲ್ಲರಿಗೂ ಎಲೆ ಹಾಕಿದರು ಸೌಭಾಗ್ಯಮ್ಮ. ಊಟ ಮುಗಿಸಿ, ತನ್ನ ಪರಿವಾರದೊಡನೆ ವೆಂಕಟೇಶಯ್ಯ ಹಿಂತಿರುಗಿದ.

ದಿನದಂತೆ ಆ ರಾತ್ರಿಯೂ ಕಳೆಯಿತು.

ಮರುದಿನ ಸೌಭಾಗ್ಯಮ್ಮ ಸಂಪೂರ್ಣ ಗುಣಮುಖರಾಗಿದ್ದರು. ಮನೆಯಲ್ಲಿ ಸಂತೋಷ – ಗೆಲುವು ತಾನಾಗಿಯೇ ಮೂಡಿತು.

" ನಿನ್ನೆ ನಮ್ಮನ್ನೆಲ್ಲಾ ಎಷ್ಟೊಂದು ಗಾಬರಿ ಮಾಡಿಬಿಟ್ಟೆಯೇ ಸೌಭಾಗ್ಯ ! " ಎಂದು ನಕ್ಕರು ಸಭಾಪತಿಶಾಸ್ತ್ರಿಗಳು.

ಅವರ ಪ್ರಯಾಣದ ವಿಷಯ ಮನೆಯವರಿಗೆಲ್ಲಾ ತಿಳಿಯಿತು ಆ ಮಧ್ಯಾನ್ಹ! ಊಟಕ್ಕೆ ಕುಳಿತಾಗ ಶಂಕರಶಾಸ್ತ್ರಿಗಳು ಕೇಳಿದರು—

" ಸಭಾಪತಿ, ವೈದಿಕನಾಗಿ ಹುಟ್ಟಿ ವಾಮಾಚಾರ ಕಲಿಯುತ್ತೀಯೇನಪ್ಪ ? "

" ರುಕ್ಕುವಿನ ಸ್ಥಿತಿಯನ್ನು ನೋಡಿಕೊಂಡು, ಎಷ್ಟು ದಿನ ಸುಮ್ಮನೆ ಕೂತಿರಲಿ ? "

" ಆ ಭದ್ರಯ್ಯನಿಗಿಂತ ಬಲವಾದವರು ಯಾರೂ ಇಲ್ಲವೆ ?"

" ಇದ್ದಾರಪ್ಪ, ಈ ಸಮಯದಲ್ಲಿ ಒಬ್ಬರೂ ನಮ್ಮ ಕಣ್ಣಿಗೆ ಬಿದ್ದಿಲ್ಲ."

" ಹಾಗಾದರೆ ನೀನು ದೃಢವಾಗಿ ನಿಶ್ಚಯಿಸಿಬಿಟ್ಟದ್ದೀಯಾ

ಸಭಾಪತಿ ?"

"ಹೌದಪ್ಪ"

ಮಗನ ಮನೋನಿರ್ಧಾರವನ್ನು ಕಂಡು ಶಾಸ್ತ್ರಿಗಳು ಸುಮ್ಮನಾದರು. ಅವರನ್ನು ಗುರುಮನೆ, ಮತದ ಮಠ, ಜಾತಿಯ ಪುಡಾರಿಗಳ ಬೆದರಿಕೆ ಸ್ವಲ್ಪ ಕಾಲ ಬಾಧಿಸಿತು.

'ನನ್ನ ಮಗ ಕೆಟ್ಟ ಕೆಲಸ ಮಾಡುತ್ತಿಲ್ಲ, ಒಳ್ಳೆಯ ಕೆಲಸಕ್ಕಾಗಿ ವಾಮಾಚಾರ ಕಲಿಯುತ್ತಿದ್ದಾನೆ. ದುರಾಚಾರಕ್ಕೊಳಗಾಗಲಿರುವ ತನ್ನ ತಂಗಿಯನ್ನು ರಕ್ಷಿಸುವುದೊಂದೇ ಅವನ ಗುರಿಯಲ್ಲ. ರುಕ್ಕುವಿನಂತಹ ಸಹ ಸ್ರಾರು ಮಂದಿಯ ಕಲ್ಯಾಣವೇ – ರಕ್ಷಣೆಯೇ ಅವನ ಸದುದ್ದೇಶ. ಎಂದ ಮೇಲೆ ನೈತಿಕವಾಗಿ ಯಾರಿಗೇನೂ ಹೆದರಬೇಕಾಗಿಲ್ಲ. ನಿಶ್ಚಿಂತೆಯಿಂದಿ ರೋಣ' ಎಂದುಕೊಂಡರು ಶಂಕರಶಾಸ್ತ್ರಿಗಳು. ತಾವೇ ಹೆಂಡತಿಗೆ ಹೇಳಿ, ಅಂದು ಔತಣದ ಅಡಿಗೆ ಮಾಡಿಸಿದರು. ತಾನು ಕೈಗೊಳ್ಳಲಿರುವ ಕೆಲಸಕ್ಕೆ ತಂದೆಯು ಪ್ರತಿಭಟಿಸದೆ, ಒಂದು ರೀತಿಯಲ್ಲಿ ಬೆಂಬಲ ನೀಡುತ್ತಿದ್ದಾರಲ್ಲಾ ಎಂದು ಸಭಾಪತಿಶಾಸ್ತ್ರಿಗಳಿಗೂ ತುಂಬಾ ಆನಂದ.

ತಂದೆ ಪ್ರೀತಿಯಿಂದ ಮಗನನ್ನು ಪಕ್ಕದಲ್ಲಿಯೇ ಕೂಡಿಸಿಕೊಂಡು ಊಟಮಾಡಿಸಿದರು. 'ಸಭಾಪತಿಗೆ ಮಜ್ಜಿಗೆಹುಳಿ ತುಂಬಾ ಇಷ್ಟ, ಸಭಾ ಪತಿಗೆ ಹುರುಳಿಕಾಯಿ ಪಲ್ಯ ಕಂಡರೆ ಪ್ರಾಣ' ಎಂದು ಹೇಳುತ್ತಾ ಕಮ ಲಮ್ಮನವರ ಕೈಯ್ಯಿಂದ ಇನ್ನಷ್ಟು ಹಾಕಿಸಿದರು – ಮಗನ ಎಲೆಗೆ. ತಂದೆಯ ಪ್ರೀತಿ – ಆಸಕ್ತಿಗಳನ್ನು ಕಂಡು ಸಭಾಪತಿಶಾಸ್ತ್ರಿಗಳು ವಿಸ್ಮಿತರಾದರು.

ಮರುದಿನ ಬೆಳಿಗ್ಗೆ ಏಳು ಗಂಟೆಗೆ ಸರಿಯಾಗಿ ಮುನಿತಾಯಪ್ಪ ತನ್ನ ಪ್ರವಾಸದ ಗಂಟಿನೊಡನೆ ಹಾಜರಾದ – ಶಾಸ್ತ್ರಿಗಳ ಮನೆಯಲ್ಲಿ. ಸಭಾಪತಿ ಶಾಸ್ತ್ರಿಗಳೂ ಸಿದ್ಧರಾಗಿದ್ದರು.

"ರುಕ್ಕುವನ್ನು ಜೋಪಾನವಾಗಿ ನೋಡಿಕೋ. ಮನೆಯಿಂದ ಹೊರಗೆ ಬಿಡಬೇಡ. ರಾತ್ರಿ ಎಂಟು ಗಂಟೆಯಾದ ತಕ್ಷಣ ಅವಳನ್ನು ರೂಮಿನಲ್ಲಿ ಕೂಡಿಸಿ, ಬೀಗ ಹಾಕಿಬಿಡು" ಎಂದು ಸೌಭಾಗ್ಯಮ್ಮನವರಿಗೂ,

"ರುಕ್ಕೂ, ನಿಮ್ಮತ್ತಿಗೆ ಹೇಳಿದ ಹಾಗೆ ಕೇಳಿಕೊಂಡಿರಮ್ಮ. ಮನೆ ಯಿಂದ ಹೊರಗೆ ಹೋಗಬೇಡ. ರಾತ್ರಿ ಹೊತ್ತು ದೀಪ ಹಚ್ಚಿದ ಮೇಲೆ ರೂಮಿನಲ್ಲಿ ಕೂತು ಏನಾದರೂ ಓದಿಕೋ. ಹೊರಗೆ ಬರಬೇಡ. ಸ್ವಲ್ಪ

ಕಾಲ ನೀನು ಹೀಗೆಯೇ ಸೆರೆಮನೆ ಅನುಭವಿಸಬೇಕಮ್ಮ. ಆಮೇಲೆ ದೇವರು ಒಳ್ಳೆಯದು ಮಾಡುತ್ತಾನೆ ಅಂತ ನನಗೆ ಭರವಸೆ ಇದೆ"

ಎಂದು ರುಕ್ಮಿಣಿಗೂ ಹೇಳಿದರು ಸಭಾಪತಿಶಾಸ್ತ್ರಿಗಳು. ಅನಂತರ ಶಂಕರಶಾಸ್ತ್ರಿಗಳ ಮತ್ತು ಕಮಲಮ್ಮನವರ ಕಾಲು ಮುಟ್ಟಿ ನಮಸ್ಕಾರ ಮಾಡಿ ದೇವರ ಹೆಸರನ್ನು ಸ್ಮರಿಸುತ್ತಾ ಹೊರಬಂದರು. ಕಾದಿದ್ದ ಮುನಿತಾಯಪ್ಪನ ಜತೆಗೂಡಿ ಹೊರಟು, ಇಬ್ಬರೂ ಸ್ಟೇಷನ್ನನ್ನು ಸೇರಿದರು.

ಬೆಳಗಿನ ಎಕ್ಸ್‌ಪ್ರೆಸ್ ಗಾಡಿ ಸಿದ್ಧವಾಗಿತ್ತು. ಶಾಸ್ತ್ರಿಗಳೂ ಮುನಿತಾಯಪ್ಪನೂ ಹತ್ತಿ ಕುಳಿತರು. ರೈಲು ಕಾಟ್ಪಾಡಿ ಜಂಕ್ಷನ್ ಸೇರಿದ ಬಳಿಕ ಇಬ್ಬರೂ ಗಾಡಿಯನ್ನು ಬದಲಿಸಿ, ಆರು ಗಂಟೆಯ ವೇಳೆಗೆ ತಿರುವಣ್ಣಾಮಲೈಯನ್ನು ಸೇರಿದರು.

ತಿರುವಣ್ಣಾಮಲೈ ಹತ್ತಾರು ರೀತಿಯಿಂದ ಬಹು ಪ್ರಸಿದ್ಧವಾದ ಸ್ಥಳ. ಶೈವರಿಗಂತೂ ಅದೊಂದು ಮುಕ್ತಿ ಸಾಧಕ ತಾಣ. ಊರಿನ ತುಂಬಾ ಕಾವಿ ಧರಿಸಿದ, ತಿರುವೋಡು–ಹಸಿಯೋಡು–ಹಿಡಿದ ಸಹಸ್ರಾರು ಮಂದಿ ಸನ್ಯಾಸಿಗಳಿದ್ದರು. ಸಣ್ಣ ನಗರಕ್ಕೆ ತಕ್ಕಂತೆ ಪೇಟೆ–ಪರಿವಾರಗಳಿದ್ದರೂ ಆ ಲೌಕಿಕದಲ್ಲೇ ಪಾರಲೌಕಿಕವೂ ಬೆರೆತಿದ್ದುದು ಅಲ್ಲಿನ ಎಲ್ಲ ನಡೆ ನುಡಿಗಳಲ್ಲಿಯೂ ಸ್ಪಷ್ಟವಾಗಿ ಕಾಣುತ್ತಿದ್ದಿತು. ಅತ್ಯಂತ ವಿಶಾಲವಾದ ಅರುಣಾಚಲೇಶ್ವರಸ್ವಾಮಿ ದೇವಾಲಯ ಊರಿನ ಹಿರಿಯ ಆಕರ್ಷಣೆ. ಊರ ಹೊರಗಡೆ ರಮಣಾಶ್ರಮ. ಸನಿಯದಲ್ಲೇ ಮೊಲೆಪಾಲ್ ತೀರ್ಥ – ಗಿರಿ, ಕಪಾಲಗಿರಿ – ಮೊದಲಾದ ಬೆಟ್ಟದ ಸಾಲು ತಿರುವಣ್ಣಾಮಲೈ ತಪಸ್ಸಿಗೂ ಸಾಧನೆಗೂ ತಕ್ಕ ಸ್ಥಳವೆಂದು ಸಾರುತ್ತಿದ್ದವು.

ಶಾಸ್ತ್ರಿಗಳೂ ಮುನಿತಾಯಪ್ಪನೂ ನೇರವಾಗಿ ಅರುಣಾಚಲೇಶ್ವರನ ದೇವಾಲಯದೊಳಕ್ಕೆ ಬಂದು ಪ್ರವೇಶದ್ವಾರದ ಚಿತ್ರ ಸೊಬಗನ್ನೂ, ಬೇರೆ ಬೇರೆ ದೇವರುಗಳ ಉಪಮಂದಿರಗಳನ್ನೂ ನಿಧಾನವಾಗಿ ನೋಡುತ್ತಾ ಗರ್ಭಗುಡಿಯ ಬಳಿಗೆ ಬರುವ ವೇಳೆಗೆ ರಾತ್ರಿಯ ಮಂಗಳಾರತಿ ಕಾಲವೂ ಸಮೀಪಿಸಿತು. ಮುನಿತಾಯಪ್ಪನೂ ಶಾಸ್ತ್ರಿಗಳೂ ವಿನೀತರಾಗಿ ಕೈ ಜೋಡಿಸಿ ಪ್ರಾರ್ಥನೆ ಸಲ್ಲಿಸಿ, ಹೊರಬಂದರು. ಮುಂದೇನು ಮಾಡಬೇಕು ? ಎಲ್ಲಿಗೆ ಹೋಗಬೇಕು ?—ಎಂಬ ಪ್ರಶ್ನೆ ಬೃಹದಾಕಾರ ತಾಳಿ ನಿಂತಿತು.

ಮುನಿತಾಯಪ್ಪನ ಸಲಹೆಯಂತೆ ಬಾಳೆಹಣ್ಣಿನ ಫಲಾಹಾರ ಮುಗಿಸಿ,

ರಾತ್ರಿಯ ಊಟದ ಚಿಂತೆಯನ್ನು ಪರಿಹರಿಸಿಕೊಂಡಿದ್ದಾಯಿತು. ಇನ್ನು ಮಲಗಬೇಕಷ್ಟೆ. ಅದಕ್ಕೇನು-ದೇವಾಲಯದ ಹೊರಪ್ರಾಕಾರದಲ್ಲಿ ಜಗುಲಿಗಳೂ, ಕಲ್ಯಾಣ ಮಂಟಪಗಳೂ ಬೇಕಾದಷ್ಟು ಇವೆ್ದದರಿಂದ ಎಲ್ಲಾದರೊಂದೆಡೆ ಪವಡಿಸಬಹುದಾಗಿತ್ತು. ಆದರೆ ಬಂದ ಕೆಲಸ ಇಷ್ಟಕ್ಕೆ ಮುಗಿಯಿತೇನು ? ಗುರುಗಳನ್ನು ಕಾಣಬೇಡವೇ ? ಅದೇ ಮುಖ್ಯವಾದ ಉದ್ದೇಶವಲ್ಲವೆ ?

"ಗುರುಗಳು ಎಲ್ಲಿದ್ದಾರೆ ಮುನಿತಾಯಪ್ಪ?"

—ಮನಸ್ಸಿನಲ್ಲೇ ಮಂತಣದಿಂದ ಮಂಡಿಗೆ ಸವಿಯುತ್ತಿದ್ದ ಶಾಸ್ತ್ರಿಗಳು ಕೇಳಿದರು.

"ಅವರಿಗೆ ಒಂದು ಸ್ಥಳವೇ ಸ್ವಾಮಿ? ಎಲ್ಲಿರುತ್ತಾರೆಯೋ ಏನೋ ಹುಡುಕಬೇಕು" ಎಂದ ಮುನಿತಾಯಪ್ಪ.

ಶಾಸ್ತ್ರಿಗಳು ಮೌನವಾದರು. ಅವರ ಮನಸ್ಸು ಒಂದು ಕ್ಷಣ ಗುರುಗಳನ್ನರಸಿದರೆ ಮರುಕ್ಷಣ ಮನೆಯ ನೆನಪಾಗಿ ರುಕ್ಮಿಣಿಯ ಆವೇಶ ಇಂದು ಹೇಗೆ ಪರ್ಯವಸಾನವಾಯಿತೋ ಎಂದು ಯೋಚಿಸುತ್ತಿತ್ತು.

ಪರಸ್ಪರ ಹೆಚ್ಚು ಮಾತಿಲ್ಲದೆ ಮಿತ್ರರಿಬ್ಬರೂ ಆ ರಾತ್ರಿಯನ್ನು ಕಳೆದರು–ಅಮೃತಕಲ್ಯಾಣಿಯ ಮಂಟಪದಲ್ಲಿ. ಅರ್ಧರಾತ್ರಿ ಮಾರಿದ್ದಾಗ ಮುನಿತಾಯಪ್ಪ ಎದ್ದು ಊರ ಹೊರಗಡೆ ಹೋಗಿದ್ದುದು ನಿದ್ರಿಸುತ್ತಿದ್ದ ಶಾಸ್ತ್ರಿಗಳಿಗೆ ಗೊತ್ತಿರಲಿಲ್ಲ.

ಮರುದಿನ ಮುಂಜಾನೆ ಎದ್ದೊಡನೆ, ಇಬ್ಬರೂ ಅಮೃತಕಲ್ಯಾಣಿಯಲ್ಲಿ ಸ್ನಾನಮಾಡಿದರು. ಅಲ್ಲಿಂದಲೇ ಅರುಣಾಚಲೇಶ್ವರನಿಗೆ ನಮಸ್ಕರಿಸಿದರು.

"ಸ್ವಾಮಿ, ಕಾಫಿ-ತಿಂಡಿ ಏನಾದರೂ ತೆಗೆದುಕೊಳ್ಳುವುದಿಲ್ಲವೆ ?"

ಎಂದ ಮುನಿತಾಯಪ್ಪ.

ಶಾಸ್ತ್ರಿಗಳು ಹೋಟಲು ಬಾಗಿಲನ್ನು ಮೆಟ್ಟಿದವರೇ ಅಲ್ಲ. ಆದರೆ ಪರಸ್ಥಳದಲ್ಲಿ ಹೋಟಲು ಬಿಟ್ಟರೆ ಬೇರೆ ಗತಿಯಿರಲಿಲ್ಲ.

ಮುನಿತಾಯಪ್ಪ ಅವರ ಚಿಂತೆಯನ್ನು ಬೇಗನೆ ಅರಿತುಕೊಂಡ.

"ಹೋಟಲಿಗೆ ಹೋಗುವುದು ಬೇಡ ಸ್ವಾಮಿ, ಇಲ್ಲೇ ಒಬ್ಬರ ಮನೆ ಇದೆ. ಶುದ್ಧ ವೈದೀಕರ ಮನೆ. ಅಲ್ಲಿಗೆ ಹೋಗಿ ಏನಾದರೂ ಉಪಾಹಾರ ಮುಗಿಸೋಣ ಬನ್ನಿ"

ಎನ್ನುತ್ತಾ ಶಾಸ್ತ್ರಿಗಳನ್ನು ಕರೆದುಕೊಂಡು, ದೇವಾಲಯದ ಹಿಂದಿನ ಬೀದಿಗಳತ್ತ ನಡೆದು ಪಾಂಡಿ ಪಶುಪತಿ ಅಯ್ಯರ್‌ರವರ ಮನೆ ಸೇರಿದ.

" ಇವರು ನಿನಗೆ ಗುರುತಿದೆಯೇ ಮುನಿತಾಯಪ್ಪ ? "

" ಸುಮಾರಾಗಿ ಗುರುತಿದೆ ಸ್ವಾಮಿ. ಇವರ ಮನೆಯಲ್ಲಿ ಹಿಂದೆ ಒಬ್ಬ ನಂಬೂದರಿಯವರಿದ್ದರು. ಅವರು ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ತಿರುವಾಂಕೂರು ಕಡೆಯಿಂದ ಬಂದಿದ್ದರು. ಪಾಂಡಿಚೆರಿಯಲ್ಲಿ ಒಂದು ದಿನ ಆಕಸ್ಮಿಕವಾಗಿ ಪಶುಪತಿ ಅಯ್ಯರ್‌ರವರಿಗೂ ನಂಬೂದರಿಯವರಿಗೂ ಪರಿಚಯವಾಗಿ ಮೈತ್ರಿ ಬೆಳೆಯಿತು. ' ತಿರುವಣ್ಣಾಮಲೈ ತಪಸ್ಸಿಗೂ–ಸಾಧನೆಗೂ ಒಳ್ಳೆ ಅನುಕೂಲವಾದ ಸ್ಥಳ. ಅಲ್ಲಿಗೇ ಬಂದು ನಿಮ್ಮ ಯೋಗಸಾಧನೆ ಮುಂದುವರಿಸಿ'– ಎಂದು ಹೇಳಿ ಪಶುಪತಿ ಅಯ್ಯರ್‌ರವರು ನಂಬೂದರಿಯವರನ್ನು ತಮ್ಮ ಮನೆಗೆ ಕರೆತಂದರು.

"ಒಂದು ದಿನ ನಂಬೂದರಿಯವರು ಮೊಲೆಪಾಲ್ ಶಿಖರದಲ್ಲಿ ತಿರುಗಾಡುತ್ತಿದ್ದಾಗ ನನ್ನ ಗುರುಗಳಾದ ಉಗ್ರಪ್ಪಸ್ವಾಮಿಗಳ ಸಂದರ್ಶನವಾಯಿತು. ನಾನೂ ಆಗ ಸ್ವಾಮಿಗಳ ಜೊತೆಯಲ್ಲಿಯೇ ಇದ್ದೆ. ನಂಬೂದರಿಯವರು ಗುರುವಿನ ಸಹಾಯವಿಲ್ಲದೆ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದವರು. ಆದರೆ ಅವರಿಗೆ ಪ್ರಪ್ರಥಮವಾಗಿ ಅಲೆಯುವ ಮನಸ್ಸನ್ನು ಬಲೆಯಲ್ಲಿ ಬಂಧಿಸುವ ಕಲೆಯೇ ತಿಳಿದಿರಲಿಲ್ಲ. ಇದರಿಂದಾಗಿ ಅವರ ಸಾಧನೆ ಪ್ರಾರಂಭದಲ್ಲಿಯೇ ಪರದಾಡುತ್ತಿತ್ತು. ಉಗ್ರಪ್ಪಸ್ವಾಮಿಗಳಾದರೆ ಗುರುವಿನ ಅನುಗ್ರಹ ಪಡೆದು, ಯೋಗ ಸಾಧನೆಯ ಹಾದಿಯಲ್ಲಿ ಬಹುದೂರ ಮುನ್ನಡೆದಿದ್ದವರು. ಆದರೂ ಅವರಲ್ಲಿ ಒಂದು ವಿಚಿತ್ರ ಅಭ್ಯಾಸ – ಅದು ಕೆಟ್ಟರೂಢಿಯೇ ಎಂದು ನನಗನಿಸುತ್ತದೆ – ಬೆಳೆದು ಬಂದಿತ್ತು. ಪ್ರತಿಕ್ಷಣದಲ್ಲಿಯೂ ತಮ್ಮನ್ನು ತಾವೇ ಪರೀಕ್ಷಿಸಿಕೊಳ್ಳುತ್ತಿದ್ದರು ಉಗ್ರಪ್ಪಸ್ವಾಮಿಗಳು ! ತಮಗಿನ್ನೂ ಐಹಿಕವಾದ ಭೋಗಾಭಿಲಾಷೆಗಳಿವೆಯೇ ಎಂದು ಪ್ರಶ್ನಿಸಿಕೊಂಡು ಅನವಶ್ಯಕವಾಗಿ ಪರೀಕ್ಷೆಗೊಳಪಡುತ್ತಿದ್ದರು. ಆ ದಿನ ನಂಬೂದರಿಯವರನ್ನು ಕಂಡಾಗಲೂ ಹೀಗೆಯೇ ಪರೀಕ್ಷೆ ಮಾಡಿಕೊಂಡರು........"

" ತುಂಬಾ ವಿಚಿತ್ರವಾಗಿದೆ ಮುನಿತಾಯಪ್ಪ ಇದೆಲ್ಲಾ "

" ಈ ಯೋಗ ಸಾಧಕರ, ಸನ್ಯಾಸಿಗಳ ಜೀವನವೇ ತುಂಬಾ ವಿಚಿತ್ರ ಸ್ವಾಮಿ. ಪ್ರಪಂಚದ ಚಿತ್ರ-ವಿಚಿತ್ರಗಳಿಗೆ ಬೇಸತ್ತು, ಹೀಗಳೆದು, ವಿರಕ್ತರಾಗಿ,

ಕೊನೆಗೆ ತಾವೇ ವಿಚಿತ್ರ ವ್ಯಕ್ತಿಗಳಾಗಿ ಬದಲುತ್ತಾರೆ. ಇದನ್ನು ನೋಡಿದರೆ ವಿಚಿತ್ರವು ವಿಶ್ವದೊಳಗೋ - ವಿಶ್ವವು ವಿಚಿತ್ರದೊಳಗೋ - ಅದೇ ಬಗೆಹರಿಯದ ತೊಡಕಾಗಿ ಕಾಣುತ್ತದೆ!"

" ನಿಜ. ಒಂದನ್ನು ಬಿಟ್ಟು ಇನ್ನೊಂದಿಲ್ಲ "

" ನೋಡಿ, ನಂಬೂದರಿಯವರನ್ನು ಕಂಡೊಡನೆ ಉಗ್ರಪ್ಪಸ್ವಾಮಿಗಳು– 'ಅಯ್ಯಾ, ನನ್ನ ಕಪಾಳಕ್ಕೆ ಎರಡು ಬಿಗಿ' ಎಂದು ಕೇಳಿದರು! 'ಅಯ್ಯೋ, ಇದೇನು ಹುಚ್ಚು! ಕಪಾಳಕ್ಕೆ ಹೊಡಿ ಎಂದು ತಾವಾಗಿಯೇ ಕೇಳುವ ಜನರೂ ಇದ್ದಾರೆಯೇ?' ಎಂದುಕೊಂಡು ನಂಬೂದರಿಯವರು ಬೆರಗುಗಣ್ಣುಗಳಿಂದ ನೋಡುತ್ತಾ ಸ್ತಬ್ಧರಾಗಿ ನಿಂತರು. 'ಹ್ಞುಂ, ಯಾಕೆ ನಿಂತಿದ್ದೀಯಾ? ಹೊಡಿ' ಎಂದು ಉಗ್ರಪ್ಪಸ್ವಾಮಿಗಳು ಗರ್ಜಿಸಿದರು. ನಂಬೂದರಿಯವರು ನಡುಗಿದರು. ಉಪಾಯಗಾಣದೆ ಸ್ವಾಮಿಗಳ ಬಳಿಗೆ ಬಂದು ನಿಂತರು. 'ಏನು ನೋಡುತ್ತಿದ್ದೀಯಾ? ಹೊಡಿ' ಎಂದು ಇನ್ನೊಮ್ಮೆ ಸ್ವಾಮಿಗಳು ನುಡಿದಾಗ, 'ಶಿವ ಶಿವಾ' ಎನ್ನುತ್ತಾ ನಂಬೂದರಿಯವರು ಅವರ ಕೆನ್ನೆಗೆ ಫಟೀರನೆ ಹೊಡೆದರು ಸ್ವಾಮಿಗಳಿಗೆ ಪೆಟ್ಟಿನಿಂದ ನೋವಾಯಿತೋ ಇಲ್ಲವೋ- ಅವರಂತೂ ಗಹಗಹಿಸಿ ನಕ್ಕರು. ಎರಡು ಕ್ಷಣಗಳ ಬಳಿಕ- 'ಹತ್ತು, ನನ್ನ ಬೆನ್ನಿನ ಮೇಲೆ' ಎಂದು ಆರ್ಭಟಿಸಿದರು. ದಿಕ್ಕು ತೋಚದೆ ನಂಬೂದರಿಯವರು 'ಉಪ್ಪುಕೂಸಿ' ನಂತೆ ಸ್ವಾಮಿಗಳ ಬೆನ್ನಿಗೆ ಜೋತು ಬಿದ್ದರು! 'ಹ್ಞುಂ' ಎಂದು ಗಟ್ಟಿಯಾಗಿ ಹೂಂಕರಿಸಿ, ಅಲ್ಲಿಂದ ಒಂದೇ ಸಮನೆ ಓಡಿದರು ಸ್ವಾಮಿಗಳು. ಆ ಓಟದ ರಭಸದಲ್ಲಿ ತಾನೆಲ್ಲಿ ಬಿದ್ದುಬಿಡುತ್ತೇನೋ- ಸ್ವಾಮಿಗಳು ಎಲ್ಲಿ ಕೆಡವಿಬಿಡುತ್ತಾರೋ ಎಂದು ನಂಬೂದ್ರಿಯವರ ಎದೆ ಡವಗುಟ್ಟಿತು. ಆದರೆ ಸ್ವಾಮಿಗಳು ಅಂತಹ ಅನಾಹುತವನ್ನೇನೂ ಮಾಡದೆ, ನೇರವಾಗಿ ಪಶುಪತಿ ಅಯ್ಯರ್‌ರವರ ಮನೆಗೆ ಬಂದು, ನಂಬೂದರಿಯವರನ್ನು ಇಳಿಸಿದರು."

" ಸ್ವಾಮಿಗಳಿಗೆ ಆ ಮನೆ ಹೇಗೆ ಗೊತ್ತು?"

" ಅದೇ ಎಲ್ಲರಿಗೂ ಆಶ್ಚರ್ಯ! ಅಯ್ಯರ್‌ರವರಿಗೂ ಸ್ವಾಮಿಗಳಿಗೂ ಮೊದಲು ಪರಿಚಯವಿರಲಿಲ್ಲ. ನಂಬೂದರಿಯವರ ಪರಿಚಯವಾದದ್ದೂ ಸಹ ಅದೇ ಮೊದಲು. ಆದರೂ ಅವರು ತಾವಿಂತಹ ಕಡೆಗೆ ಹೋಗಬೇಕು ಎಂದು ಸ್ವಾಮಿಗಳಿಗೆ ಹೇಳಲಿಲ್ಲ....ಸ್ವಾಮಿಗಳೇ ನೇರವಾಗಿ ಪಶುಪತಿ ಅಯ್ಯರ್‌ರವರ

ಮನೆಗೆ ಬಂದರು !"

"ಅದೇ ದಿವ್ಯಜ್ಞಾನ ಮುನಿತಾಯಪ್ಪ ! ಉಗ್ರಪ್ಪಸ್ವಾಮಿಗಳು ನಿಜವಾಗಿಯೂ ಮಹಾ ಮಹಿಮರು !"

"ಆ ದಿನ ಪಶುಪತಿ ಅಯ್ಯರ್‌ರವರ ಮುದಿ ತಾಯಿ ಅಡಿಗೆ ಮನೆಯಲ್ಲಿ ಕುಳಿತು ಗುಟ್ಟಾಗಿ ಆಲೂಗೆಡ್ಡೆ ಪಲ್ಯವನ್ನು ಮಾಡಿಟ್ಟು, ದೋಸೆ ಹಾಕುತ್ತಿದ್ದರು. ದೋಸೆಯ 'ಚೊಯ್' ಶಬ್ದವಾಗಲಿ, ವಾಸನೆಯಾಗಲಿ ಹೊರಗೆ ತಿಳಿಯದಿರಲೆಂದು ಅಡಿಗೆ ಕೋಣೆಯ ಬಾಗಿಲನ್ನು ಬಲವಾಗಿ ಭದ್ರಪಡಿಸಿಕೊಂಡಿದ್ದರು. ಪಶುಪತಿ ಅಯ್ಯರ್‌ರವರಿಗೂ ಆ ವಿಷಯ ತಿಳಿಯದು. ಎಲ್ಲರ ಕಣ್ಣಿಗೂ ಮಣ್ಣೆರಚಬೇಕೆಂದು ನಿಶ್ಚಯಿಸಿದ್ದ ಆ ಮುದುಕಿಯ ಕಣ್ಣಿಗೇ ಮಣ್ಣೆರಚಿಬಿಟ್ಟರು ಸ್ವಾಮಿಗಳು ಆ ದಿನ!....ನಂಬೂದರಿಯವರನ್ನು ಕೆಳಗಿಳಿಸಿದೊಡನೆ, ಅಂಗಳಕ್ಕೆ ಬಂದು ಚಪ್ಪಂಗಾಲು ಹಾಕಿ ಕುಳಿತು, 'ಇಪ್ಪತ್ತು ದೋಸೆ-ಪಲ್ಯಾ' ಎಂದು ಕೂಗಿಕೊಂಡರು ! ಅಯ್ಯರ್‌ರವರಿಗೆ ಗಾಬರಿಯಾಯಿತು. 'ಎಲ್ಲಿಂದ ತಂದುಕೊಡಲಪ್ಪಾ' ಎಂದು ಯೋಚಿಸಿದರು. ಅವರ ಮನಸ್ಸನ್ನರಿತ ಸ್ವಾಮಿಗಳು—'ಹ್ಞಂ, ಅಡಿಗೆ ಮನೆಯಲ್ಲಿದೆ. ಹೋಗಿ ತೆಗೆದುಕೊಂಡು ಬಾ' ಎಂದರು. ಅವರ ಮಾತಿನಂತೆಯೇ ಅಯ್ಯರ್‌ರವರು ಅಡಿಗೆ ಮನೆಯ ಕಡೆಗೆ ಹೋಗಿ, ಬಾಗಿಲುತಟ್ಟಿ-ತೆಗೆಸಿದರು. ಒಲೆಯ ಮುಂದೆ ಪೇರಿಸಿಟ್ಟಿದ್ದ ದೋಸೆಯನ್ನೂ, ಬಳಿಯಲ್ಲೇ ಇದ್ದ ಪಲ್ಯವನ್ನೂ ಕಂಡು ಅವಾಕ್ಕಾದರು. ಕೂಡಲೇ ಅವರಿಗೆ ಸ್ವಾಮಿಗಳ ವಿಷಯದಲ್ಲಿ ಪೂಜ್ಯಭಾವನೆ ಮೂಡಿತು. ಅವರ ಶಕ್ತಿಯ ಅರಿವಾಯಿತು. ಪೇರಿಸಿಟ್ಟಿದ್ದ ದೋಸೆಗಳನ್ನೂ-ಪಲ್ಯವನ್ನೂ ತೆಗೆದುಕೊಂಡು ಅಯ್ಯರ್‌ರವರು ಅಂಗಳಕ್ಕೆ ಬಂದು, ಸ್ವಾಮಿಗಳ ಮುಂದಿಟ್ಟು, ದೀರ್ಘದಂಡ ನಮಸ್ಕಾರ ಮಾಡಿದರು. ಕೂಡಲೇ ಸ್ವಾಮಿಗಳು ಘೊಳ್ಳನೆ ನಕ್ಕು, ದೋಸೆಗಳನ್ನು ನನಗೂ-ನಂಬೂದರಿಯವರಿಗೂ ಕೊಟ್ಟು, ತಾವು ಒಂದು ಚೂರೂ ತಿನ್ನದೆ ಹೊರಟುಹೋದರು. ಅಂದಿನಿಂದ ನಂಬೂದರಿಯವರಿಗೂ ಸಹ ಅವರೇ ಗುರುಗಳಾಗಿ, ಅಲೆಯುವ ಮನಸ್ಸನ್ನು ನೆಲೆಯಾಗಿ ನಿಲ್ಲಿಸಿ, ಯೋಗಮುಖರನ್ನಾಗಿ ಮಾಡಿ, ಬ್ರಹ್ಮಸಾಕ್ಷಾತ್ಕಾರದ ಪ್ರಥಮ ಪಾಠವನ್ನು ಕಲಿಸಿದರು....ಪಶುಪತಿ ಅಯ್ಯರ್‌ರವರ ಪರಿಚಯ ನನಗೆ ಅಂದು ಆಯಿತು." ಎಂದ ಮುನಿತಾಯಪ್ಪ.

ಈ ಸೋಜಿಗದ ಸಂಗತಿಗಳನ್ನು ಕೇಳುತ್ತ ಶಾಸ್ತ್ರಿಗಳು ವಿಸ್ಮಿತರಾಗಿದ್ದರು.

ಇಬ್ಬರೂ ಹಾದಿ ನಡೆದು ಪಶುಪತಿ ಅಯ್ಯರ್‌ರವರ ಮನೆಯನ್ನು ಮುಟ್ಟಿದರು.

ಅನಿರೀಕ್ಷಿತವಾಗಿ ಬಂದ ಮುನಿತಾಯಪ್ಪನನ್ನು ಕಂಡೊಡನೆ ಅಯ್ಯರ್ ರವರು ಕುತೂಹಲಾವಿಷ್ಟರಾಗಿ ಕುಶಲವನ್ನು ವಿಚಾರಿಸಿದರು. ಶಾಸ್ತ್ರಿಗಳನ್ನೂ ಪರಿಚಯ ಮಾಡಿಸಿದ್ದಾಯಿತು.

"ಇವರು ಈ ಊರಿನಲ್ಲಿರುವವರೆಗೆ ಇವರ ಯೋಗಕ್ಷೇಮ ನಿಮಗೆ ಸೇರಿದ್ದು ಸ್ವಾಮಿಾ" ಎಂದು ಮುನಿತಾಯಪ್ಪ ಬಿನ್ನವಿಸಿಕೊಂಡ.

'ಅಗತ್ಯವಾಗಿ ಆಗಲಿ. ಆ ವಿಷಯದಲ್ಲಿ ಸಂಶಯವಾಗಲಿ–ಸಂಕೋಚ ವಾಗಲಿ ಬೇಡ" ಎಂದು ಭರವಸೆಯಿತ್ತರು ಪಶುಪತಿ ಅಯ್ಯರ್.

ಶಾಸ್ತ್ರಿಗಳು ಇನ್ನೊಮ್ಮೆ ಸ್ನಾನಮಾಡಿದರು-ಬಿಸಿ ನೀರಿನಲ್ಲಿ. ದೋಸೆ, ಕಾಫಿಯ ಉಪಾಹಾರವಾಯಿತು. ಉಗ್ರಪ್ಪ ಸ್ವಾಮಿಗಳನ್ನು ಕಂಡು ಬರುತ್ತೇ ವೆಂದು ಹೇಳಿ ಇಬ್ಬರೂ ಹೊರಹೊರಟರು.

"ಸ್ವಾಮಿಗಳು ಎಲ್ಲಿದ್ದಾರೆಂದು ಹುಡುಕುವುದು ಮುನಿತಾಯಪ್ಪ ?"

"ನೀವು ಬನ್ನಿ ಸ್ವಾಮಿ. ನಾನು ಕರೆದುಕೊಂಡು ಹೋಗುತ್ತೇನೆ"

ಎಂದು ದೃಢವಾದ ದನಿಯಲ್ಲಿ ನುಡಿದ ಮುನಿತಾಯಪ್ಪ. ಹಿಂದಿನ ರಾತ್ರಿ, ಅವನು ಶಾಸ್ತ್ರಿಗಳಿಗೆ ತಿಳಿಯದಂತೆ ಎದ್ದು ಹೋಗಿ, 'ಭೂತೇಶ್ವರ ಚೇಟಿಕೆ'ಯನ್ನು ಆವಾಹನೆ ಮಾಡಿದ್ದ. ಆ ಅಗೋಚರ ಯಕ್ಷಿಣೀ ಶಕ್ತಿ ಅವನ ಕಿವಿಯಲ್ಲಿ ಸ್ವಾಮಿಗಳ ಸಂಗತಿಯನ್ನೆಲ್ಲಾ ವಿವರವಾಗಿ ತಿಳಿಸಿತ್ತು. ಆದ್ದರಿಂದ ಸ್ವಾಮಿಗಳನ್ನು ಹುಡುಕುವುದು ಮುನಿತಾಯಪ್ಪನಿಗೆ ಕಷ್ಟವಾಗಲಿಲ್ಲ.

ಇಬ್ಬರೂ ನಡೆಯುತ್ತಾ ಊರ ಹೊರಗಡೆ ಬಂದರು. ರಮಣಾಶ್ರಮದ ಎದುರುಗಡೆ – ಸ್ವಲ್ಪ ದೂರದಲ್ಲಿದ್ದ ಭಾರೀ ಮಂಟಪವನ್ನು ಸೇರಿ ಒಳ ಹೊಕ್ಕರು. ಈಶಾನ್ಯ ಮೂಲೆಯಲ್ಲಿ ಗಂಭೀರವಾಗಿ ಕುಳಿತಿದ್ದ ಉಗ್ರಪ್ಪ ಸ್ವಾಮಿಗಳನ್ನು ಮುನಿತಾಯಪ್ಪ ಗುರುತಿಸಿದ.

"ಸ್ವಾಮಿಾ, ಇವರೇ ಗುರುಗಳು. ಸಾಷ್ಟಾಂಗ ನಮಸ್ಕಾರ ಮಾಡಿ"

ಶಾಸ್ತ್ರಿಗಳು ಭಯ – ಭಕ್ತಿಯಿಂದ ನಮಸ್ಕರಿಸಿದರು.

ಉಗ್ರಪ್ಪಸ್ವಾಮಿಗಳು ಧ್ಯಾನಾಸಕ್ತರಾಗಿದ್ದುದರಿಂದ, ಅರೆಗಣ್ಣು ತೆರೆದು ನಾಸಾಗ್ರದಲ್ಲಿ ದೃಷ್ಟಿಯನ್ನು ನೆಟ್ಟಿದ್ದರು. ಶಾಸ್ತ್ರಿಗಳೂ ಮುನಿತಾಯಪ್ಪನೂ ತುಸು ದೂರದಲ್ಲಿ ಕುಳಿತು ಅವರನ್ನೇ ನೋಡುತ್ತಿದ್ದರು.

ಸುಮಾರು ಎರಡು ಗಂಟೆಯ ಬಳಿಕ ಕಣ್ಣು ತೆರೆದ ಸ್ವಾಮಿಗಳು

ಮುನಿತಾಯಪ್ಪನನ್ನು ಕಂಡು ಮೆಲುನಗೆ ನಕ್ಕರು. ಅವರ ದೃಷ್ಟಿ ತಮ್ಮೆಡೆಗೆ ಹರಿದಾಗ ಶಾಸ್ತ್ರಿಗಳು ಇನ್ನೊಮ್ಮೆ ಕೈ ಜಾಡಿಸಿದರು.

ಎಲ್ಲರೂ ಎರಡು ನಿಮಿಷ ಮೌನವಾಗಿದ್ದರು.

ಅನಂತರ " ಮುನೀ, ಈ ಕಾಲೊತ್ತು "

ಎನ್ನುತ್ತಾ ತಮ್ಮ ಬಲಗಾಲನ್ನು ನೀಡಿದರು ಸ್ವಾಮಿಗಳು.

" ಹ್ಞಂ, ನೀನು ಈ ಎಡಗಾಲೊತ್ತು "

ಎಂದು ಶಾಸ್ತ್ರಿಗಳ ಕಡೆಗೆ ನೋಡಿದರು.

ಸಭಾಪತಿಶಾಸ್ತ್ರಿಗಳು ನಿಸ್ಸಂಕೋಚವಾಗಿ ಸ್ವಾಮಿಗಳ ಎಡಗಾಲನ್ನು ತಮ್ಮ ತೊಡೆಯಮೇಲಿಟ್ಟುಕೊಂಡು ಮೃದುವಾಗಿ ಒತ್ತತೊಡಗಿದರು.

ಮುನಿತಾಯಪ್ಪ ಅಳುಕುತ್ತಳುಕುತ್ತಾ ತಾನು ಬಂದಿರುವ ಉದ್ದೇಶ ವನ್ನೂ, ಶಾಸ್ತ್ರಿಗಳ ಸಂಗತಿಯನ್ನೂ ಬಿನ್ನವಿಸಿಕೊಂಡ. ಅವನು ಮಾತು ಮುಗಿಸಿದೊಡನೆ, ಸ್ವಾಮಿಗಳು ತಟ್ಟನೆ ತಮ್ಮ ಬಲಗಾಲನ್ನು ಹಿಂದಕ್ಕೆ ಎಳೆದುಕೊಂಡು, ಮುನಿತಾಯಪ್ಪನ ಕೆನ್ನೆಗೆ ಬಲವಾದ ಪೆಟ್ಟು ಕೊಟ್ಟರು. ಆ ಕ್ಷಣ ಅವನಿಗೆ ತಲೆ ತಿರುಗಿದಂತಾಗಿ, ಕೆಳಗುರುಳುವಂತಾಯಿತು. ಅಷ್ಟರಲ್ಲಿ ಸ್ವಾಮಿಗಳೇ ಅವನನ್ನು ಹಿಡಿದುಕೊಂಡು, ಅವನ ತಲೆಯನ್ನು ತಮ್ಮ ತೊಡೆಯಮೇಲಿಟ್ಟುಕೊಂಡು, ಕೆನ್ನೆಯನ್ನು ನೇವರಿಸಿದರು.

" ಮುನೀ, ನಾನು ಯಾರು ? "

" ಉಗ್ರಪ್ಪಸ್ವಾಮಿಗಳು – ನನ್ನ ಗುರುದೇವರು "

" ಉಗ್ರಪ್ಪಸ್ವಾಮಿ ಯಾರು ? "

" ಅದು ನಿಮ್ಮ ಹೆಸರು ಸ್ವಾಮಿ "

" ನನ್ನ ಹೆಸರು ಅಂದರೇನು ಮುನೀ ? "

ಸ್ವಾಮಿಗಳ ಪ್ರಶ್ನೆಗೆ ಉತ್ತರಿಸಲಾರದಾದ ಮುನಿತಾಯಪ್ಪ.

ಉಗ್ರಪ್ಪಸ್ವಾಮಿಗಳ ಮುಖ ಚಿಂತಾಕ್ರಾಂತವಾಗಿತ್ತು. ' ನಾನು ಯಾರು ? ನಾನು ಯಾರು ? ' ಎಂದು ಅವರ ಮನಸ್ಸು ಒಂದೇ ಸಮನೆ ಮೊರೆಯುತ್ತಿತ್ತೆಂದು ಕಾಣುತ್ತದೆ.

ಎರಡು ಕ್ಷಣಗಳ ಬಳಿಕ ಮೂವರೂ ಅಲ್ಲಿಂದೆದ್ದು, ಸನಿಯದಲ್ಲೇ ಇದ್ದ ತಿಳಿನೀರಿನ ಕಲ್ಯಾಣಿಗೆ ಇಳಿದರು. ಎಡಬಲದಲ್ಲಿ ಶಾಸ್ತ್ರಿಗಳನ್ನೂ ಮುನಿ ತಾಯಪ್ಪನನ್ನೂ ಕೂಡಿಸಿಕೊಂಡು ಸ್ವಾಮಿಗಳು ನೀರನ್ನು ನೋಡುತ್ತಾ

ಕುಳಿತರು. ನೀರಿನಲ್ಲಿ ಅವರ ಬಿಂಬ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಬೋಳಾದ ತಲೆ, ವಿಶಾಲ ಫಾಲ, ಹೊಳೆಯುವ ಕಣ್ಣುಗಳು, ಕುರುಚಲು ಗಡ್ಡ – ಮೀಸೆ ಬೆಳೆದಿದ್ದರೂ ತೇಜಃಪೂರ್ಣವಾಗಿ ಕಾಣುವ ಮುಖ, ಕೊರಳಲ್ಲಿ ರುದ್ರಾಕ್ಷಿಯ ಸರ – ಉಗ್ರಪ್ಪಸ್ವಾಮಿಗಳು ಸನ್ಯಾಸ ಧರ್ಮಕ್ಕೆ ಅನುಗುಣವಾಗಿಯೇ ಅಲಂಕೃತರಾಗಿದ್ದರು. ತಮ್ಮ ಪ್ರತಿಬಿಂಬವನ್ನೇ ನೋಡುವುದರಲ್ಲಿ ತಲ್ಲೀನ ರಾಗಿದ್ದ ಅವರು ಸ್ವಲ್ಪ ಹೊತ್ತಿನ ಬಳಿಕ ಎಚ್ಚೆತ್ತು, ತಮ್ಮಷ್ಟಕ್ಕೆ ತಾವೇ ಮಂತ್ರ ಹೇಳತೊಡಗಿದರು –

**" ಯಥೈವ ಖಲ್ವಿಯಂ ಭಗವೋಽಸ್ಮಿಚ್ಛರೀರೆ**
**ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ**
**ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವ**
**ಮೇವಯಮುಸ್ಮಿನ್ನಂಧೇಽನ್ಧೋ ಭವತಿ**
**ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽ**
**ಸ್ಯೈವ ಶರೀರಸ್ಯ ನಾಶಮನ್ವೇಷ ನಸ್ಯತಿ**
**ನಾಹ ಮತ್ರ ಭೋಗ್ಯಂ ಪಶ್ಯಾಮೀತಿ................ "**

ಉಗ್ರಪ್ಪ ಸ್ವಾಮಿಗಳು ಹೇಳುತ್ತಿದ್ದಂತೆ, ಸಂಸ್ಕೃತ ವಿದ್ವಾಂಸರಾದ ಶಾಸ್ತ್ರಿಗಳಿಗೆ ಛಾಂದೋಂಗ್ಯ ಉಪನಿಷತ್ತಿನ ನೆನಪಾಯಿತು. ಪ್ರಜಾಪತಿ – ಇಂದ್ರರ ಸಂವಾದದಲ್ಲಿ, ಇದು ಇಂದ್ರನು ಹೇಳುವ ಮಾತು ಎಂಬುದೂ ಖಚಿತವಾಯಿತು.

ಒಮ್ಮೆ ಇಂದ್ರ ಮತ್ತು ವಿರೋಚನ ಎಂಬಿಬ್ಬರಿಗೆ 'ನಾನು ಯಾರು ?' ಎಂಬ ಸ್ವರೂಪ ಜ್ಞಾನ ಸಮಸ್ಯೆ ತಲೆದೋರಿತು. ಇಬ್ಬರೂ ಗುರುವಾದ ಪ್ರಜಾಪತಿಯ ಬಳಿಗೆ ಬಂದು ತಮ್ಮ ಸಮಸ್ಯೆಯನ್ನು ಮುಂದಿಟ್ಟರು. "ಅಯ್ಯಾ, ಶುಚಿರ್ಭೂತರಾಗಿ, ಒಳ್ಳೆಯ ವಸ್ತ್ರಗಳಿಂದ ಅಲಂಕರಿಸಿಕೊಂಡು ಅನಂತರ ಒಂದು ಅಗಲವಾದ ಪಾತ್ರೆಯಲ್ಲಿ ನೀರಿಟ್ಟು, ಅದರಲ್ಲಿ ನಿಮ್ಮನ್ನು ನೋಡಿಕೊಳ್ಳಿ. ಆಗ ನಿಮ್ಮ ಸ್ವರೂಪವು ಹೊರಬಿದ್ದು, 'ನಾನು ಯಾರು ?' ಎಂಬ ನಿಮ್ಮ ಪ್ರಶ್ನೆಗೆ ಉತ್ತರ ದೊರೆಯುತ್ತದೆ" ಎಂದು ಪ್ರಜಾಪತಿ ಸಮಾಧಾನ ಹೇಳಿದ. ಶಿಷ್ಯರಿಬ್ಬರೂ ಹಾಗೆಯೇ ಮಾಡಿದರು. ವಿರೋಚನ ನೀರಿನಲ್ಲಿ ಪ್ರತಿಬಿಂಬಿಸಿದ ತನ್ನ ಸೌಂದರ್ಯವನ್ನೂ, ದೇಹ ದಾರ್ಢ್ಯವನ್ನೂ

ಕಂಡು, 'ಈ ದೇಹವೇ ನಾನು' ಎಂದು ನಿಶ್ಚಯಿಸಿ ಸಮಾಧಾನಪಟ್ಟುಕೊಂಡ. ಆದರೆ ವಿವೇಕಿಯಾದ ಇಂದ್ರನಿಗೆ ತೃಪ್ತಿಯಾಗಲಿಲ್ಲ. ಆಗಲೇ ಆತ ಪ್ರಜಾಪತಿಯನ್ನು ಕುರಿತು – 'ಯಥೈವ ಖಲ್ವಯಂ....ನಾಹ ಮತ್ರ ಭೋಗ್ಯಂ ಪಶ್ಯಾಮಿ' ಎಂದು ಹೇಳುತ್ತಾನೆ.

'ಹೇ ಭಗವನ್, ವೇಷ ಭೂಷಣ ಅಲಂಕಾರಾದಿಗಳಿಗೆ ಅನುಗುಣವಾಗಿ ನನ್ನ ಶರೀರದ ಪ್ರತಿಬಿಂಬವೂ ರೂಪಾಂತರ ಹೊಂದುತ್ತದೆ. ಅಲಂಕಾರಾದಿಗಳು ನಾಶವಾದರೆ ಈ ರೂಪವೂ ನಾಶ. ಶರೀರವು ಕುರುಡಾದರೆ ಆತ್ಮವೂ ಕುರುಡು; ಶರೀರವು ಕುಂಟಾದರೆ ಆತ್ಮವೂ ಕುಂಟು, ಶರೀರವು ಒಕ್ಕಣ್ಣಿಯಾದರೆ ಆತ್ಮವೂ ಒಕ್ಕಣ್ಣಿ; ಶರೀರವು ನಾಶವಾದರೆ ಆತ್ಮವೂ ನಾಶವಾಗುತ್ತದೆ. (ಆತ್ಮವು ಅವಿನಾಶಿಯಲ್ಲವೆ?) ಆದುದರಿಂದ ಈ ನೀರಿನಲ್ಲಿ ಕಾಣುವ ಪ್ರತಿಬಿಂಬವನ್ನು ನಾನು ನನ್ನ ಸ್ವರೂಪವೆಂದು ಹೇಗೆ ತಿಳಿಯಲಿ? ಇದರಿಂದ ನಾನು ತೃಪ್ತನಾಗಲಾರೆ'

ಎಂದು ಹೇಳುತ್ತಾನೆ ಇಂದ್ರ.

ಅದೇ ಅತೃಪ್ತಿಯನ್ನೇ ಈಗ ಗುರುಗಳು ಸೂಚಿಸುತ್ತಿದ್ದಾರೆ ಎಂದುಕೊಂಡರು ಶಾಸ್ತ್ರಿಗಳು. ಮುಸಿತಾಯಪ್ಪ ತನಗೇನೂ ಅರ್ಥವಾಗದವನಂತೆ ಗುರುಗಳ ಮುಖವನ್ನೇ ನೋಡುತ್ತಿದ್ದ. ಗುರುಗಳು ಶಾಸ್ತ್ರಿಗಳ ಮುಖವನ್ನು ನೋಡಿ— "ನೀನೇನು ಹೇಳುತ್ತೀಯೋ?" ಎಂದರು.

"ಶ್ರೀ ಶಂಕರರ ಶಾರೀರಕ ಭಾಷ್ಯವನ್ನು ಗುರುಗಳು ದಯಮಾಡಿ ಅವಧರಿಸಬೇಕು"

"ಹ್ಞಾ, ಶಾರೀರಕ ಭಾಷ್ಯವೇ?"

"ಹೌದು, ಗುರುದೇವ"

ಸ್ವಾಮಿಗಳು ವಿಸ್ಮಯದಿಂದ ಶಾಸ್ತ್ರಿಗಳನ್ನು ಒಂದು ಕ್ಷಣ ನಿಟ್ಟಿಸಿದರು.

"ಹ್ಞಂ, ಹೇಳು ನೋಡೋಣ"

ಶಾಸ್ತ್ರಿಗಳು ಆರಂಭಿಸಿದರು—

**ದೇಹಮಾತ್ರಂ ಚೈತನ್ಯ ವಿಶಿಷ್ಟ ಮಾತ್ಮೇತಿ ಪ್ರಾಕೃತಾ**
**ಜನಾಲೋಕಾಯಿತಿ ತಾಶ್ಚ ಪ್ರತಿಪನ್ನಾಃ।**

ಶಾಸ್ತ್ರವನ್ನು ನಂಬದೆ ಕೇವಲ ಜಗತ್ತನ್ನು ನೋಡಿ ಸಿದ್ಧಾಂತಗಳನ್ನು

ಕಲ್ಪಿಸತಕ್ಕ ಪ್ರಾಕೃತರು ಮತ್ತು ಚಾರ್ವಾಕರು ನಾಲ್ಕು ತತ್ವಗಳನ್ನು ಮಾತ್ರ ನಂಬುತ್ತಾರೆ. ಆತ್ಮವೆಂಬುದಿಲ್ಲ. ಶರೀರದಲ್ಲಿ ಅಗ್ನಿ ಜಲ ವಾಯು ಪೃಥ್ವಿಗಳ ಸಂಯೋಗದಿಂದ ಚೈತನ್ಯ ಹುಟ್ಟುತ್ತದೆ. ಇಂತಹ ಚೇತನದಿಂದ ಕೂಡಿದ ಶರೀರದಲ್ಲಿ 'ನಾನು' ಎಂಬುದರ ಭಾವನೆಯು ಕಲ್ಪನೆಯಾಗುತ್ತದೆ.

**ಮನ ಇತ್ಯನ್ಯೇ ।**

ಯೋಚಿಸಲು ಆಧಾರವಾದ ಮನಸ್ಸೇ ಆತ್ಮ.

**ವಿಜ್ಞಾನ ಮಾತ್ರಂ ಕ್ಷಣಿಕ ಮಿತ್ಯೇಕೇ ।**

ಆತ್ಮ ಒಂದು ಸ್ಥಿರ ತತ್ವವಲ್ಲ. ಅದು ಕ್ಷಣಿಕ ವಿಜ್ಞಾನ. ಇದು ಬೌದ್ಧ ಯೋಗಾಚಾರ್ಯರ ಸಾಂಪ್ರದಾಯ ಸಿದ್ಧಾಂತ.

**ಶೂನ್ಯಮಿತ್ಯ ಪರೇ ।**

ಸುಷುಪ್ತಿಯಲ್ಲಿ ಸರ್ವವೂ ಶೂನ್ಯ. 'ನಾನು' ಎಂಬುದು ಎಚ್ಚರದಲ್ಲಿನ ವ್ಯವಹಾರ. ಆದ್ದರಿಂದ ಅದೂ ಶೂನ್ಯ. ಇದು ಬೌದ್ಧರ ಮಾಧ್ಯಮಿಕ ಸಂಪ್ರದಾಯದ ಮತ.

**ಅಸ್ತಿ ದೇಹಾದಿ ವ್ಯತಿರಿಕ್ತಃ ಸಂಸಾರೀ ಕರ್ತಾ ಭೋಕ್ತೇತ್ಯಪರೇ ।**

ಆತ್ಮವೆಂಬುದು ಶರೀರಕ್ಕಿಂತ ಭಿನ್ನವಾದುದು. ಅದು ಸಂಸಾರದಲ್ಲಿ ಕರ್ತೃವೂ ಭೋಕ್ತೃವೂ ಆಗಿರುತ್ತದೆ.

**ಭೋಕ್ತೈವ ಕೇವಲಂ ನ ಕರ್ತೇತ್ಯೇಕೇ ।**

ಆತನು ಕೇವಲ ಭೋಕ್ತೃ. ಕರ್ತನಲ್ಲ.

**ಅಸ್ತಿ ತದ್ವ್ಯತಿರಿಕ್ತ ಈಶ್ವರಃ ಸರ್ವಜ್ಞಃ ಸರ್ವಶಕ್ತಿರಿತಿ ಕೇಚಿತ್।**

ನಾನು ಎಂಬುದೊಂದು ವಸ್ತು. ಇದಕ್ಕಿಂತ ಬೇರೆಯಾದುದು ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೆಂಬುದೊಂದು ವಸ್ತು.

**ಆತ್ಮಾ ಸಭೋಕ್ತುರಿತ್ಯಪರೇ !**

ಆತ್ಮನು ಭೋಕ್ತನೆಂದೂ ಹೇಳುತ್ತಾರೆ.

**ಜೀವೋ ಬ್ರಹ್ಮೈವ ಆತ್ಮತ್ವಾತ್ ಬ್ರಹ್ಮವತ್ ಇತ್ಯಾದಿ ಯುಕ್ತೇಃ ।**

ಬ್ರಹ್ಮನಂತೆ ವ್ಯಾಪಕನಾಗಿರುವುದರಿಂದ ಜೀವನೂ ಬ್ರಹ್ಮನೇ.

ಉಗ್ರಪ್ಪಸ್ವಾಮಿಗಳು ಆನಂದತುಂದಿಲರಾದರು. ಅವರ ಮುಖ ಅಪೂರ್ವವಾದ ಶೋಭೆಯಿಂದ ಬೆಳಗಿತು.

**' ಸರ್ವಂ ಖಲ್ವಿದಂ ಬ್ರಹ್ಮ '**

**' ಬ್ರಹ್ಮಂ ಸತ್ಯಂ ಜಗನ್ಮಿಥ್ಯಾ '**

**' ಅಹಂ ಬ್ರಹ್ಮಾಸ್ಮಿ........ಅಹಂ ಬ್ರಹ್ಮಾಸ್ಮಿ '**

ಎನ್ನುತ್ತಾ ತಟ್ಟನೆ ಎದ್ದು ಸರಸರನೆ ಕಲ್ಯಾಣಿಯ ಮೆಟ್ಟಲುಗಳನ್ನು ಏರಿ ಮಂಟಪಕ್ಕೆ ಬಂದು ಕುಳಿತರು. ಶಾಸ್ತ್ರಿಗಳೂ ಮುನಿತಾಯಪ್ಪನೂ ಅವರನ್ನೇ ಹಿಂಬಾಲಿಸಿ ಧಾವಿಸಿದರು.

" ಅಯ್ಯಾ, ನೀನು ಗಣಪತಿ ಉಪಾಸನೆ ಮಾಡುವುದರ ಬದಲು ಬ್ರಹ್ಮ ಸಾಕ್ಷಾತ್ಕಾರ ಮಾಡಿಕೊಳ್ಳಯ್ಯಾ "

" ಸ್ವಾಮಿ ನಾನು ಸಂಸಾರ ಬಂದನದಲ್ಲಿ ಸಿಕ್ಕಿಕೊಂಡಿದ್ದೇನೆ "

ಶಾಸ್ತ್ರಿಗಳ ಮಾತಿಗೆ ಘೊಳ್ಳನೆ ನಕ್ಕರು ಸ್ವಾಮಿಗಳು.

" ಸಂಸಾರದಲ್ಲಿದ್ದು ಸನ್ಯಾಸಿಯಾಗಲಾರೆಯಾ ?"

" ಅದು ಹೇಗೆ ಸಾಧ್ಯ ಗುರುದೇವ ? ಸನ್ಯಾಸಿಯಾಗಿದ್ದುಕೊಂಡು ಸಂಸಾರ ನಡೆಸುವವರು ಇದ್ದಾರೆಯೇ ? "

" ಏಕಿಲ್ಲ ? ನಡೆಸುವವನೂ – ನಡೆಯುವವನೂ ನೀನೆ ? ಪರಮಾತ್ಮನಲ್ಲವೆ ? ಸಂಸಾರದಲ್ಲಿ ಕರ್ತೃವೂ ಭೋಕ್ತೃವೂ ಆದ ಜೀವನೇ ಬ್ರಹ್ಮ ಎಂದು ಅದ್ವೈತ ಸಾರುವುದಿಲ್ಲವೇ ? "

" ಸಂಸಾರಿ – ಸನ್ಯಾಸಿಗಳೆಂಬ ಭೇದವಿದೆಯಲ್ಲಾ ಗುರುದೇವ !"

ಉಗ್ರಪ್ಪಸ್ವಾಮಿಗಳು ನಕ್ಕು ನುಡಿದರು –

" ಮಲೆಯ ಮೇಲಿನ ಭೋಗಿಗಳೂ ಉಂಟು – ಮೊಲೆಯ ಮೇಲಿನ ಯೋಗಿಗಳೂ ಉಂಟು ! "

ಈ ನಿಜಗುಣನ ನುಡಿಯನ್ನು ಕೇಳಿದಾದ ಶಾಸ್ತ್ರಿಗಳಿಗೆ ಇನ್ನಷ್ಟು ಆಶ್ಚರ್ಯವಾಯಿತು. ಉಗ್ರಪ್ಪಸ್ವಾಮಿಗಳು ಸಮಸ್ತ ತತ್ವಾಧ್ಯಯನ ಮಾಡಿ ಅವರ ಪರಿಶೋಧನೆಗಾಗಿಯೇ ಸನ್ಯಾಸವನ್ನು ಸ್ವೀಕರಿಸಿದ್ದಾರೆಯೇನೋ !– ಎಂದುಕೊಂಡರು ಶಾಸ್ತ್ರಿಗಳು.

" ಹಾಗಾದರೆ, ನೀನು ಗಣಪತಿ ಔಪಾಸನೆಯನ್ನು ಕಲಿಯಲೇ ಬೇಕೆಂದು ನಿಶ್ಚಯಿಸಿರುವೆಯಾ ? "

"ಹೌದು ಗುರುದೇವ........ಕೃಪೆ ಮಾಡಬೇಕು"

"ಅದರಿಂದ ಲೋಕ ವಿನಾಶಕ ಕಾರ್ಯ ಕೈಗೊಳ್ಳಬೇಕೆಂಬುದು ನಿನ್ನ ಇಚ್ಛೆಯೇ ?"

ಹಾಗೆ ಕೇಳುವಾಗ ಉಗ್ರಪ್ಪ ಸ್ವಾಮಿಗಳಿಗೆ ನಗು ಬಂದಿತ್ತು.

"ಗುರುದೇವಾ ಲೋಕ ಕಲ್ಯಾಣವೇ ನನ್ನ ಗುರಿ"

"ಹಾಗಾದರೆ ಆತ್ಮ ಕಲ್ಯಾಣ ಬೇಡಲೇ ಬೇಡವೇನು ?"

ಶಾಸ್ತ್ರಿಗಳು ನಿರುತ್ತರರಾದರು.

ಎರಡು ಕ್ಷಣ ಮೌನವಾವರಿಸಿತು.

ಅನಂತರ –

"(ಲಂ) ಲಮಿತ್ಯಾದಿ ಪಂಚಪೂಜೆಗೆ ಸಿದ್ಧಪಡಿಸೆಂದು ಪಶುಪತಿ ಅಯ್ಯರ್‌ಗೆ ತಿಳಿಸು ಮುಸಿತಾಯಪ್ಪ" ಎಂದರು ಗುರುಗಳು.

ಮುಸಿತಾಯಪ್ಪನ ಮುಖ ಅರಳಿತು. ಗುರುಗಳು ಶಾಸ್ತ್ರಿಗಳಿಗೆ ಅನುಗ್ರಹ ಮಾಡಿದ್ದರಿಂದು ಅವನಿಗೆ ಆನಂದವಾಯಿತು.

"ಈಗಲೇ ಹೋಗಲೆ ಸ್ವಾಮಿ ?"

"ಹ್ಞಂ"

ಮುಸಿತಾಯಪ್ಪ ಹೊರಟುಹೋದನಂತರ, ಗುರುಗಳ ಆಜ್ಞೆಯಂತೆ ಶಾಸ್ತ್ರಿಗಳು ಇನ್ನೊಮ್ಮೆ ಸ್ನಾನ ಮಾಡಿದರು. ತೇವದ ಬಟ್ಟೆಯಲ್ಲಿಯೇ ಗುರುಗಳ ಮುಂದೆ ಕುಳಿತರು.

**'ಅನೇಕ ಮೇಕಂ ಗಜಮೇಕ ದಂತಂ। ಚೈತನ್ಯರೂಪಂ ಜಗದಾದಿ ಬೀಜಂ। ........ಶಂಭು ಸೂನುಂ ಸತತಂ ಭಜಾಮಿ........'**

**'ಸ್ವಾಂಕ ಸ್ಥಿತಾಯಾ........ವಿಶ್ವ ವಿಮೋಹನಂತಂ........'**

**'ವಿಘ್ನಾರ್ಗಳ ನಾಂ........ಮಹಾಂ ಭಜೇಯಂ........'**

ಸ್ತೋತ್ರಪಾಠವಾಯಿತು.

ಅನಂತರ ಗುರು – ಶಿಷ್ಯರಿಬ್ಬರೂ ಎದ್ದು ಅರುಣಾಚಲೇಶ್ವರನ ದೇವಾಲಯಕ್ಕೆ ಬಂದು, ಗಣಪತಿಯ ಮಂದಿರದ ಬಳಿ ನಿಂತು ಪ್ರಾರ್ಥನೆ ಸಲ್ಲಿಸಿದರು. ಬಳಿಕ ಪಶುಪತಿ ಅಯ್ಯರ್‌ರವರ ಮನೆ ಸೇರಿ, ಪಂಚಪೂಜೆ ಆರಂಭಿಸಿದರು –

ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳ ಸಮರ್ಪಣೆಯಾಯಿತು. ಮೌನಧ್ಯಾನವೂ ಮುಗಿಯಿತು.

"ಇಲ್ಲೇ ಭಿಕ್ಷೆ ಸ್ವೀಕರಿಸಬೇಕು"

ಎಂದು ಅತ್ಯಂತ ವಿನಯದಿಂದ ಪಶುಪತಿ ಅಯ್ಯರ್‌ರವರು ಬೇಡಿಕೊಂಡರು. ಉಗ್ರಪ್ಪ ಸ್ವಾಮಿಗಳು ನಸುನಕ್ಕು ಒಪ್ಪಿದರು.

"ಅಯ್ಯಾ, ಇದೇ ಸಂಸಾರದಲ್ಲಿದ್ದೂ ಸನ್ಯಾಸಿಯಾಗಿ ವರ್ತಿಸುವ ಲಕ್ಷಣ"

ಪಶುಪತಿ ಅಯ್ಯರ್‌ರವರನ್ನು ತೋರಿಸುತ್ತಾ ಉಗ್ರಪ್ಪ ಸ್ವಾಮಿಗಳು ಶಾಸ್ತ್ರಿಗಳಿಗೆ ಹೇಳಿದರು.

"ಪಶುಪತಿ ಅಯ್ಯರ್ ನಿಷ್ಕಾಮಕರ್ಮಿ. ತಾವರೆ ಎಲೆಯ ಮೇಲಿನ ಜಲ ಬಿಂದುವಿನಂತೆ ಅವರ ಸಂಸಾರ ಜೀವನ! ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ ; ಆಕ್ಷಣ ಹಾರಿ ಹೋದಂತೆ !"

ಉಗ್ರಪ್ಪ ಸ್ವಾಮಿಗಳ ಈ ತೆರನಾದ ತಾತ್ವಿಕ ನುಡಿಗಳನ್ನು ಕೇಳಲು ಎಲ್ಲರಿಗೂ ತುಂಬಾ ಆಸಕ್ತಿ ಇದ್ದಿತು. ಅಲ್ಲದೆ ಸ್ವಾಮಿಗಳು ಇಷ್ಟು ಶಾಂತ ಚಿತ್ತರಾಗಿ, ಪ್ರಸನ್ನರಾಗಿ ಕುಳಿತು ಹೇಳುವುದೇ ಒಂದು ವಿಶೇಷ

ಭೋಜನಾನಂತರವೂ ಸಹ ತಾತ್ವಿಕ ಗೋಷ್ಠಿ ನಡೆಯಿತು. ರಾತ್ರಿಯ ಪಂಚಪೂಜೆಯ ಬಳಿಕ ಶಾಸ್ತ್ರಿಗಳನ್ನು ಕರೆದುಕೊಂಡು ಸ್ವಾಮಿಗಳು ಹೊರಟು ಹೋದರು. ಮುನಿತಾಯಪ್ಪ ಮಾತ್ರ ಅಯ್ಯರ್‌ರವರ ಮನೆಯಲ್ಲೇ ಉಳಿಯ ಬೇಕಾಯಿತು.

ಮರುದಿನದಿಂದ ನಾಲ್ಕು ದಿನಗಳವರೆಗೆ ಸ್ವಾಮಿಗಳಾಗಲಿ, ಶಾಸ್ತ್ರಿಗಳಾಗಲಿ ಎಲ್ಲಿಯೂ ಕಾಣಿಸಲಿಲ್ಲ. ಅಯ್ಯರ್‌ರವರ ಮನೆಯ ಕಡೆಯೂ ಸುಳಿಯಲಿಲ್ಲ.

ಐದನೆಯ ದಿನ ಸ್ವಾಮಿಗಳು ಮಾತ್ರ ಬಂದರು ಶಾಸ್ತ್ರಿಗಳು ಬಾರದಿದ್ದುದನ್ನು ಕಂಡು ಮುನಿತಾಯಪ್ಪನಿಗೆ ಕಳವಳವಾಯಿತು. ಅದನ್ನು ಗುರುಗಳು ಬೇಗನೇ ಅರಿತು ಕೊಂಡರು.

"ಮುನೀ, ನಿನ್ನ ಸ್ನೇಹಿತರು ಕ್ಷೇಮವಾಗಿದ್ದಾರೆ. ಅವರ ವಿಚಾರವಾಗಿ ಏನೂ ಯೋಚಿಸಬೇಡ. ಧೈರ್ಯವಾಗಿರು"

ಗುರುಗಳ ಮಾತು ಮುನಿತಾಯಪ್ಪನಿಗೆ ಸಮಾಧಾನ ನೀಡಿತು.

" ಸ್ವಾಮಿ, ಇನ್ನೆಷ್ಟು ದಿನ ಅವರು ಇಲ್ಲೇ ಇರಬೇಕಾದೀತು ? "

" ಅವರ ಸಾಧನೆ ಮುಗಿಯಬೇಕು. ಗಣಪತಿ ಪ್ರಸನ್ನನಾಗಬೇಕು "

" ಅದುವರೆಗೂ ನಾನು ಇಲ್ಲಿಯೇ ಇರಬೇಕೆ ? "

" ಇರಬೇಕಾದ ಅವಶ್ಯಕತೆಯಿಲ್ಲ. ನೀನು ಹೊರಡು "

" ಅವರು.... ? "

" ಸಾಧನೆ ಮುಗಿದ ಮೇಲೆ ಅವರನ್ನು ಕಳಿಸುತ್ತೇನೆ "

ಎಂದರು ಗುರುಗಳು.

ಮುನಿತಾಯಪ್ಪ ದೀರ್ಘದಂಡ ನಮಸ್ಕಾರ ಮಾಡಿದ. ಗುರುಗಳು ಅವನನ್ನು ಆಶೀರ್ವದಿಸಿ ಹಿಂತಿರುಗಿದರು.

ಅದೇ ಸಂಜೆ ಮುನಿತಾಯಪ್ಪ ಊರಿಗೆ ಪ್ರಯಾಣ ಮಾಡಿದ. ಆದರೆ ಅವನ ಮನಸ್ಸಿಗೇಕೋ ನೆಮ್ಮದಿಯಿರಲಿಲ್ಲ ರೈಲಿನಲ್ಲಿ ಕುಳಿತಾಗ ಹಲವಾರು ಯೋಚನೆಗಳು ಅವನನ್ನು ಕಾಡತೊಡಗಿದವು. ' ಛೆ, ನನಗೇಕೆ ಇವತ್ತು ಇಂಥಾ ಕೆಟ್ಟ ಯೋಚನೆಗಳು ಬರುತ್ತಿವೆ ? ' ಎಂದು ತನ್ನನ್ನೇ ಛೀಮಾರಿ ಮಾಡಿಕೊಂಡ. ಆದರೂ ಮನಸ್ಸು ಗಾಳಿಯ ದೀಪವಾಯಿತು.

ಹೌದು, ತಾನು ಬೆಂಗಳೂರು ಬಿಟ್ಟು ಇಂದಿಗೆ ಸುಮಾರು ಏಳು ದಿನಗಳಾಗಿವೆ. ಇಷ್ಟರಲ್ಲಾಗಲೇ ಸುದರ್ಶನಯ್ಯಂಗಾರ್ಯರ ಎರಡನೆಯ ಮದುವೆಯೂ ಮುಗಿದಿದೆ....ಪಾಪ, ಅವರ ಪರಮ ಮಿತ್ರರಾದ ಶಾಸ್ತ್ರಿಗಳು ಇಲ್ಲದುದನ್ನು ಕಂಡು ಐಂಗಾರ್ಯರಿಗೆ ಎಷ್ಟು ಬೇಸರವಾಯಿತೋ ! ತಾನಾದರೂ ಇದ್ದಿದ್ದರೆ ಐಂಗಾರ್ಯರಿಗೆ ಸ್ವಲ್ಪ ಮಟ್ಟಿಗೆ ಸಮಾಧಾನವಿರುತ್ತಿತ್ತು........

ಶಾಸ್ತ್ರಿಗಳ ತಂಗಿ ರುಕ್ಕಮ್ಮನವರು ಭದ್ರಯ್ಯನ ' ಶಾಕಿನಿ ' ಕಾಟವನ್ನು ಹೇಗೆ ಸಹಿಸುತ್ತಿದ್ದಾರೆಯೋ ಏನೋ ! ಅವರೇನಾದರೂ ' ರಕ್ಷರೇಖೆ 'ಯನ್ನು ದಾಟಿದ್ದರೆ – ಭದ್ರಯ್ಯನ ವಶವಾಗುವುದರಲ್ಲಿ ಸಂದೇಹವೇ ಇಲ್ಲ. ಈ ವಿಷಯದಲ್ಲಿ ತನಗೇಕೋ ಸಂದೇಹವೇ ಬರುತ್ತಿದೆ – ರುಕ್ಕಮ್ಮನವರು 'ರಕ್ಷರೇಖೆ' ದಾಟಿ ಅನಾಹುತ ಮಾಡಿಕೊಂಡಿದ್ದಾರೆಂದು....ಛೆ, ತಾನು ಹೀಗೆ ಕೆಟ್ಟರೀತಿಯಲ್ಲಿ ಯೋಚಿಸಬಾರದು....

ನರಸಮ್ಮನವರು ! ಅವರು ಬದುಕಿರುವ ಸಂಗತಿ ಭದ್ರಯ್ಯನಿಗೇನಾದರೂ ತಿಳಿದು ಹೋಯಿತೆ ? ಅಯ್ಯೋ ! ಆ ವಿಷಯ ತಿಳಿದಿದ್ದರೆ, ಅದರಿಂದ ಎಷ್ಟು ಜನರಿಗೆ ತೊಂದರೆಯಿದೆ ! ಭದ್ರಯ್ಯನ ರೋಷ ಕೆರಳಿ, ಅದರಿಂದ

ದೊಡ್ಡ ಮಾರಣ ಹೋಮವೇ ಆದೀತು ! ಸದ್ಯ, ಹಾಗಾಗದಿರಲಿ....

........ಯಕ್ಷಿಣೀದೇವತೆಗಳನ್ನು ಪ್ರಸನ್ನ ಮಾಡಿಕೊಂಡ ಬಳಿಕ, ತಾನು ಬೆಂಗಳೂರು ಬಿಟ್ಟು ಇಷ್ಟೊಂದು ದೀರ್ಘಕಾಲ ಪರಸ್ಥಳದಲ್ಲಿ ಇದ್ದುದು ಇದೇ ಮೊದಲ ಬಾರಿ. ತಾನಿಲ್ಲದಾಗ ಎಷ್ಟೊಂದು ಮಂದಿ ಗಿರಾಕಿಗಳು ತನ್ನನ್ನು ಹುಡುಕಿಕೊಂಡು ಬಂದು ನಿರಾಶರಾಗಿ ಹಿಂತಿರುಗಿದರೋ ಪಾಪ !........

ಮುನಿತಾಯಪ್ಪನ ಯೋಚನಾಲಹರಿ ಹರಿದಂತೆಲ್ಲಾ ಪ್ರಯಾಣದ ದಾರಿಯೂ ಹರಿಯಿತು. ಮನಸ್ಸಿನ ಕಳವಳ ಹೆಚ್ಚಿದಂತೆಲ್ಲಾ ಬೆಂಗಳೂರು ಹತ್ತಿರವಾಯಿತು. ಮರುದಿನ ಮುಂಜಾನೆ ಬಂದ ಮದರಾಸು ಮೆಯಿಲ್ ಗಾಡಿ ಅವನನ್ನು ಬೆಂಗಳೂರಿಗೆ ತಲಪಿಸಿತು.

ನಿಲ್ದಾಣದಿಂದ ಒಂದೇ ಉಸಿರಿಗೆ ಮನೆಯತ್ತ ಧಾವಿಸಿದ ಮುನಿತಾಯಪ್ಪ. ಮಾವಳ್ಳಿ ಸೇರಿ, ದೊಡ್ಡ ಅರಳೀಮರದ ಬಳಿಗೆ ಬರುವ ವೇಳೆಗೇ ತುಸು ದೂರದಲ್ಲಿ ಕಾಣುತ್ತಿದ್ದ ಮನೆಯ ಬಳಿ ಸ್ವಲ್ಪವೂ ಕಳೆಯೇ ಇಲ್ಲದುದನ್ನು ಕಂಡು ಅವನ ಕಳವಳ ಇಮ್ಮಡಿಸಿತು. ಪ್ರತಿದಿನ ಬೆಳಿಗ್ಗೆ ಮನೆಯ ಮುಂಗಡೆ ನೀರು ಚಿಮುಕಿಸಿ, ರಂಗವಲ್ಲಿ ಇಡುತ್ತಿದ್ದಳು ಅವನ ಹೆಂಡತಿ. ಆದರೆ ಆ ದಿನ ಅಂತಹದೇನೂ ಇಲ್ಲದೆ 'ಪಾಳು' ಸುರಿಯುತ್ತಿತ್ತು. 'ಬೆಳಕು ಹರಿದು ಎಷ್ಟೋ ಹೊತ್ತಾಗಿದೆ ! ಬಾಗಿಲನ್ನಾದರೂ ತೆಗೆಯಬೇಡವೇ' ಎಂದುಕೊಂಡ ಮುನಿತಾಯಪ್ಪ.

ಬಾಗಿಲು ಬಡಿದ ಶಬ್ದಕ್ಕೆ ಅವನ ಹೆಂಡತಿ ಓಗೊಡಲಿಲ್ಲ.

" ತಂಜೀ....ತಂಜೀ........"

ನಾಲ್ಕಾರು ಬಾರಿ ಕೂಗಿದ ಬಳಿಕ ಹೆಂಡತಿ ತಂಜಮ್ಮ ಎದ್ದು ಬಂದು ಬಾಗಿಲು ತೆರೆದಳು. ಮುನಿತಾಯಪ್ಪ ಹೆಂಡತಿಯ ಮುಖ ನೋಡಿದ. ಆ ಮುಖದಲ್ಲಿ ಕಳೆಯಿಲ್ಲ, ಗೆಲುವಿಲ್ಲ; ಸೋಮಾರಿತನದ ತೌರುಮನೆಯಂತೆ ಕಾಣುತ್ತಿದ್ದಾಳೆ ಹೆಂಡತಿ !

" ತಂಜೀ, ಯಾಕೆ ಹಿಂಗಿದ್ದೀಯಾ ? ಮೈ ಚೆಂದಾಕಿಲ್ವಾ ?"

ತಂಜಮ್ಮ ಗಂಡನ ಪ್ರಶ್ನೆಗೆ ಉತ್ತರಿಸಲಿಲ್ಲ. ಆಕಳಿಸುತ್ತಾ ಆಕೆ ಒಳಗೆ ನಡೆದಳು. ಅವಳ ವರ್ತನೆಯನ್ನು ಕಂಡು ಮುನಿತಾಯಪ್ಪ ದಿಗ್ಭ್ರಾಂತನಾದ.

ಸ್ವಲ್ಪಹೊತ್ತು ಸುಮ್ಮನಿದ್ದು, ಅನಂತರ ಮುಖ ತೊಳೆದು ಬರಲು ಬಚ್ಚಲಿನ ಕಡೆಗೆ ನಡೆದ. ಹಲ್ಲುಜ್ಜುತ್ತಿರುವಾಗಲೇ ಒಂದು ಹಲ್ಲು ಇದ್ದ

ಕ್ಕಿದ್ದಂತೆಯೇ ಮುರಿಯಿತು. ಬಹುಶಃ ಆ ಹಲ್ಲು ಮೊದಲೇ ಉಡ್ಡಾಡುತ್ತಿರ ಬೇಕು. ಅದೀಗ ಜೋರಾಗಿ ಉಜ್ಜಿದ್ದರಿಂದ ಮುರಿದು ಹೋಗಿರಬೇಕು— ಎಂದುಕೊಂಡ ಮುನಿತಾಯಪ್ಪ. ಆದರೆ ಬಾಯಿ ಮುಕ್ಕಳಿಸುವಾಗ ಎರಡೆರ ಡಾಗಿ, ನಾಲ್ಕು ನಾಲ್ಕಾಗಿ ಹಲ್ಲುಗಳೆಲ್ಲಾ ಉದುರಿಹೋದವು. ಮುನಿ ತಾಯಪ್ಪನ ಬಾಯಿ ಬೊಕ್ಕಾಯಿತು !

ದಿಕ್ಕು ತೋಚದಾಯಿತು ಮುನಿತಾಯಪ್ಪನಿಗೆ. ಇದಕ್ಕೆಲ್ಲಾ ಕಾರಣ ವೇನು ಎಂದು ಅವನ ಮನಸ್ಸು ಹತ್ತಾರು ಬಾರಿ ಪ್ರಶ್ನಿಸಿತು. ಆದರೆ ಉತ್ತರ ಹೊಳೆಯಲಿಲ್ಲ. ' ಆಗಲಿ, ಭೂತೇಶ್ವರ ಚೇಟಿಕೆಯನ್ನು ಕರೆದು ಕೇಳೋಣ ' ಎಂದುಕೊಂಡು ಅವನು ಅಡಿಗೆ ಮನೆಯ ಕಡೆಗೆ ಬಂದ.

ತಂಜಮ್ಮ ಮೊಣಕಾಲ ಮೇಲೆ ತಲೆಯೂರಿ ಅಡಿಗೆ ಕೋಣೆಯ ಮೂಲೆಯಲ್ಲಿ ಕುಳಿತಿದ್ದಾಳೆ. ಒಲೆಗೆ ಬೆಂಕಿಯನ್ನೇ ಹಾಕಿಲ್ಲ.

" ತಂಜೀ, ಕಾಫಿ – ಗೀಫಿ ಮಾಡೋಲ್ವ ?"

ಗಂಡನ ಮಾತು ಅವಳ ಕಿವಿಗೆ ಬಿದ್ದಂತೆಯೇ ತೋರಲಿಲ್ಲ. ಅವನೇ ಅವಳ ಬಳಿಗೈದು ರೆಟ್ಟೆ ಹಿಡಿದು ಎಬ್ಬಿಸಿ, ಇನ್ನೊಮ್ಮೆ ಅದೇ ಮಾತನ್ನೇ ಹೇಳಿದ. ' ಹ್ಞುಂ ' ಎಂದು ತೂರಾಡುತ್ತಾ ಒಲೆಯ ಬಳಿಗೆ ನಡೆದಳು ತಂಜಮ್ಮ.

ಮುನಿತಾಯಪ್ಪ ಸ್ನಾನ ಮುಗಿಸಿ ಬಂದು ತನ್ನ ಪೂಜಾಮಂದಿರದಲ್ಲಿ ಕುಳಿತ. ಏಕಾಗ್ರಮನಸ್ಸಿನಿಂದ ' ಭೂತೇಶ್ವರ ಚೇಟಿಕೆ 'ಯನ್ನು ಧ್ಯಾನಿಸಿದ. ಅರ್ಧ ಗಂಟೆಯಾಯಿತು, ಒಂದು ಗಂಟೆಯಾಯಿತು, ಎರಡು ಗಂಟೆ ಯಾಯಿತು........ಯಕ್ಷಿಣೀದೇವತೆ ಪ್ರಸನ್ನಳಾಗಲಿಲ್ಲ ; ಮೈ ತುಂಬಿಕೊಳ್ಳ ಲಿಲ್ಲ ! ಕೇವಲ ಹತ್ತು ನಿಮಿಷ ಕಾಲ ಏಕಾಗ್ರಚಿತ್ತದಿಂದ ಆವಾಹನೆ ಮಾಡಿದ ಮಾತ್ರಕ್ಕೆ ' ಭೂತೇಶ್ವರ ಚೇಟಿಕೆ ' ಪ್ರಸನ್ನಳಾಗಬೇಕು. ಆದರೆ ಎರಡು ಗಂಟೆಯ ಧ್ಯಾನವೂ ನಿಷ್ಪ್ರಯೋಜಕವಾಯಿತಲ್ಲಾ !

ನಿರಾಸೆಯಾಯಿತು ಮುನಿತಾಯಪ್ಪನಿಗೆ.

' ಭೂತೇಶ್ವರ ಚೇಟಿಕೆಯಂತೂ ಬರಲಿಲ್ಲ. ' ಬಿಲ್ವಯಕ್ಷಿಣಿ 'ಯನ್ನಾ ದರೂ ಕರೆಯೋಣವೆಂದು ಮತ್ತೆ ಧ್ಯಾನಾಸಕ್ತನಾದ. ಎರಡು ಗಂಟೆಯ ಆವಾಹನಾ ಜಪ ನಿಷ್ಫಲವಾಯಿತು. ಆ ದೇವತೆಯೂ ಪ್ರಸನ್ನಳಾಗಲಿಲ್ಲ. ಹಾಗೆಯೇ ಉಳಿದಿಬ್ಬರು ಯಕ್ಷಿಣೀ ದೇವತೆಗಳನ್ನು ಕರೆಯಲು ಯತ್ನಿಸಿ

ವಿಫಲನಾದಾಗ ಮುನಿತಾಯಪ್ಪ ಪಾತಾಳಕ್ಕೇ ಕುಸಿದುಹೋದ!

ಯಾರೋ ಒಬ್ಬ ಪ್ರಭಾವಶಾಲಿ ತನ್ನ 'ಯಕ್ಷಿಣಿ ವಿದ್ಯೆ'ಯನ್ನು ಕಂಡು ಸಹಿಸಲಾರದೆ ಈ ರೀತಿ ಮಾಡಿರಬೇಕೆಂಬುದು ಮುನಿತಾಯಪ್ಪನಿಗೆ ಬೇಗನೆ ಹೊಳೆಯಿತು. 'ಆ ವ್ಯಕ್ತಿ ಯಾರು' ಎಂಬುದು ಸಂದೇಹಾಸ್ಪದವಾಯಿತು. ಬಹುಶಃ ಭದ್ರಯ್ಯನೇ ಈ ಕುಟಿಲಕ್ಕೆ ಕಾರಣನಾಗಿರಬಹುದೇ – ಎಂದು ಒಮ್ಮೆ ಅವನಿಗನ್ನಿಸಿತು. ಆದರೆ ಆತನಿಗೆ ತನ್ನ ವಿದ್ಯೆಯ ಅರಿವು ಹೇಗಾಯಿತು?

ಹೆಂಡತಿ ತಂಜಮ್ಮನಿಗೆ ಬುದ್ಧಿ ಭ್ರಮೆಯಾಗಿದೆ; ಮಂಕು ಮುಚ್ಚಿಕೊಂಡಿದೆ.

ತನ್ನ 'ಯಕ್ಷಿಣೀ ದೇವತೆ'ಗಳೆಲ್ಲಾ ತನ್ನನ್ನು ತೊರೆದು ಓಡಿಹೋಗಿದ್ದಾರೆ.

ತನ್ನ ಹಲ್ಲುಗಳೆಲ್ಲಾ ಉದುರಿಹೋಗಿವೆ.

ಮುನಿತಾಯಪ್ಪನ ತಲೆಯಲ್ಲಿ ಯೋಚನೆಯ ಹೊಳೆ ಹರಿದುಹೋಯಿತು.

ತಂಜಮ್ಮ ಒಲೆಹೊತ್ತಿಸಿ, ಅದರ ಮುಂಗಡೆ ತೆಪ್ಪಗೆ ಕುಳಿತುಬಿಟ್ಟಿದ್ದಳು. ಒಲೆ ತನ್ನ ಪಾಡಿಗೆ ತಾನು ಉರಿಯುತ್ತಿತ್ತು. ಆದರೆ ಅದರ ಮೇಲೆ ಪಾತ್ರೆಯನ್ನಾಗಲಿ, ಪದಾರ್ಥವನ್ನಾಗಲಿ ಇಟ್ಟಿರಲಿಲ್ಲ!

ಮುನಿತಾಯಪ್ಪ ಹೆಂಡತಿಯ ಮೊದ್ದು ತನಕ್ಕೆ ಮರುಗಿದ. ಆಕೆಯನ್ನೇನೂ ಬೈಯ್ಯದೆ, ತಾನೇ ಅಡಿಗೆಗೆ ತೊಡಗಿದ. ಊಟ ಮುಗಿಯುವ ವೇಳೆಗೆ ಸಂಜೆ ಐದು ಗಂಟೆಯಾಯಿತು. ಅದೇ ಸಮಯಕ್ಕೆ ಸುದರ್ಶನ ಯ್ಯಂಗಾರ್ಯರೂ ವೆಂಕಟೇಶಯ್ಯನೂ ಅವನನ್ನೇ ಹುಡುಕಿಕೊಂಡು ಅಲ್ಲಿಗೆ ಬಂದರು.

"ಯಾವಾಗ ಬಂದೆ ಮುನಿತಾಯಪ್ಪ?"

ಸುದರ್ಶನಯ್ಯಂಗಾರ್ಯರು ಕೇಳಿದರು.

"ಇವತ್ತು ಬೆಳಿಗ್ಗೆ ಸ್ವಾಮಿ"

"ಶಾಸ್ತ್ರಿಗಳು?"

"ಅವರ ಸಾಧನೆ ಮುಗಿದಮೇಲೆ ಬರುತ್ತಾರೆ ಸ್ವಾಮಿ"

"ಇನ್ನೆಷ್ಟು ದಿನಕ್ಕೆ?"

"ಹೇಗೆ ಹೇಳುವುದಕ್ಕಾಗುತ್ತದೆ? ಗುರುಗಳು ಅನುಗ್ರಹಿಸಿ ಎಂದು

ಕಳಿಸುತ್ತಾರೆಯೋ ಏನೋ !"

ಇದುವರೆಗೂ ಮುನಿತಾಯಪ್ಪ ಸರಿಯಾಗಿ ತನ್ನ ಮುಖವನ್ನು ತೋರಿಸದೆಯೇ ಮಾತನಾಡುತ್ತಿದ್ದ. ಹಲ್ಲು ಬಿದ್ದ ಬೊಕ್ಕ ಬಾಯನ್ನು ತೋರಿಸಲು ಅವನಿಗೆ ಸಂಕೋಚ! ಆದರೆ ವೆಂಕಟೇಶಯ್ಯ ಅದನ್ನು ಕಂಡುಹಿಡಿಯದೆ ಬಿಡಲಿಲ್ಲ!

"ಎಲ್ಲಿ, ಈ ಕಡೆ ತಿರುಗು ಮುನಿತಾಯಪ್ಪ" ಎಂದ ವೆಂಕಟೇಶಯ್ಯ.

ಕೂಡಲೇ ಸುದರ್ಶನಯ್ಯಂಗಾರ್ಯರು—

"ಇದೇನಿದು? ಒಂದು ಹಲ್ಲೂ ಇಲ್ಲವಲ್ಲ!"

ಎಂದು ಆಶ್ಚರ್ಯಚಕಿತರಾಗಿ ಕೇಳಿದರು.

ಮುನಿತಾಯಪ್ಪ ಮೌನವಾಗಿದ್ದ.

ವೆಂಕಟೇಶಯ್ಯನ ಮುಖ ಕಂಗೆಟ್ಟಿತು. ಅವನ ಮನಸ್ಸು ಹಿಂದಿನ ಸಂಜೆಯ ಘಟನೆಯನ್ನು ನೆನಪು ಮಾಡಿಕೊಂಡಿತು.

"ಐಂಗಾರ್ಯರೇ, ಇದು ನಿಜವಾಗಿಯೂ ಭದ್ರಯ್ಯನ ಕೈವಾಡ. ನನಗೆ ಚೆನ್ನಾಗಿ ಗೊತ್ತು...."

ವೆಂಕಟೇಶಯ್ಯನ ಮಾತು ಸುದರ್ಶನಯ್ಯಂಗಾರ್ಯರಿಗೆ ಇನ್ನಷ್ಟು ವಿಸ್ಮಯವನ್ನುಂಟು ಮಾಡಿತು.

"ಹೇಗೆ?"

ಎರಡು ಕ್ಷಣಗಳ ಮೌನದ ಬಳಿಕ ವೆಂಕಟೇಶಯ್ಯ ಹೇಳತೊಡಗಿದ—

"ನಿನ್ನೆ ಸಂಜೆ ನಾನು ಇಲ್ಲಿಗೆ–ಮಾವಳ್ಳಿಗೆ–ಬರಬೇಕೆಂದು ಹೊರಟಿದ್ದೆ. ಮುನಿತಾಯಪ್ಪ ಬಂದಿದ್ದಾನೆಯೇನೋ ನೋಡೋಣ, ಹಾಗೆಯೇ ಶಾಸ್ತ್ರಿಗಳ ವಿಷಯವನ್ನೂ ವಿಚಾರಿಸಿಕೊಂಡು ಹೋಗೋಣ-ಎಂದುಕೊಂಡು ಹೊರಟಿದ್ದೆ. ಮಾವಳ್ಳಿಚೌಕದಲ್ಲಿ ಬಸ್ಸಿನಿಂದಿಳಿದು ಲಾಲ್‌ಬಾಗ್ ರಸ್ತೆಯ ಕಡೆಗೆ ಬರುವ ವೇಳೆಗೆ ಭದ್ರಯ್ಯ ಎದುರಿಗೆ ಸಿಕ್ಕಿದ.

'ಏನ್ ಸ್ವಾಮಿ ಇತ್ಲಾಗೆ?' – ಎಂದ.

'ಲಾಲ್‌ಬಾಗ್‌ಗೆ ಹೋಗ್‌ತಿದ್ದೀನಿ ಭದ್ರಯ್ಯನವರೇ' ಎಂದೆ.

'ಹ್ಞಂ. ಪಾಪ, ನೀವು ಒಬ್ರೇ ಒಬ್ರಾಗಿ ಬಿಟ್ಟಿರಿ ಈ ಪರ್‌ಪಂಚ್‌ದಾಗ. ಬೇಜಾರು! ಲಾಲ್‌ಬಾಗು–ಕಬ್ಬನ್ ಪಾರ್ಕು ಅಂತ ಓಗಿ ಕಾಲ ಕಳೀತೀರಿ!' ಎಂದು ನಕ್ಕ ಭದ್ರಯ್ಯ.

‘ ಏನಪ್ಪ ಮಾಡೋದು – ಎಲ್ಲಾ ದೈವೇಚ್ಛೆ !’ ಎಂದೆ

‘ ಎರಡನೆ ಮದುವೆ ಮಾಡಿಕೊಳ್ಳಿ ಸ್ವಾಮಿ ’

ಎಂದು ಭದ್ರಯ್ಯ ಹೇಳಿದಾಗ,

‘ ನಿಮ್ಮಂಥ ‘ ವಿದ್ಯೆ ’ ಕಲಿತ ಹುಲಿಗಳೇ ಎರಡನೆ ಮದುವೆ ಮಾಡಿಕೊಳ್ಳದೆ ಇರೋವಾಗ, ನನಗೇಕೆ ಭದ್ರಯ್ಯನವರೆ ’

ಎಂದು ನಾನು ನಕ್ಕು ಹೇಳಿದೆ.

‘ ಹುಲಿ ಒಸಿ ಉಸಾರು ತಪ್ಪಿದರೆ ಇಲಿ ಆಗೋಗ್ತಯ್ತೆ ಸ್ವಾಮಿ ’ ಎಂದ ಭದ್ರಯ್ಯ.

‘ ಯಾಕಪ್ಪ, ಈಗೇನಾಯಿತು ?’ ಎಂದು ಕೇಳಿದೆ.

‘ ನೋಡಿ ಸ್ವಾಮಿ, ಇಲ್ಲಿ ಯಾರೋ ಮುನಿತಾಯಪ್ಪ ಅಂತ ಅವನಂತೆ. ಇವತ್ತು ನನಗೆ ಸಮಾಚಾರ ಗೊತ್ತಾಯಿತು....ಅದೂ ಇವತ್ತು ಒಬ್ಬ ಗಿರಾಕಿ ನನ್ನ ಹತ್ತಿರ ಬಂದ. ಅವನು ಯಾವಾಗಲೂ ಮುನಿತಾಯಪ್ಪನ ಹತ್ತಿರ ಹೋಗಿ, ಯಂತ್ರ-ಮಂತ್ರ ಮಾಡಿಸಿಕೊಳ್ಳುತ್ತಿದ್ದನಂತೆ. ಇವತ್ತು ಆ ಮುನಿತಾಯಪ್ಪ ಊರಿನಲ್ಲಿರಲಿಲ್ಲ ಅಂತ ನನ್ನ ಹತ್ತಿರ ಬಂದ. ಅವನೇ ‘ ಇವನ ’ ಸುದ್ದೀನೆಲ್ಲಾ ಹೇಳಿದ. ಯಾಕೋ ಮನಸ್ಸು ತಡೀಲಿಲ್ಲ. ಹೆಂಗಾದರೂ ಆಗ್ಲಿ, ಈ ‘ ಇದ್ಯೆ ’ ಕಲಿತೋರು ಒಬ್ಬರನ್ನೊಬ್ಬರು ಸುಮ್ಕೆ ಬಿಡೋಕಿಲ್ಲ ! ಪೈಪೋಟಿ ಇದ್ದೇ ಇರ್ತದೆ ! ಅದ್ಕೇನೇ – ಮೊದಲೇ ಈ ಆಸಾಮಿೀನ ಮಟ್ಟ ಹಾಕ್ ಬುಡ್‌ಬೇಕು ಅಂದ್ಕೊಂಡ್ ಬಂದೆ. ಬಂದ ಕೆಲಸಾನೂ ಆಯ್ತು ಅನ್ನಿ !’

ಎಂದು ಭದ್ರಯ್ಯ ಮೀಸೆಯ ಮೇಲೆ ಕೈ ಹಾಕಿ ನಕ್ಕ.

ನನಗೆ ತುಂಬಾ ಕೋಪ ಬಂದಿತು ; ದುಃಖವೂ ಆಯಿತು. ಆದರೂ ತೋರ್ಪಡಿಸದೆ ಸುಮ್ಮನಿದ್ದೆ.

‘ ಬನ್ನಿ ಸ್ವಾಮಿ, ಕಾಫಿ ಕುಡಿಯೋಣ ’ ಎಂದು ಕರೆದ ಭದ್ರಯ್ಯ.

‘ ಈಗ ತಾನೆ ಆಯಿತು. ಬೇಡಪ್ಪ ’ ಎಂದೆ. ಆದರೂ ಬಿಡಲಿಲ್ಲ. ಬಲವಂತಮಾಡಿ ಕರೆದುಕೊಂಡು ಹೋದ.

‘ ನಮ್ಮ ಮನೇಕಡೆ ಬರೋದೇ ಬಿಟ್‌ಬಿಟ್ರಲ್ಲಾ ಸ್ವಾಮಿೀ ’ ಎಂದು ಕೇಳಿದ.

‘ ಬರದೆ ಉಂಟೆ ಭದ್ರಯ್ಯನೋರೆ. ಎಲ್ಲೋ ಪುರಸತ್ತು ಸಿಗಲಿಲ್ಲ ’

ಎಂದು ಹೇಳಿ ಸುಮ್ಮನಾದೆ. ಕಾಫಿ ಕುಡಿದಮೇಲೆ ಅವನನ್ನು ಕಳುಹಿಸಿ ಬಿಟ್ಟು ನಾನು ಮುನಿತಾಯಪ್ಪನ ಮನೆಗೆ ಬಂದು ವಿಚಾರಿಸಿದೆ. ಅವನು ಇನ್ನೂ ಬಂದಿಲ್ಲದಿದ್ದುದನ್ನು ಕೇಳಿ ಹಾಗೆಯೇ ಮಲ್ಲೇಶ್ವರಕ್ಕೆ ವಾಪಸ್ಸು ಹೋದೆ" ಎಂದು ವೆಂಕಟೇಶಯ್ಯ ಮಾತು ಮುಗಿಸಿದ.

ರುದ್ರ ಮೌನ ಆವರಿಸಿತ್ತು.

ಏನು ಮಾತನಾಡಬೇಕೆಂಬುದು ಯಾರಿಗೂ ತಿಳಿಯದು.

ಸ್ವಲ್ಪಹೊತ್ತಿನ ಬಳಿಕ ಮುನಿತಾಯಪ್ಪನೇ ಹೇಳಿದ

"ನೀವು ಹುಷಾರಾಗಿರಿ ಸ್ವಾಮಿ ವೆಂಕಟೇಶಯ್ಯನವರೆ. ನರಸಮ್ಮನವರು ಬದುಕಿರುವ ವಿಚಾರ ಸ್ವಲ್ಪ ಗೊತ್ತಾದರೆ ಸಾಕು ಭದ್ರಯ್ಯನಿಗೆ-ಮತ್ತೆ ಶುರುವಾಗುತ್ತದೆ ರಾದ್ಧಾಂತ. ಈಗಂತೂ ನನ್ನ ಶಕ್ತಿ ಕಳೆದುಹೋಗಿದೆ. ನರಸಮ್ಮನವರಿಗೆ ಕೊಟ್ಟಿರುವ ಯಂತ್ರಕ್ಕೆ ಈಗ 'ಪ್ರತಿಶಕ್ತಿ ನಿರೋಧಕ' ಬಲವಿಲ್ಲ. ಅಮ್ಮನವರು ಬದುಕಿರುವ ಸುಳಿವು ತಿಳಿದರೆ ಸಾಕು–ನಾಲ್ಕೇ ದಿನದಲ್ಲಿ ಅವರ ಜೀವ ತೆಗೆದುಬಿಡುತ್ತಾನೆ ಭದ್ರಯ್ಯ"

"ಆಗಲಿ ಮುನಿತಾಯಪ್ಪ. ನಾನು ಹುಷಾರಾಗಿರುತ್ತೇನೆ. ಆದರೆ ಈಗ ನಿನ್ನ ಸ್ಥಿತಿ ನೋಡಿದರೆ ನನ್ನ ಎದೆಯಲ್ಲಿ ಬೆಂಕಿ ಇಟ್ಟಹಾಗಾಗಿದೆ"

"ಏನು ಮಾಡುವುದು ಸ್ವಾಮಿ. ಆಗಿದ್ದು ಆಗಿಹೋಯಿತು. ನಾನಿನ್ನು ಉಡುಗಿಹೋದೆ. ಇನ್ನು ಮೇಲಕ್ಕೇಳುವುದು ಈ ಜನ್ಮದಲ್ಲೇ ಸಾಧ್ಯವಿಲ್ಲ. 'ಯಕ್ಷಿಣೀ ದೇವತೆ'ಗಳು ಇನ್ನೊಂದು ಸಾರಿ ಪ್ರಸನ್ನರಾಗುವುದಿಲ್ಲ. ಅದಕ್ಕೆ ಮುಖ್ಯವಾಗಿ ಮನಸ್ಸು ನಿಂತ ನಿಲುವಿನಲ್ಲಿ ನಿಲ್ಲುವುದಿಲ್ಲ. ಏಕಾಗ್ರಚಿತ್ತವಿಲ್ಲದ ಮೇಲೆ ಯಾವ ಸಾಧನೆಯೂ ಫಲಿಸುವುದಿಲ್ಲ-ಸಿದ್ಧಿಯೂ ಇಲ್ಲ."

"ಮುನಿತಾಯಪ್ಪ, ಆಗಬಾರದ್ದು ಆಗಿಹೋಯಿತು. ನೀನೇ ನಮ್ಮ ಪಾಲಿಗೆ ದೇವದೂತನಾಗಿದ್ದೆ...."

ಮುಂದಕ್ಕೆ ಮಾತನಾಡಲು ಸಾಧ್ಯವಾಗಲಿಲ್ಲ ವೆಂಕಟೇಶಯ್ಯನಿಗೆ.

"ಸ್ವಾಮಿ, ಎಲ್ಲಕ್ಕೂ ಒಂದೊಂದು ಕೊನೆಯಿದೆ. ಇವತ್ತು ನನ್ನ ವಿದ್ಯೆಗೆ ಕೊನೆಯಾಯಿತು. ಇನ್ನೊಂದು ದಿನ ಭದ್ರಯ್ಯನ 'ವಿದ್ಯೆ'ಗೂ ಕೊನೆಯಿದ್ದೇ ಇದೆ....ಶಾಸ್ತ್ರಿಗಳು ಗುರುವಿನ ಅನುಗ್ರಹದಿಂದ ವಿದ್ಯೆ ಕಲಿತು ಬಂದರೆ, ಭದ್ರಯ್ಯನನ್ನು ಮಟ್ಟಹಾಕುವುದು ಎಷ್ಟರಲ್ಲಿದೆ?"

"ಬೇಗನೆ ಅವರು ಹಿಂತಿರುಗಲಿ"

ಎಂದು ನಿಟ್ಟುಸಿರಿಟ್ಟರು ಸುದರ್ಶನಯ್ಯಂಗಾರ್ಯರು.

ಮೂವರ ಮನಸ್ಸುಗಳೂ ಅಶಾಂತಿಯಿಂದ ಅಲ್ಲಕಲ್ಲೋಲವಾಗಿದ್ದವು. ಪ್ರಸಕ್ತ ಪರಿಸ್ಥಿತಿಯನ್ನು ಮರೆಯಲೋಸುಗ ಮಾತಿನ ಧಾರೆಯನ್ನು ಬೇರೆಡೆಗೆ ತಿರುಗಿಸಿದ ಮುನಿತಾಯಪ್ಪ—

" ಮದುವೆ ಚೆನ್ನಾಗಿ ನಡೆಯಿತೆ ಸ್ವಾಮಿ ?"

" ಚೆನ್ನ ಏನು ಬಂತಪ್ಪ ! ಓನೋ ನಡೆಯಿತು-ಅಷ್ಟೆ. ನೀವೆಲ್ಲಾ ಇಲ್ಲ ದಿದ್ದುದು ಅಷ್ಟೇನೂ ಸಂತೋಷವಾಗಿರಲಿಲ್ಲ. "

" ಚಿಕ್ಕ ಅಮ್ಮನವರನ್ನು ಮನೆಗೆ ಕರೆಸಿಕೊಂಡಿದ್ದೀರಿ ತಾನೆ ?"

" ಹ್ಞಂ. ಎಲ್ಲಾ ಶಾಸ್ತ್ರವೂ ಮದುವೆ ದಿನವೇ ಮುಗಿದುಹೋಯಿತು ! ತಾಳಿ ಕಟ್ಟಿದ ದಿನವೇ 'ಇಬ್ಬರು ಹೆಂಡಿರ ಕಾಟ' ಷುರುವಾಯಿತು !!"

ಎಂದು ನಕ್ಕು ನುಡಿದರು ಸುದರ್ಶನಯ್ಯಂಗಾರ್ಯರು.

" ಕಾಟವೇನೂ ಇಲ್ಲ ಮುನಿತಾಯಪ್ಪ. ಇಬ್ಬರೂ ಕೂಡ ಹುಟ್ಟಿದ ಅಕ್ಕ ತಂಗಿಯರ ಹಾಗೆ ಇದ್ದಾರೆ " ಎಂದ ವೆಂಕಟೇಶಯ್ಯ.

ಆ ಮಾತನ್ನು ಸುದರ್ಶನಯ್ಯಂಗಾರ್ಯರೂ ಒಪ್ಪಿಕೊಂಡರು.

" ಬಾ ಮುನಿತಾಯಪ್ಪ. ಮನೆಗೆ ಹೋಗೋಣ. ಇವತ್ತಾದರೂ ಹಳೆಯ ಮದುವೆ ತಾಂಬೂಲ ತೆಗೆದುಕೊಂಡು ಬರುವೆಯಂತೆ !"

" ಹ್ಞಂ, ನಡೀರಿ ಸ್ವಾಮಿ. ನನಗೂ ಇಲ್ಲಿ ಬೇಜಾರಾಗಿದೆ "

ಎಂದ ಮುನಿತಾಯಪ್ಪ.

ಮೂವರೂ ಹೊರಬಾಗಿಲ ಹೊಸಲಿನ ಬಳಿಗೆ ಬಂದರು ; ದಿಗ್ಭ್ರಮೆ ಗೊಂಡರು....

ಬಾಗಿಲಿಗೆ ಎದುರಾಗಿ ಬೀದಿಯಲ್ಲಿ ನಿಂತು ನೋಡುತ್ತಿದ್ದಾನೆ ಭದ್ರಯ್ಯ! ಅವನ ಕಣ್ಣಲ್ಲಿ ಮಿಂಚಿ ತುಟಿಯಲ್ಲಿ ತೇಲುತ್ತಿರುವ ಕುಟಿಲ ನಗೆ ಈಟಿಯಂತೆ ಮೂವರನ್ನೂ ಇರಿಯುತ್ತಿದೆ !

ಸುದರ್ಶನಯ್ಯಂಗಾರ್ಯರ ಎದೆ 'ಝಲ್' ಎಂದಿತು.

ವೆಂಕಟೇಶಯ್ಯನ ಕಾಲು 'ಗಡಗಡ'ನೆ ನಡುಗಿತು.

ಮುನಿತಾಯಪ್ಪ ಸೋತ ಸಿಪಾಯಿಯಂತೆ ಕಂಗೆಟ್ಟಿದ್ದ.

" ನಮಸ್ಕಾರ ಸ್ವಾಮಿಾ ಯಂಕ್ಟೇಶಯ್ಯನೋರೆ !"

" ನಮಸ್ಕಾರ ಭದ್ರಯ್ಯನವರಿಗೆ "

ಹೇಗೋ ಹೊರಬಂದಿತು ಕಂಪಿಸುವ ಕಂಠದಿಂದ ತೊದಲು ನುಡಿ.

" ಲಾಲ್‌ಬಾಗ್‌ಗೆ ಓಯ್ತಿದ್ದೀರೇನೋ ! "

ವ್ಯಂಗ್ಯವಾಗಿ ಕೇಳಿದ ಭದ್ರಯ್ಯ.

" ಹ್ಞಾಂ, ಹೋಗಿದ್ದೆ....ನೀವು ?"

" ನಾನೂ ಇಲ್ಲೀನೇ ಬಂದಿದ್ದೆ. ಯಾರನ್ನೋ ನೋಡಬೇಕಾಗಿತ್ತು "

ಎನ್ನುತ್ತಾ ಭದ್ರಯ್ಯ ಹೊರಟುಬಿಟ್ಟ. ಅವನು ಹೋಗುವುದನ್ನೇ ನೋಡುತ್ತಾ ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿದ್ದರು ಮೂವರೂ. ಅನಂತರ ಮಾವಳ್ಳಿಯ ಚೌಕಕ್ಕೆ ಬಂದು ಬಸ್ಸು ಹತ್ತಿದರು. ದಾರಿಯುದ್ದಕ್ಕೂ ಮುನಿ ತಾಯಪ್ಪ 'ನೀವಿಬ್ಬರೂ ಹುಷಾರಾಗಿರಬೇಕು ಸ್ವಾಮಿ' ಎಂದು ಎಚ್ಚರಿಸು ತ್ತಲೇ ಇದ್ದ. ಮೂವರಿಗೂ ಭದ್ರಯ್ಯನ ವಿಷಯದಲ್ಲಿ ಇತ್ತೀಚೆಗೆ ಭಯ ಹೆಚ್ಚಿತ್ತು.

ಬಸ್ಸು ಮಲ್ಲೇಶ್ವರ ಸೇರಿದಾಗ ಮೂವರೂ ಕೆಳಗಿಳಿದರು.

" ಸ್ವಾಮಿ, ಗಂಟೆ ಎಷ್ಟಾಯಿತು ?"

ಎಂದು ಕೇಳಿದ ಮುನಿತಾಯಪ್ಪ.

" ಏಳೂವರೆ" ಎಂದರು ಸುದರ್ಶನಯ್ಯಂಗಾರ್ರ್ಯರು.

" ಹಾಗಾದರೆ ಮೊದಲು ಶಾಸ್ತ್ರಿಗಳ ಮನೆಗೆ ಹೋಗಿ ಬರೋಣ "

ಮುನಿತಾಯಪ್ಪನ ಮಾತಿಗೆ ಮಿತ್ರರಿಬ್ಬರೂ ಪ್ರತಿ ನುಡಿಯಲಿಲ್ಲ.

ಮೂವರೂ ಬೇಗ ಬೇಗನೆ ನಡೆದು ಶಂಕರಶಾಸ್ತ್ರಿಗಳ ಮನೆ ಸೇರಿದರು. ಹೊರಬಾಗಿಲು ಮುಚ್ಚಿದ್ದರಿಂದ ನಾಲ್ಕಾರು ಬಾರಿ ಕೂಗಬೇಕಾಯಿತು. ಸ್ವಲ್ಪ ಹೊತ್ತಿನ ಬಳಿಕ ಕಮಲಮ್ಮನವರು ಬಂದು ಬಾಗಿಲು ತೆರೆದರು. ಮುನಿತಾಯಪ್ಪನನ್ನು ಕಂಡು ಅವರಿಗೆ ಆಶ್ಚರ್ಯವಾಯಿತು ; ಕುತೂಹಲವೂ ಹೆಚ್ಚಿತು.

" ಯಾವಾಗ ಬಂದೆಯಪ್ಪ ?"

" ಬೆಳಗ್ಗೆ ತಾಯಿ "

" ಸಭಾಪತಿ ಚೆನ್ನಾಗಿದ್ದಾನೆಯೆ ?"

" ಚೆನ್ನಾಗಿದ್ದಾರೆ ತಾಯಿ ಗುರುವಿನ ಅನುಗ್ರಹ ದೊರೆತಿದೆ. ಸಾಧನೆ ಮಾಡುತ್ತಿದ್ದಾರೆ. ಇನ್ನು ಸ್ವಲ್ಪ ದಿನಗಳಲ್ಲೇ ವಾಪಸ್ಸು ಬಂದು ಬಿಡುತ್ತಾರೆ "

" ಊಟ, ತಿಂಡಿ, ನಿದ್ರೆ........"

" ಅವರಿಗೆ ಯಾವುದಕ್ಕೂ ಕೊರತೆಯಿಲ್ಲ ತಾಯಿ. ಗುರುಗಳು ಪ್ರಸನ್ನ ರಾಗಿರುವಾಗ ಅವರಿಗೇನೂ ತಾಪತ್ರಯವಿಲ್ಲ "

" ಎಲ್ಲವನ್ನೂ ಆ ಈಶ್ವರನೇ ನೋಡಿಕೊಂಡು ಕಾಪಾಡಬೇಕಪ್ಪ "

ಎಂದು ನಿಟ್ಟುಸಿರಿಟ್ಟರು ಕಮಲಮ್ಮ.

" ದೊಡ್ಡಯ್ಯನೋರು ಎಲ್ಲಿ ತಾಯಿ ?"

" ಇದ್ದಾರಪ್ಪ. ರೂಮಿನಲ್ಲಿ ಮಲಗಿದ್ದಾರೆ. ಮಧ್ಯಾನ್ಹದಿಂದ ಒಂದೇ ಸಮನೆ ಜ್ವರ. ತುಂಬಾ ಸುಸ್ತು...."

ಕಮಲಮ್ಮ ಮಾತು ಮುಗಿಸುವ ಮುನ್ನವೇ ವೆಂಕಟೇಶಯ್ಯ ಕೊಠಡಿಗೆ ಧಾವಿಸಿದ. ಅವನ ಹಿಂದೆಯೇ ಸುದರ್ಶನಯ್ಯಂಗಾರ್ಯರೂ ಮುನಿತಾಯಪ್ಪನೂ ಬಂದರು.

ಶಂಕರಶಾಸ್ತ್ರಿಗಳು ಪ್ರಶಾಂತವಾಗಿ ಮಲಗಿದ್ದರು. ಆ ದಿನ ಅನಾ ರೋಗ್ಯದಿಂದಾಗಿ ಪೂಜಾದಿ ಕಾರ್ಯಗಳಿಗೆ ಅಡ್ಡಿಯಾಗಿದ್ದುದರಿಂದ, ಅವರ ಮನಸ್ಸೀಗ ಪರಶಿವನಲ್ಲಿ ನೆಟ್ಟು ಧ್ಯಾನಾಸಕ್ತವಾಗಿತ್ತು.

" ಚಿಕ್ಕಪ್ಪಾ....ಚಿಕ್ಕಪ್ಪಾ...."

ವೆಂಕಟೇಶಯ್ಯ ಮೆಲ್ಲನಿಯಲ್ಲಿ ಕೂಗಿದ.

" ನಿದ್ರಿಸುತ್ತಿರುವ ಹಾಗಿದೆ. ಎಬ್ಬಿಸುವುದು ಬೇಡ "

ಎಂದರು ಸುದರ್ಶನಯ್ಯಂಗಾರ್ಯರು.

" ಹಾಗಾದರೆ ನಾನು ಹೋಗಿ ಡಾಕ್ಟರನ್ನು ಕರೆದುಕೊಂಡು ಬರಲೇ ?"

" ಬೇಡ ವೆಂಕಟೇಶು. ಮಧ್ಯಾನ್ಹ ಡಾಕ್ಟರನ್ನು ಕರೆಸಿದ್ದೆ. ಅವರನು ನೋಡಿದ ತಕ್ಷಣ ನಿಮ್ಮ ಚಿಕ್ಕಪ್ಪ ರೇಗಾಡಿಬಿಟ್ಟರು. ಡಾಕ್ಟರನ್ನಾಗಲಿ, ಅವರ ಔಷದವನ್ನಾಗಲಿ ಕಂಡರೆ ' ಅವರಿಗೆ ' ಆಗುವುದೇ ಇಲ್ಲ "

" ಹಾಗಾದರೆ ಏನು ಮಾಡುವುದು ? ನಾಟಿ ಔಷಧ ಏನಾದರೂ ಮಾಡಿದೆಯಾ ಚಿಕ್ಕಮ್ಮ ? "

" ಇಲ್ಲಪ್ಪ " ಎಂದರು ಕಮಲಮ್ಮ.

ಮೂವರೂ ಹೊರಬಂದು ಕುಳಿತರು. ಅಷ್ಟರಲ್ಲಿ ಸೌಭಾಗ್ಯಮ್ಮ ಮೂರು ಬಟ್ಟಲು ಕಾಫಿ ತಂದಿಟ್ಟರು.

" ರುಕ್ಕೂ ಎಲ್ಲಿ ಚಿಕ್ಕಮ್ಮ ? "

" ರೂಮಿನಲ್ಲಿ ಕೂತು ಓದುತ್ತಿದ್ದಾಳೆ "

ಏನನ್ನೋ ಜ್ಞಾಪಿಸಿಕೊಂಡ ಮುನಿತಾಯಪ್ಪ ಕುಡಿಯುತ್ತಿದ್ದ ಕಾಫಿಯನ್ನು .ಅರ್ಧಕ್ಕೇ ನಿಲ್ಲಿಸಿ –

" ರುಕ್ಕಮ್ಮನೋರ್ನ ಇನ್ನು ಮೇಲೆ ತುಂಬಾ ಹುಷಾರಾಗಿ ನೋಡಿಕೊ ಬೇಕು ತಾಯಿ. ಚಿಕ್ಕಯ್ಯನವರು ಬರೋವರೆಗೂ ಶಾನೆ ಹುಷಾರಾಗಿರ ಬೇಕು........ಇನ್ನು ಈ ಮುನಿತಾಯಪ್ಪನಿಂದ ಏನೂ ಆಗೊಲ್ಲ ! ಅವನು ಇವತ್ತು ಸತ್ತುಹೋದ ! ! " ಎಂದು ಹೇಳಿದ.

ಅವನ ಮಾತುಗಳು ಕಮಲಮ್ಮನವರಿಗೂ ಸೌಭಾಗ್ಯಮ್ಮನವರಿಗೂ ತುಂಬಾ ಆಶ್ಚರ್ಯವನ್ನುಂಟುಮಾಡಿದವು. ಅನಂತರ ವೆಂಕಟೇಶಯ್ಯ ನಡೆದ ಸಂಗತಿಯನ್ನು ವಿವರಿಸಿದ.

" ಆ ಚಂಡಾಳ ನಿನ್ನಮೇಲೂ ಕಣ್ಣಿಟ್ಟನೇ ಮುನಿತಾಯಪ್ಪ ?"

ಕಮಲಮ್ಮನವರು ದುಃಖದ ದನಿಯಲ್ಲಿ ಕೇಳಿದರು.

" ಇಟ್ಟು ಸುಟ್ಟುಬಿಟ್ಟ ತಾಯಿ "

" ಅಯ್ಯೋ, ಇನ್ನೇನು ಗತಿಯಪ್ಪ ! ನಮುಗ್ಯಾರಿಗೂ ಉಳಿಗಾಲವೇ ಇಲ್ಲವಲ್ಲಾ ! "

" ಚಿಕ್ಕಯ್ಯನೋರು ಬಂದಮೇಲೆ ಭದ್ರಯ್ಯ ಭೂಮಿಗೆ ಇಳಿದು ಹೋಗುತ್ತಾನೆ. ಅದುವರೆಗೂ ಜಾಗ್ರತೆಯಾಗಿರಬೇಕು ತಾಯಿ........ ನಾನು ಹಾಕಿದ್ದ ' ರಕ್ಷರೇಖೆ ' ಇನ್ನುಮೇಲೆ ಪ್ರಯೋಜನಕ್ಕೆ ಬರುವುದಿಲ್ಲ. ಆದ್ದರಿಂದ ರುಕ್ಕಮ್ಮನವರನ್ನು ಸದಾ ರೂಮಿನಲ್ಲಿಯೇ ಕೂಡಿಹಾಕುವುದು ಒಳ್ಳೆಯದು. ಇಲ್ಲದಿದ್ದರೆ ತುಂಬಾ ಅನರ್ಥವಾಗುತ್ತದೆ "

" ನನಗೇನೋ ತುಂಬಾ ಹೆದರಿಕೆಯಾಗುತ್ತಿದೆ ಮುನಿತಾಯಪ್ಪ "

ಎಂದರು ಕಮಲಮ್ಮ.

ಸುದರ್ಶನಯ್ಯಂಗಾರ್ಯರೇಕೋ ತುಂಬಾ ಮಂಕಾಗಿದ್ದರು. ಒಂದು ಮಾತು ಆಡಲೂ ಸಹ ಅವರಿಗೆ ಮನಸ್ಸೇ ಇರಲಿಲ್ಲ.

" ಹೊತ್ತಾಗುತ್ತಾ ಬಂತು ನಾವಿನ್ನು ಹೊರಡುತ್ತೇವೆ ತಾಯಿ "

ಎನ್ನುತ್ತಾ ಮುನಿತಾಯಪ್ಪ ಎದ್ದು ನಿಂತರು.

" ನಾನು ಬೇಕಾದರೆ ಇಲ್ಲೇ ಇದ್ದುಬಿಡುತ್ತೇನೆ ಚಿಕ್ಕಮ್ಮ "

" ಬೇಡ ವೆಂಕಟೇಶು ಅಲ್ಲಿ ನರಸು ಒಬ್ಬಳೇ ಇರುತ್ತಾಳೆ. ನೀನು ಮನೆಗೆ ಹೋಗಪ್ಪ. ಬೇಕಾದಾದ ಹೇಳಿ ಕಳಿಸುತ್ತೇನೆ. ಬರುವೆಯಂತೆ "

ಎಂದರು ಕಮಲಮ್ಮ.

ಮೂವರೂ ಹೊರಹೊರಟರು.

ಮುನಿತಾಯಪ್ಪನ ಶಕ್ತಿ ಉಡುಗಿಹೋಗಿದೆ.

ಅವನ ಹೆಂಡತಿಗೆ ಮಂಕು ಮುಚ್ಚಿಕೊಂಡಿದೆ.

ಅವನ ಹಲ್ಲುಗಳೆಲ್ಲಾ ಉದುರಿಹೋಗಿವೆ.

ಶಾಸ್ತ್ರಿಗಳ ಮನೆಯಲ್ಲಿ ಸರಿಯಾದ 'ಗಂಡು' ದಿಕ್ಕಿಲ್ಲ.

ಇನ್ನುಮೇಲೆ ರುಕ್ಮಿಣಿಯ ವಿಷಯ ತೀರಾ ದುಸ್ತರ.

ಶಂಕರಶಾಸ್ತ್ರಿಗಳಿಗೆ ಜ್ವರ; ಹಾಸಿಗೆ ಹಿಡಿದುಬಿಟ್ಟಿದ್ದಾರೆ.

ಭದ್ರಯ್ಯ ಇಂದು ನಂಜೆ ಮೂವರನ್ನೂ ನೋಡಿ ವ್ಯಂಗ್ಯವಾಗಿ ನಕ್ಕಿದ್ದಾನೆ.

ಮುಂದೇನೋ........? ಯಾವ ದುರ್ಗತಿಯೋ........?

ಮೂವರ ಮನಸ್ಸಿನಲ್ಲಿಯೂ ಇವೇ ಯೋಚನೆಗಳು. ಯೋಚಿಸುತ್ತಲೇ ಸುದರ್ಶನಯ್ಯಂಗಾರ್ಯರು ಮನೆಯನ್ನು ತಲಪಿದ್ದಾಯಿತು.

ಅಂಗಳದಲ್ಲಿ ಕುಳಿತ ಸ್ವಲ್ಪ ಹೊತ್ತಿಗೇ ಎರಡು ಬೆಳ್ಳಿಯ ತಟ್ಟೆಗಳಲ್ಲಿ ಮದುವೆಯ ತಿಂಡಿ ಬಂದಿತು.

"ನನಗೋಸ್ಕರವೇ ಇಟ್ಟಿದ್ದಿರಾ ಸ್ವಾಮಿ"?

—ಎಂದು ನಕ್ಕ ಮುನಿತಾಯಪ್ಪ.

ಸುದರ್ಶನಯ್ಯಂಗಾರ್ಯರು ನೀರು ತರಲು ಒಳಗೆ ಹೋದರು. ಅಷ್ಟರಲ್ಲಿ ವೈದೇಹಮ್ಮನವರು ಅತ್ತ ಸುಳಿದುದನ್ನು ಕಂಡು ಮುನಿತಾಯಪ್ಪ—

"ಇವರೇನಾ ಸ್ವಾಮಿ ಚಿಕ್ಕ ಅಮ್ಮನೋರು ?"

—ಎಂದು ಮೆಲ್ಲನೆಯಲ್ಲಿ ವೆಂಕಟೇಶಯ್ಯನನ್ನು ಕೇಳಿದ. ಅವನು ವೈದೇಹಮ್ಮನವರನ್ನಾಗಲಿ, ಅಲಮೇಲುವನ್ನಾಗಲಿ ನೋಡಿರಲಿಲ್ಲ.

"ಅಲ್ಲಪ್ಪ. ಅವರು ಮೊದಲನೆಯವರು"

—ಎಂದು ವೆಂಕಟೇಶಯ್ಯ ಹೇಳುವ ವೇಳೆಗೆ ಸುದರ್ಶನಯ್ಯಂಗಾರ್ಯರು ಹೊರಬಂದರು. ಜೊತೆಯಲ್ಲಿ ಅಲಮೇಲುವನ್ನೂ ಕರೆತಂದರು.

"ಇವಳು ಯಾರು ಗೊತ್ತೆ ಮುನಿತಾಯಪ್ಪ ?"

—ಎಂದು ಕೇಳಿದ ಸುದರ್ಶನಯ್ಯಂಗಾರ್ಯರು ನಗುತ್ತಾ ಮುಂದು ವರಿಸಿದರು :

" ನಿನ್ನ ಶಿಷ್ಯರ ಮಗಳು ! "

ಅರ್ಥವಾಗದವನಂತೆ ಮುನಿತಾಯಪ್ಪ ಬೆರಗು ಗಂಗಳಿಂದ ನೋಡಿದ.

" ಯಾಕೆ ಗೊತ್ತಾಗಲಿಲ್ಲವೆ ? ನಿಮ್ಮ ಮತ್ತಿಗೆಹಳ್ಳಿ ಕೃಷ್ಣಾಮಾಚಾರ್ಯರು ಜ್ಞಾಪಕವಿಲ್ಲವೆ ? ನೀನು ಅವರಿಗೆ ' ಬಿಲ್ವಯಕ್ಷಿಣಿ ' ಸಾಧನೆ ಕಲಿಸುತ್ತಿದ್ದೆಯಂತೆ ! "

ಆ ಮಾತು ಕೇಳಿದೊಡನೆ ಮುನಿತಾಯಪ್ಪ ಗಟ್ಟಿಯಾಗಿ ನಕ್ಕುಬಿಟ್ಟ.

" ಓ ! ನೆನಪಿದೆ ಸ್ವಾಮಿ—ನೆನಪಿದೆ ! ಷಡಗೋಪಾಲಾಚಾರ್ಯರ ಮಕ್ಕಳು ಕೃಷ್ಣಮಾಚಾರ್ಯರು ! ಚಿಕ್ಕಂದಿನಲ್ಲಿ ನಾವಿಬ್ಬರೂ ತುಂಬಾ ಸ್ನೇಹಿತರಾಗಿದ್ದೆವು ಸ್ವಾಮಿ. ಈಗ ಅವರೆಲ್ಲಿದ್ದಾರೆಯೋ ? "

ಸುದರ್ಶನಯ್ಯಂಗಾರ್ಯರು ಕೃಷ್ಣಮಾಚಾರ್ಯರ ವಿಷಯವನ್ನೆಲ್ಲಾ ವಿವರಿಸಿದರು. ಅವರು ' ನಾರಾಯಣ ಚಕ್ರ 'ವನ್ನು ಸಾಧಿಸುತ್ತಿರುವ ವಿಷಯ ತಿಳಿದಾಗ ಮುನಿತಾಯಪ್ಪ ಆಶ್ಚರ್ಯಭರಿತನಾದ.

" ಅವರಿಗೆ ಒಂದು ಹುಚ್ಚು ಸ್ವಾಮಿ – ಇಂಥಾದ್ದೊಂದು ವಿದ್ಯೆ ಕಲೀಬೇಕೂಂತ. ದೇವರು ಯಾಕೋ ದಯಮಾಡಲಿಲ್ಲ."

" ಮುಖ್ಯ ದೈವಾನುಗ್ರಹವಿಲ್ಲದ್ದು ಯಾವ ಸಾಧನೆಯೂ ಫಲಿಸುವುದಿಲ್ಲ ಮುನಿತಾಯಪ್ಪ. ಹಾಗೆ ಬಲವಂತವಾಗಿ ಸಾಧಿಸಿದರೂ ಅದರಿಂದಾಗುವ ಪ್ರಯೋಜನವೂ ಅಷ್ಟಷ್ಟೆ ! "

" ನಿಜ ಸ್ವಾಮಿ – ನಿಜ " ಎಂದು ಸಿಟ್ಟುಸಿರಿಟ್ಟ ಮುನಿತಾಯಪ್ಪ.

ಸುದರ್ಶನಯ್ಯಂಗಾರ್ಯರು ಒಳಗೆ ಹೋಗಿ, ತಮ್ಮ ಪತ್ನಿಯರಿಬ್ಬರಿಗೂ ಮುನಿತಾಯಪ್ಪನ ವಿಷಯವನ್ನು ತಿಳಿಸಿದರು. ವೈದೇಹಮ್ಮನವರಂತೂ ಅವನಿಗೆ ಒದಗಿದ ಸ್ಥಿತಿಗಾಗಿ ತುಂಬಾ ಮರುಗಿದರು.

" ನಾನಿನ್ನು ಹೊರಡಲೇ ಸ್ವಾಮಿ ? "

ಎಂದು ಮುನಿತಾಯಪ್ಪ ಕೇಳಿದಾಗ

" ನನಗೂ ಹೊತ್ತಾಯಿತು ಐಂಗಾರ್ಯರೇ, "

ಎನ್ನುತ್ತಾ ವೆಂಕಟೇಶಯ್ಯನೂ ಎದ್ದುನಿಂತನು.

ಸುದರ್ಶನಯ್ಯಂಗಾರ್ಯರು ಗಡಿಯಾರದತ್ತ ನೋಡಿದರು. ಗಂಟೆ ಒಂಬತ್ತು ಸಮಾಪಿಸುತ್ತಿದ್ದಿತು.

" ಮತ್ತೆ ಯಾವಾಗ ತಮ್ಮ ದರ್ಶನ ವೆಂಕಟೇಶಯ್ಯನವರೇ ? "

" ನಾಳೆಯಿಂದ ಮೂರು ದಿನ ಊರಲ್ಲಿರುವುದಿಲ್ಲ. ಮದರಾಸಿಗೆ ಹೋಗುತ್ತೇನೆ. ರೇಡಿಯೋದಲ್ಲಿ ನನ್ನ ಕಾರ್ಯಕ್ರಮವಿದೆ. ಅದನ್ನು ಮುಗಿಸಿಕೊಂಡು, ಮದರಾಸು ಪಟ್ಟಣ ನೋಡಿಕೊಂಡು ಬರುತ್ತೇನೆ. ಬಂದ ತಕ್ಷಣ ನಿಮಗೆ ಮುಖ ತೋರಿಸುತ್ತೇನೆ "

" ಸರಿ, ಹಾಗೇಮಾಡಿ. ಮುನಿತಾಯಪ್ಪ ನೀನು ? "

" ನಂದೇನು ಸ್ವಾಮಿ ಲೆಕ್ಕ ? ಬಂದರೆ ನಾಳೆಯೋ ನಾಡಿದ್ದೋ ಬರುತ್ತೇನೆ. ಇಲ್ಲದಿದ್ದರೆ ವೆಂಕಟೇಶಯ್ಯನೋರು ಬಂದಮೇಲೆ ನೀವಿಬ್ಬರೂ ಒಟ್ಟಗೇ ಒಂದು ಸಾರಿ ಬನ್ನಿ ಆ ಕಡೆ. ಅಷ್ಟರಲ್ಲಿ ಶಾಸ್ತ್ರಿಗಳೂ ಬಂದರೆ ನಮ್ಮ ಪುಣ್ಯ ! "

" ಆಗಲಿ " ಎಂದರು ಸುದರ್ಶನಯ್ಯಂಗಾರ್ಯರು. ಅನಂತರ ಮಿತ್ರರಿಬ್ಬರನ್ನೂ ಬೀಳ್ಕೊಟ್ಟರು. ಏಕೋ ಅವರ ಮನಸ್ಸು ನೆಮ್ಮದಿಯಿಂದಿರಲಿಲ್ಲ. ಊಟಕ್ಕೆ ಕುಳಿತಾಗಲೂ, ಪತ್ನಿಯರು ಪ್ರೀತಿಯಿಂದ ಮಾತನಾಡಿಸಿದಾಗಲೂ ಅವರು ಅನ್ಯಮನಸ್ಕರಾಗಿಯೇ ಇದ್ದರು.

" ಯಾಕೆ, ಒಂದು ಥರಾ ಇದ್ದೀರಲ್ಲಾ ಅಂದ್ರೆ ? "

ಗಂಡನ ವಿಷಣ್ಣತೆಯನ್ನು ಕಂಡ ವೈದೇಹಮ್ಮನವರು ಪ್ರಶ್ನಿಸಿದರು.

ಎರಡು ಕ್ಷಣ ಸುಮ್ಮನಿದ್ದು, ಅನಂತರ ಸುದರ್ಶನಯ್ಯಂಗಾರ್ಯರು

" ನೋಡು, ಪಾಪ, ಶಂಕರ ಶಾಸ್ತ್ರಿಗಳಿಗೆ ವಿಪರೀತ ಜ್ವರ, ಸುಸ್ತು. ಡಾಕ್ಟರ ಔಷಧಿ ಕುಡಿಯುವುದಿಲ್ಲವೆನ್ನುತ್ತಾರೆ. ಕಮಲಮ್ಮನವರು ಏನೋ ಕಷಾಯ ಮಾಡಿ ಕೊಟ್ಟರಂತೆ. ಅದರಿಂದೇನೂ ಉಪಯೋಗವಾಗಲಿಲ್ಲ.... ಅವರ ಮನೆಯಲ್ಲಿ ಈಗ ಸರಿಯಾದ ' ಗಂಡು ' ದಿಕ್ಕಿಲ್ಲ. ಸಭಾಪತಿಯಾದರೂ ಇದ್ದಿದ್ದರೆ ಚನ್ನಾಗಿತ್ತು....", ಎಂದು ದುಃಖದ ದನಿಯಲ್ಲಿ ನುಡಿದರು.

" ನನಗೂ ಒಂದು ಥರಾ ಕಷಾಯ ಗೊತ್ತಿದೇಂದ್ರೆ ! ಅದನ್ನ ಮಾಡಿ ಕೊಡೋಣ ಗುಣವಾದರೂ ಆಗಬಹುದು "

" ಆಗಲಿ, ನೋಡೋಣ "

ಎನ್ನುತ್ತಾ ಐಂಗಾರ್ಯರು ಊಟ ಮುಗಿಸಿ ಎದ್ದರು. ಪತ್ನಿಯರಿಬ್ಬರ ಊಟವೂ ಮುಗಿದ ಬಳಿಕ, ಅಲಮೇಲುವಿಗೂ – ಸುದರ್ಶನಯ್ಯಂಗಾರ್ಯರಿಗೂ ಕೋಣೆಯಲ್ಲಿ ಹಾಸಿಗೆ ಹಾಸಿ, ತಮ್ಮ ಹಾಸಿಗೆಯನ್ನು ಮಾತ್ರ ಒಳ ಅಂಗಳ

ದಲ್ಲಿ ಹಾಸಿಕೊಂಡರು.

" ಯಾಕೆ ವೈದೇಹಿ – ಕೋಪವೇ ನನ್ನ ಮೇಲೆ ? "

ಸುದರ್ಶನಯ್ಯಂಗಾರ್ಯರು ಗಾಬರಿಯಿಂದ ಕೇಳಿದರು.

ದಿನವಹಿ ಇಬ್ಬರು ಪತ್ನಿಯರೂ ಎಡ – ಬಲದಲ್ಲಿ ಮಲಗುತ್ತಿದ್ದರು. ಆದರೆ ಆ ದಿನ ಹಿರಿಯ ಹೆಂಡತಿಯ ವರ್ತನೆ ವಿಚಿತ್ರವಾಗಿ ತೋರಿತು ಅವರಿಗೆ. ಮನಸ್ಸು ಕಳವಳಗೊಂಡಿತು.

" ಕೋಪವೂ ಇಲ್ಲ – ಏನೂ ಇಲ್ಲ ! ಇವತ್ತು ಮಾತ್ರ ನಾನು ಇಲ್ಲೇ ಮಲಗುತ್ತೇನೆ ಅಂದ್ರೆ "

ಎಂದು ದೈನ್ಯದಿಂದ ಕೇಳಿಕೊಂಡರು ವೈದೇಹಮ್ಮ. ಅವರ ಹೃದಯವನ್ನರಿತಿದ್ದ ಸುದರ್ಶನಯ್ಯಂಗಾರ್ಯರು ಮುಂದೆ ಒಂದು ಮಾತನ್ನೂ ಆಡದೆ ಸುಮ್ಮನಾದರು.

ಎಲ್ಲರೂ ಮಲಗಿದರು. ದೀಪವಾರಿತು.

ಆರಿದ ದೀಪ ಅರ್ಧರಾತ್ರಿಯಲ್ಲಿ ಮತ್ತೆ ಉರಿಯಿತು....

ವೈದೇಹಮ್ಮನವರು ಎದ್ದು ತಣ್ಣೀರು ಸ್ನಾನ ಮಾಡಿ ಬಂದರು. ಅನಂತರ ಒಲೆ ಹತ್ತಿಸಿ ಕಷಾಯ ಮಾಡಿದರು. ಬಳಿಕ ಖಾಲಿ ಸೀಸೆಯೊಂದಕ್ಕೆ ಕಷಾಯವನ್ನು ತುಂಬಿ, ಮುಚ್ಚಿಟ್ಟು, ದೀಪವಾರಿಸಿ ಮಲಗಿದರು.

ಎಂದಿನಂತೆ ಬೆಳಗಾಯಿತು. ನಿತ್ಯಕರ್ಮಗಳ ಬಳಿಕ ಕಾಫಿ – ಉಪಾಹಾರವೂ ಮುಗಿಯಿತು.

" ಸೌಭಾಗ್ಯಮ್ಮನವರ ಮನೆಗೆ ಹೋಗಿ ಬರೋಣವೇ ಅಂದ್ರೆ ? ಅವರ ಮಾವನವರಿಗೆ ಈಗ ಹೇಗಿದೆಯೋ ಏನೋ ? "

ಸುದರ್ಶನಯ್ಯಂಗಾರ್ಯರು ಬೇಡವೆನ್ನಲಿಲ್ಲ. ಹೊರಡಲು ಸಿದ್ಧವಾದರು. ಅಡಿಗೆಯ ಕೆಲಸವನ್ನು ಅಲಮೇಲುವಿಗೆ ಒಪ್ಪಿಸಿ, ಗಂಡನೊಡನೆ ಹೊರಟರು ವೈದೇಹಮ್ಮ. ಹೋಗುವಾಗ ಕಷಾಯದ ಸೀಸೆಯನ್ನು ತೆಗೆದುಕೊಳ್ಳಲು ಮರೆಯಲಿಲ್ಲ.

ಶಂಕರಶಾಸ್ತ್ರಿಗಳ ಜ್ವರ ಇಮ್ಮಡಿಸಿತ್ತು. ಅಸಾಧ್ಯ ತಲೆಶೂಲೆ ಆರಂಭವಾಗಿತ್ತು. ಜೊತೆಗೆ, ಹೊಟ್ಟೆಯಲ್ಲಿ ಸಹಿಸಲಾರದಷ್ಟು ಸಂಕಟ. ತಾವಿನ್ನು ಬದುಕುವುದಿಲ್ಲವೆಂದು ಶಾಸ್ತ್ರಿಗಳು ನಿಶ್ಚಯಿಸಿಕೊಂಡು ಬಿಟ್ಟಿದ್ದರು. ಮನೆಯವರಿಗೂ ಆ ಹೆದರಿಕೆ ಉಂಟಾಗಿತ್ತು – ಪರಿಸ್ಥಿತಿಯನ್ನು ಕಂಡು.

"ಸಭಾಪತೀ, ಕೊನೇ ಗಳಿಗೆಯಲ್ಲಿ ನನ್ನ ಹತ್ತಿರ ಇಲ್ಲದೆ ಹೋದೆಯಲ್ಲಪ್ಪಾ. ಅಂತ್ಯಕಾಲದಲ್ಲಿ ಮಗನ ಕೈಯ್ಯಿಂದ ಒಂದು ತೊಟ್ಟು ಗಂಗೆ ಬಿಡಿಸಿಕೊಳ್ಳುವುದಕ್ಕೂ ನನಗೆ ಭಾಗ್ಯವಿಲ್ಲವೆ ?"

ಶಾಸ್ತ್ರಿಗಳು ಅಸ್ಪಷ್ಟವಾಗಿ ಹಲುಬಿದರು. ಅವರಧ್ವನಿ ಕುಗ್ಗಿಹೋಗಿತ್ತು. ಮುಖ ಬಿಳಿಚಿಕೊಂಡಿತ್ತು. ಕಣ್ಣುಗಳು ಕಾಂತಿ ಹೀನವಾಗಿದ್ದವು.

ಎಲ್ಲರ ಕಣ್ಣಲ್ಲಿಯೂ ನೀರು – ಕೊನೆಯ ದೃಶ್ಯವನ್ನು ಕಂಡು ಸಹಿಸಲಾಗದ ಕಣ್ಣೀರು. ವೆಂಕಟೇಶಯ್ಯನಿಗಾದರೂ ಹೇಳಿಕಳಿಸೋಣವೆಂದುಕೊಂಡರು ಕಮಲಮ್ಮ. ಆದರೆ ಮನಸ್ಸೇಕೋ ಮುದುಡಿಕೊಂಡಿತ್ತು – ದಿಕ್ಕು ತೋಚದೆ.

ಅದೇ ಸಮಯಕ್ಕೆ ಸುದರ್ಶನಯ್ಯಂಗಾರ್ಯರು ಬಂದರು ವೈದೇಹಮ್ಮನವರೊಡನೆ. ಆ ದೃಶ್ಯವನ್ನು ಕಂಡು ಇಬ್ಬರಿಗೂ ಗಾಬರಿಯಾಯಿತು. ಕೊನೆಯುಸಿರೆಳೆಯುವ ಆ ದೃಶ್ಯ ವೈದೇಹಮ್ಮನವರನ್ನೂ ಅಧೀರರನ್ನಾಗಿ ಮಾಡಿತು. 'ಇನ್ನು ನನ್ನ ಕಷಾಯದಿಂದೇನು ಪ್ರಯೋಜನ ?' ಎಂದು ನಿರಾಶೆಯಿಂದಲೇ ಹೇಳಿಕೊಂಡರು ಮನಸ್ಸಿನಲ್ಲಿ. 'ಆದರೂ ಪ್ರಯತ್ನ ಮಾಡುವುದು ಕರ್ತವ್ಯ' ಎಂದಿತು ವಿವೇಚನೆ.

"ಅಮ್ಮಾ, ನೀವೇನೂ ತಿಳಿದುಕೊಳ್ಳದಿದ್ದರೆ ನನ್ನದೂ ಒಂದು ಪ್ರಯತ್ನ ಮಾಡಿಬಿಡುತ್ತೇನೆ"

ಕಮಲಮ್ಮ, ಸೌಭಾಗ್ಯಮ್ಮ, ರುಕ್ಮಿಣಿಯರ ಮುಖಗಳನ್ನು ನೋಡುತ್ತಾ ನುಡಿದರು ವೈದೇಹಮ್ಮ. ಅವರ ಮಾತು ಎಲ್ಲರನ್ನೂ ಕುತೂಹಲಗೊಳಿಸಿತ್ತು.

"ಒಂದು ಬೆಳ್ಳಿಲೋಟ ತನ್ನೀ ಸೌಭಾಗ್ಯಮ್ಮ"

ವೈದೇಹಮ್ಮನವರು ಕಷಾಯದ ಸೀಸೆಯನ್ನು ತೆಗೆದು ಬೆಳ್ಳಿಲೋಟಕ್ಕೆ ಬಗ್ಗಿಸಿದರು. ಅದನ್ನು ಕಮಲಮ್ಮನವರ ಕೈಗಿತ್ತು ಶಾಸ್ತ್ರಿಗಳಿಗೆ ಕುಡಿಸಲು ಹೇಳಿದರು.

"ಔಷಧಿಯ ಆಸೆ ತೋರಿಸಿದರೆ ಹೋಗುವ ಜೀವ ಹಿಂತಿರುಗುತ್ತದೆಯೆ ?" ಶಾಸ್ತ್ರಿಗಳು ಮೆಲುದನಿಯಲ್ಲಿ ಹೇಳಿದರು ಅಸ್ಪಷ್ಟವಾಗಿ.

"ನಮ್ಮ ಆಸೆಗೆ ತಣ್ಣೀರೆರಚಬೇಡೀ ಅಂದ್ರೆ. ಇದೊಂದು ಸಾರಿ ಇದನ್ನು ಕುಡಿದುಬಿಡಿ. ಆಮೇಲೆ ದೈವೇಚ್ಛೆಯಿದ್ದಂತೆ ಆಗಲಿ"

ಹೆಚ್ಚು ಬಲವಂತ ಮಾಡಿಸಿಕೊಳ್ಳದೆ ಪತ್ನಿಯ ಕೈಯಿಂದ ಔಷಧಿ ಕುಡಿದರು ಶಾಸ್ತ್ರಿಗಳು.

" ಇದೇನು ಷರಬತ್ತು ಇದ್ದ ಹಾಗಿದೆಯಲ್ಲಾ !"

ಶಾಸ್ತ್ರಿಗಳ ಮಾತು ಕೇಳಿ ವೈದೇಹಮ್ಮನವರ ಮುಖ ಅರಳಿತು. ಅದೇ ಸರಿಯಾದ ಸಂದರ್ಭವೆಂದರಿತು, ಉತ್ಸಾಹದಿಂದ

" ಇನ್ನಷ್ಟು ಕುಡಿಯಿರಿ ರುಚಿಯಾಗಿರುತ್ತದೆ "

ಎಂದು, ಸೀಸೆಯಿಂದ ಇನ್ನಷ್ಟು ಕಷಾಯವನ್ನು ಬಟ್ಟಲಿಗೆ ಸುರಿದರು. ಶಾಸ್ತ್ರಿಗಳು ಪ್ರತಿಭಟಿಸದೆ ಕುಡಿದರು. ಸುಮಾರು ಹತ್ತು ನಿಮಿಷಗಳ ಬಳಿಕ ಅವರಿಗೆ ಚೆನ್ನಾಗಿ ನಿದ್ರೆ ಬಂದಿತು.

" ರಾತ್ರಿಯೆಲ್ಲಾ ಒಂದು ಕ್ಷಣವೂ ನಿದ್ರೆ ಮಾಡಲಿಲ್ಲ ವೈದೇಹಮ್ಮನವರೇ. ಮುಲುಗುತ್ತಲೇ ಇದ್ದರು....ಒಂದು ಕಡೆ ಇವರು – ಇನ್ನೊಂದು ಕಡೆ ರುಕ್ಮಿಣಿ...." ಎಂದರು ಕಮಲಮ್ಮ.

" ಯಾಕೆ, ರುಕ್ಮಿಣಿಗೂ ಮೈ ಸರಿ ಇಲ್ಲವೇನು ?"

ಬೆಚ್ಚಿದವರಂತೆ ಕೇಳಿದರು ಸುದರ್ಶನಯ್ಯಂಗಾರ್ಯರು.

" ಅಯ್ಯೋ, ಅವಳ ದುರದೃಷ್ಟ ಏನು ಹೇಳಲಿ ?........ರಾತ್ರಿ ನಡೆಯಬಾರದ್ದು ನಡೆದುಹೋಯಿತು........"

ಕಮಲಮ್ಮನವರು ಬೇಸರ ತುಂಬಿದ ದುಃಖದ ದನಿಯಲ್ಲಿ ಹೇಳಿದರು. ಜತೆಗೆ ದೀರ್ಘ ನಿಟ್ಟುಸಿರೂ ಬಂದಿತು.

ಅಷ್ಟರಲ್ಲಿ, ಕಾತರಗೊಂಡ ವೈದೇಹಮ್ಮನವರು—

" ರುಕ್ಮಿಣಿ ಎಲ್ಲಿದ್ದಾಳೆ ವೈದೇಹಮ್ಮ ? ತೋರಿಸಿ, ನೋಡೋಣ "

ಎಂದು ಕೇಳಿದರು. ಎರಡು ಕ್ಷಣಗಳ ಬಳಿಕ ಅವರನ್ನು ಕರೆದುಕೊಂಡು ಮೌನವಾಗಿ ರುಕ್ಮಿಣಿಯ ಕೋಣೆಗೆ ಬಂದರು ಸೌಭಾಗ್ಯಮ್ಮ.

ರುಕ್ಮಿಣಿ ಮಂಚದ ಮೇಲೆ ಮಲಗಿದ್ದಳು. ಅವಳ ಹಣೆಗೂ, ಕೈಗಳಿಗೂ ಔಷಧಿ ಹಚ್ಚಿ ಪಟ್ಟಿ ಕಟ್ಟಲಾಗಿತ್ತು. ಅವಳ ಕಾಲುಗಳು ಮಾತ್ರ ಕಾಣುವಂತೆ ಸೌಭಾಗ್ಯಮ್ಮನವರು ಹೊದಿಕೆಯನ್ನು ಸರಿಸಿದರು. ಎಡದ ಪಾದಕ್ಕೂ ಬಲದ ಕಾಲ ಕಂಭಕ್ಕೂ ಪಟ್ಟಿ ಕಟ್ಟಿದ್ದುದು ಕಾಣಿಸುತ್ತಿತ್ತು. ಅವಳ ಸ್ಥಿತಿಯನ್ನು ಕಂಡು ಸುದರ್ಶನಯ್ಯಂಗಾರ್ಯರು ಗಾಬರಿಗೊಂಡರು. ಕಳವಳವನ್ನು ತಡೆಯಲಾರದೆ ವೈದೇಹಮ್ಮ ಕೇಳಿದರು—

"ಇದೆಲ್ಲಾ ಏನು ಸೌಭಾಗ್ಯಮ್ಮ?"

"ರಾತ್ರಿ ನಡೆದ ಅನಾಹುತ ತಾಯಿ"

"ಇಷ್ಟೊಂದು ಗಾಯವಾಗುವಷ್ಟು ಅನಾಹುತವೇ?"

"ಆ ಅನಾಹುತದಲ್ಲಿ ಪ್ರಾಣ ಹೋಗದಿದ್ದುದೇ ಒಂದು ದೊಡ್ಡ ಪುಣ್ಯ........!"

"ಏನಾಯಿತು ಹೇಳಿ ಸೌಭಾಗ್ಯಮ್ಮ?"

ಗೋಗರೆವ ದನಿಯಲ್ಲಿ ಕೇಳಿದರು ವೈದೇಹಮ್ಮ.

ತುಸು ತಡೆದು ಸೌಭಾಗ್ಯಮ್ಮನವರು ಹೇಳಿದರು—

"ಪ್ರತಿದಿನ ರಾತ್ರಿ ಅವಳನ್ನು ಒಂಬತ್ತು ಗಂಟೆಗೆಲ್ಲಾ ಕೋಣೆಯಲ್ಲಿ ಕೂಡಿ ಬಿಡುತ್ತಿದ್ದೆವು. ಒಂಬತ್ತು ಗಂಟೆಯಾದ ಮೇಲೆಯೋ ಅವಳಿಗೆ ಆವೇಶ ಬರುವುದು ಪದ್ಧತಿ. ಆದರೆ ನಿನ್ನೆ ರಾತ್ರಿ ಸುಮಾರು ಏಳೂವರೆ ಗಂಟೆಗೇ ಆವೇಶ ಬಂದುಬಿಟ್ಟಿತು. ಇನ್ನೂ ಅಂಗಳದಲ್ಲಿಯೇ ಕುಳಿತು ನಮ್ಮ ಜೊತೆಗೆ ಮಾತನಾಡುತ್ತಿದ್ದ ರುಕ್ಕು ತಟ್ಟನೆ ಎದ್ದು ಹೊರಗೆ ಓಡಿದಳು. ನಮಗೆ ತುಂಬಾ ಗಾಬರಿಯಾಯಿತು. ಕೂಡಲೇ ಎದ್ದು ಹೊರಗಡೆ ಧಾವಿಸಿ ನೋಡಿದೆವು. ರುಕ್ಕು ಬೀದಿಯಲ್ಲಿ ಓಡುತ್ತಿದ್ದಳು – ಒಂದೇ ಸಮನಾಗಿ. ಅವಳಿಗೆ ಆವೇಶ ಬಂದಿದೆಯೆಂದು ನಮಗೆ ತಿಳಿದುಹೋಯಿತು. ಓಡಿಹೋಗಿ ಅವಳನ್ನು ಹಿಂದಕ್ಕೆಳೆದುಕೊಂಡು ಬರಲು ಮನೆಯಲ್ಲಿ ಯಾರೂ ಗಂಡಸರಿರಲಿಲ್ಲ. ಯೋಚಿಸಿದರೆ ಫಲವಿಲ್ಲವೆಂದು ನಾನೇ ಹೊರಗೆ ಓಡಿದೆ. ನನ್ನ ಹಿಂದೆ ಅತ್ತೆಮ್ಮನವರೂ ಬಂದರು. ಜಟಕಾ, ಬಸ್ಸು, ಕಾರುಗಳನ್ನು ತಟಾಯಿಸಿಕೊಂಡು ರುಕ್ಮಿಣಿ ಒಂದೇ ಉಸಿರಿನಲ್ಲಿ ಓಡುತ್ತಲೆ ಇದ್ದಳು. ನಾವು ಅವಳ ಸಮಕ್ಕೆ ಓಡಲಾಗದೆ ಹಿಂದೆ ಬಿದ್ದೆವು! ಅಂತೂ ಪ್ರಯಾಸದಿಂದ ಚೌಕದ ಬಳಿಗೆ ಬರುವ ವೇಳೆಗೆ, ಅಲ್ಲಿ ಜನರ ಗುಂಪು ಸೇರಿತ್ತು. ಎರಡು ಕಾರುಗಳು ಎದುರು ಬದುರು ನಿಂತಿದ್ದವು. ಮಧ್ಯೆ ರುಕ್ಮಿಣಿ ಬಿದ್ದಿದ್ದಳು. ಹಣೆಗೆ ಭಾರಿ ಪೆಟ್ಟು ತಗುಲಿ ರಕ್ತ ಸುರಿಯುತ್ತಿದ್ದಿತು. ಪೋಲೀಸಿನವರು ಎರಡು ಕಾರುಗಳವರನ್ನೂ ವಿಚಾರಿಸುತ್ತಿದ್ದರು. ಇಬ್ಬರೂ ತಮ್ಮದೇನು ತಪ್ಪಿಲ್ಲವೆಂದೂ, ಎರಡು ದಿಕ್ಕಿನಿಂದಲೂ ಕಾರುಗಳೂ ಬರುವ ಸಮಯದಲ್ಲಿ ವಿವೇಚನೆ ಇಲ್ಲದೆ ರಸ್ತೆ ದಾಟಲು ಯತ್ನಿಸಿದ ರುಕ್ಮಿಣಿ ತನ್ನ ಕಾಲು ಬೆರಳಿಗೆ ಸೀರೆ ಸಿಕ್ಕಿಕೊಂಡು ತೊಡರಿಬಿದ್ದಳೆಂದೂ, ತಟ್ಟನೆ ಕಾರುಗಳನ್ನು ನಿಲ್ಲಿಸಲಾಯಿತೆಂದೂ ಹೇಳಿಕೆ

ಯಿತ್ತರು. ಆ ಅನಾಹುತವನ್ನು ಗಮನಿಸುತ್ತ ನಿಂತಿದ್ದವರೂ ಅದೇ ಅಭಿಪ್ರಾಯವನ್ನು ಕೊಟ್ಟರು.... ಆಮೇಲೆ ಪೋಲೀಸಿನವರ ಸಹಾಯದಿಂದಲೇ ರುಕ್ಮಿಣಿಯನ್ನು ಡಾಕ್ಟರ ಹತ್ತಿರ ಕರೆದುಕೊಂಡು ಹೋಗಿ, ಔಷಧಿ ಹಾಕಿಸಿ, ಮನೆಗೆ ಕರೆದುಕೊಂಡು ಬಂದೆವು "

ಎಂದು ಸೌಭಾಗ್ಯಮ್ಮನವರು ರುಕ್ಮಿಣಿಗೆ ಒದಗಿದ್ದ ಕುತ್ತನ್ನು ಬಣ್ಣಿಸಿದರು. ಸುದರ್ಶನಯ್ಯಂಗಾರ್ಯರಿಗಾಗಲಿ, ವೈದೇಹಮ್ಮನವರಿಗಾಗಲಿ ಏನು ಹೇಳುವುದಕ್ಕೂ ತೋಚದೆ ಬಾಯಿ ಕಟ್ಟಿದಂತಾಗಿತ್ತು. ಅವರ ಮುಖಗಳು ದುಃಖದಿಂದ ಕಂಗೆಟ್ಟಿದ್ದವು.

ಸೌಭಾಗ್ಯಮ್ಮನವರು ಅವರಿಬ್ಬರನ್ನೂ ಕರೆದುಕೊಂಡು ಅಂಗಳಕ್ಕೆ ಬಂದರು.

" ಹೊತ್ತಿಗೆ ಸರಿಯಾಗಿ ನೀವು ಬಂದುದು ನಮ್ಮ ಪುಣ್ಯ ವೈದೇಹಮ್ಮ"

ಎಂದರು ಕಮಲಮ್ಮ.

ಹಾಗೆಯೇ ಮಾತು ಸಾಗಿತು ಅಂಗಳದಲ್ಲಿ ಅರ್ಧಗಂಟೆಯವರೆಗೆ. ಸುದರ್ಶನಯ್ಯಂಗಾರ್ಯರು ತಮ್ಮ ಕೈ ಗಡಿಯಾರ ನೋಡಿಕೊಂಡು –

" ಒಂಬತ್ತು ಗಂಟೆಯಾಯಿತು. ಇನ್ನು ಹೊರಡೋಣ "

ಎಂದು ತಮ್ಮ ಪತ್ನಿಗೆ ಎಚ್ಚರಿಸಿದರು.

" ತಾಯಿ, ಈಗ ಜ್ವರ ಬಿಟ್ಟಿರಬೇಕು ನೋಡಿ. "

ಕಮಲಮ್ಮನವರನ್ನು ನೋಡುತ್ತಾ ನುಡಿದರು ವೈದೇಹಮ್ಮ.

ಕೋಣೆಗೆ ಧಾವಿಸಿದ ಕಮಲಮ್ಮನವರು ಗಂಡನ ಮೈಮುಟ್ಟಿ ನೋಡಿ ಹರ್ಷಭರಿತರಾದರು. ಶಂಕರಶಾಸ್ತ್ರಿಗಳಿಗೆ ಜ್ವರ ಬಿಟ್ಟಿದೆಯೆಂಬ ಸುದ್ದಿ ಅಂಗಳದಲ್ಲಿದ್ದವರಿಗೆಲ್ಲರಿಗೂ ತಿಳಿದಾಗ, ಎಲ್ಲರೂ ಹೋಗಿ ಶಾಸ್ತ್ರಿಗಳನ್ನು ನೋಡಿದರು. ಸೌಭಾಗ್ಯಮ್ಮನವರಂತೂ ವೈದೇಹಮ್ಮನವರನ್ನು ಅಪ್ಪಿಕೊಂಡು

" ಎಂಥಾ ಅಮೃತ ತಂದುಕೊಟ್ಟು ಉಪಕಾರ ಮಾಡಿದಿರಿ ತಾಯಿ "

ಎನ್ನುತ್ತಾ ಪ್ರೇಮಪೂರ್ಣ ಮಧುರವಾಣಿಯಿಂದ ರಮಿಸಿದರು.

" ಹಳ್ಳಿಯಲ್ಲಿ ಹಿಂದೆ ಅವರ ತಂದೆ ವೈದ್ಯವೃತ್ತಿ ಮಾಡುತ್ತಿದ್ದರು. ಆದರೆ ಅದು ಮಗಳಿಗೂ ಬರುತ್ತದೆಂದು ನನಗೆ ತಿಳಿದಿರಲಿಲ್ಲ ! "

ಎಂದು ಸುದರ್ಶನಯ್ಯಂಗಾರ್ಯರು ನಕ್ಕು ನುಡಿದರು.

" ನಾವಿನ್ನು ಹೋಗುತ್ತೇವೆ ಸೌಭಾಗ್ಯಮ್ಮ. ' ಅವರಿಗೆ ' ಆಫೀಸಿಗೆ

ಹೋಗುವ ಹೊತ್ತಾಯಿತು. ಪಾಪ, ಅಲಮೇಲುವನ್ನು ಅಡಿಗೆಗೆ ಬಿಟ್ಟಿದ್ದೇನೆ. ಎಲ್ಲಿ ಕೈ ಸುಟ್ಟುಕೊಳ್ಳುತ್ತಾಳೆಯೋ ಕಾಣೆ ! ”

ಎನ್ನುತ್ತಾ ವೈದೇಹಮ್ಮನವರು ಹೊರಡಲು ಕಾತರಿಸಿದರು. ಸೌಭಾಗ್ಯಮ್ಮ ಅವರಿಗೆ ಕುಂಕುಮ ಕೊಟ್ಟು ಬೀಳ್ಕೊಟ್ಟರು.

ಶಂಕರಶಾಸ್ತ್ರಿಗಳ ಜ್ವರ ಸಂಜೆಯ ವೇಳೆಗೆ ಸಂಪೂರ್ಣವಾಗಿ ಇಳಿದು ಹೋಯಿತು. ಆದರೆ ಸುಸ್ತು ಮಾತ್ರ ಹಾಗೆಯೇ ಇತ್ತು. ಆದರೂ ಮರು ದಿನದಿಂದ ಪತ್ನಿಯ ನೆರವು ಪಡೆದು ಸ್ನಾನ ಮುಗಿಸಿ, ಪೂಜೆಗೆ ಕೂಡುತ್ತಿದ್ದರು. ಅಲ್ಪಸ್ವಲ್ಪ ಆಹಾರವೂ ಅವರ ಹೊಟ್ಟೆಗೆ ಸೇರುವಂತಾಯಿತು.

ಹೀಗೆ ಎರಡು ದಿನ ಕಳೆಯಿತು. ಮೂರನೆಯ ದಿನ ಸಂಜೆ ಅನಿರೀಕ್ಷಿತ ವಾಗಿ ನರಸಮ್ಮ ಬಂದಳು – ತನ್ನ ಮೂರು ಮಕ್ಕಳೊಡನೆ. ಏಕೋ ತುಂಬಾ ಹೆದರಿದಂತೆ ಕಾಣುತ್ತಿದ್ದಳು. ಮನೆಯೊಳಗಡೆಗೆ ಬಂದಿದ್ದರೂ ಅವಳ ಕಾಲುಗಳಿನ್ನೂ ಕಂಪಿಸುತ್ತಿದ್ದವು.

“ ಬಾ ನರಸೂ, ಬಾ. ಯಾಕಮ್ಮ ಹೀಗಿದ್ದೀಯೆ ?”

ಪ್ರೀತಿಯಿಂದ ಸ್ವಾಗತಿಸುತ್ತಾ ಸೌಭಾಗ್ಯಮ್ಮ ಕೇಳಿದರು.

“ ಅಕ್ಕಾ........ಅಕ್ಕಾ........ ”

“ ಏನಾಯಿತಮ್ಮ ? ”

“ ನನ್ನ ಗತಿ ಇನ್ನು ಮುಗಿಯಿತು ಅಕ್ಕ ”

“ ಯಾಕೆ ನರಸೂ ಹೀಗನ್ನುತ್ತೀ ?”

“ ಹೌದಕ್ಕ. ಬುದ್ಧಿ ಇಲ್ಲದ ಕೆಲಸ ಮಾಡಿದೆ ”

“ ಏನಾಯಿತು ಹೇಳಮ್ಮ ”

ನರಸಮ್ಮ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ಹೇಳಿದಳು –

“ ಅಕ್ಕಾ, ‘ ಅವರು ’ ಮದರಾಸಿಗೆ ಹೋಗಿ ಮೂರು ದಿನವಾಯಿತು. ಇನ್ನೂ ಬರಲಿಲ್ಲ. ಇಲ್ಲಿ ಮಾವನವರಿಗೆ ಪ್ರೈಸರಿಯಿಲ್ಲವೆಂದು ‘ ಅವರೇ ’ ಹೇಳಿದರು. ಇದುವರೆಗೂ ಇಲ್ಲಿನ ಸಮಾಚಾರವೂ ಗೊತ್ತಾಗಲಿಲ್ಲ. ಯಾಕೋ ನನ್ನ ಮನಸ್ಸು ತಡೆಯಲಿಲ್ಲ. ಅದಕ್ಕೆ ನೋಡಿಕೊಂಡು ಹೋಗೋಣವೆಂದು ಬಂದೆ. ”

“ ಒಳ್ಳೆಯದಾಯಿತು. ಅದಕ್ಕೇಕೆ ಹೆದರಬೇಕು ನರಸು ?”

“ ಅಲ್ಲಕ್ಕ, ದಾರಿಯಲ್ಲಿ....”

" ಏನಾಯಿತಮ್ಮ ?"

" ಇಲ್ಲಿ–ನಿಮ್ಮ ಮನೆ ಹತ್ತಿರ ಬಂದೆ. ಅಷ್ಟರಲ್ಲಿ ಇಲ್ಲೇ ತಿರುಗಾಡುತ್ತಿದ್ದ ಭದ್ರಯ್ಯ ನನ್ನನ್ನು ನೋಡಿಬಿಟ್ಟ. ದುರುದುರನೆ ನೋಡಿ, ತನ್ನ ಷ್ಟಕ್ಕೆ ತಾನೇ ನಕ್ಕುಬಿಟ್ಟ ಅಕ್ಕಯ್ಯ....ನನಗೆ ತುಂಬಾ ಹೆದರಿಕೆಯಾಗುತ್ತಿದೆ"

ನರಸಮ್ಮನ ಮಾತು ಕೇಳಿ ಸೌಭಾಗ್ಯಮ್ಮನವರು ಕಳವಳಗೊಂಡರು. ನರಸಮ್ಮ ಬದುಕಿರುವ ಸುದ್ದಿ–ಸುಳಿವು ತಿಳಿದುಬಿಟ್ಟರೆ, ಅವಳ ಪ್ರಾಣಕ್ಕೆ ಭದ್ರಯ್ಯ ಸಂಚಕಾರ ತರುತ್ತಾನೆ ಎಂದು ಮುನಿತಾಯಪ್ಪ ಹಲವುಬಾರಿ ಹೇಳಿದ್ದನೆಂಬುದು ಸೌಭಾಗ್ಯಮ್ಮನವರಿಗೂ ತಿಳಿದಿತ್ತು. ಎಂತಲೇ ಅವರು ನರಸಮ್ಮನ ಬದುಕು – ಸಾವಿನ ತೊಡಕಿನಲ್ಲಿ ತೊಳಲಾಡುತ್ತಾ ಗಾಬರಿ ಗೊಂಡಿದ್ದರು.

" ನರಸೂ, ನಿನ್ನ ಮನೆಗೆ ಭದ್ರವಾಗಿ ಬೀಗ ಹಾಕಿದ್ದೀತಾನೆ ?"

" ಹಾಕಿದ್ದೇನೆ ಅಕ್ಕ "

" ಸರಿ ಹಾಗಾದರೆ. ನಿನ್ನ ಯಜಮಾನರು ಬರುವವರೆಗೂ ಇಲ್ಲಿಯೇ ಇರು. ಏನೂ ಹೆದರಬೇಡ " ಎಂದು ಅಭಯವಿತ್ತರು ಸೌಭಾಗ್ಯಮ್ಮ.

ನರಸಮ್ಮ ಮೌನವಾಗಿ ಸಮ್ಮತಿ ಸೂಚಿಸಿದಳು.

" ಭದ್ರಯ್ಯ ಈ ಮನೆಯನ್ನು ನೋಡಿದನೇ ನರಸು ?"

" ಹ್ಞು. ನಾನು ಒಳಗೆ ಬರುವವರೆಗೂ, ಅವನು ಬೀದಿಯಲ್ಲೇ ನಿಂತು ಒಂದೇ ಸಮನೆ ನೋಡುತ್ತಿದ್ದ. " ಎಂದಳು ನರಸಮ್ಮ.

ಅಷ್ಟರಲ್ಲಿ ರುಕ್ಮಿಣಿ ಅಲ್ಲಿಗೆ ಬಂದುದನ್ನು ಕಂಡ ಸೌಭಾಗ್ಯಮ್ಮನವರು, ಕೂಡಲೇ ಅವಳನ್ನು ಕರೆದುಕೊಂಡು ಕೋಣೆಗೆ ಹೋದರು.

" ಪುಟ್ಟಾ, ನೀನಿಲ್ಲಿಯೇ ಇರು ತಾಯಿ. ಯಾವುದಾದರೂ ಪುಸ್ತಕ ಓದಿಕೊಂಡು ಕುಳಿತುಕೋಮ್ಮ. ಗ್ರಹಚಾರ ಹೇಗಿದೆಯೋ ಏನೋ "

ಎಂದು ಹೇಳಿ ' ರಾಮಾಯಣ ' ಪುಸ್ತಕವನ್ನು ಅವಳ ಕೈಗಿತ್ತು, ಬಾಗಿಲನ್ನು ಭದ್ರಪಡಿಸಿ, ಬೀಗಹಾಕಿದರು ಸೌಭಾಗ್ಯಮ್ಮ.

" ಅಕ್ಕಾ, ಮಾವನವರಿಗೆ ಈಗ ಹೇಗಿದೆ ?"

" ಪರವಾಗಿಲ್ಲಮ್ಮ ಈಗ ಸ್ವಲ್ಪ ಗುಣವಾಗಿದೆ. ಆದರೆ ಸುಸ್ತು ಮಾತ್ರ ಹಾಗೆಯೇ ಇದೆ. "

ಎನ್ನುತ್ತಾ ಸೌಭಾಗ್ಯಮ್ಮನವರು ವೈದೇಹಮ್ಮನವರ ಕಷಾಯದ

ಪವಾಡವನ್ನು ವಿವರಿಸಿದರು ನರಸಮ್ಮನಿಗೆ.

"ಯಾರ್ಯಾರ ಹಸ್ತಗುಣ ಹೇಗಿದೆಯೋ! ಯಾರ್ಯಾರಲ್ಲಿ ಎಂತೆಂತಹ ಶಕ್ತಿ ಅಡಗಿದೆಯೋ!" ನರಸಮ್ಮ ವಿಸ್ಮಯದಿಂದ ನುಡಿದಳು.

ಎಂದಿನಂತೆ ಆ ಸಂಜೆಯೂ ಬಂದ ಸುದರ್ಶನಯ್ಯಂಗಾರ್ಯರು ರುಕ್ಮಿಣಿಯ ಗಾಯಗಳಿಗೆ ಔಷಧಿಯನ್ನು ತಂದುಕೊಟ್ಟು, ಶಂಕರಶಾಸ್ತ್ರಿಗಳ ಆರೋಗ್ಯ ವನ್ನು ವಿಚಾರಿಸಿಕೊಂಡು ಹೊರಟುಹೋದರು.

ನಾಲ್ಕನೆಯ ದಿನ—

ಅಂಗಳದ ಕಿಟಕಿಯ ಬಳಿ ನಿಂತು ಕುಂಕುಮವಿಟ್ಟುಕೊಳ್ಳುತ್ತಿದ್ದ ನರಸಮ್ಮ ಇದ್ದಕ್ಕಿದ್ದಂತೆ ತಲೆ ಸುತ್ತಿದಂತಾಗಿ ಕೆಳಗುರುಳಿ ಬಿದ್ದಳು. ಮೈಮೇಲೆ ಪ್ರಜ್ಞೆ ತಪ್ಪಿತು. ಅದೇ ನೆಪವಾಗಿ ಆಕೆ ಹಾಸಿಗೆ ಹಿಡಿಯ ಬೇಕಾಯಿತು. ಉಪಚಾರದ ಬಳಿಕ ಆಕೆಗೆ ತಿಳಿವು ಬಂದರೂ ಆರೋಗ್ಯ ಕೆಟ್ಟಿತು. ನರಗಳು ಸೆಳೆತುಕೊಂಡವು. ಜ್ವರ ಏರಿತು. ತಲೆ ಸಿಡಿಯಿತು. ಅನ್ನ–ನೀರು ಯಾವುದನ್ನೂ ಒಲ್ಲೆನೆಂದಳು.

ನೆರೆಮನೆಯವರ ಸಹಾಯದಿಂದ ಸೌಭಾಗ್ಯಮ್ಮನವರು ಡಾಕ್ಟರನ್ನು ಕರೆಸಿದರು. ಅವರ ಔಷಧ ನಿರುಪಯೋಗವಾಯಿತು.

ಸಂಜೆಗೆ ಬಂದ ಸುದರ್ಶನಯ್ಯಂಗಾರ್ಯರಿಗೆ ವಿಷಯ ತಿಳಿಯಿತು. ಆ ಕಾಯಿಲೆಗೆ ಕಾರಣವೂ ಗೊತ್ತಾಯಿತು. ಆದರೆ ಅವರೇನೂ ಮಾಡು ವಂತಿರಲಿಲ್ಲ.

ಅದೇ ರಾತ್ರಿ ಎಕ್ಸ್‌ಪ್ರೆಸ್ ಗಾಡಿಯಲ್ಲಿ ಬಂದ ವೆಂಕಟೇಶಯ್ಯ ತನ್ನ ಮನೆಗೆ ಹೋಗಿ, ಅಲ್ಲಿ ಬಾಗಿಲು ಬೀಗ ಹಾಕಿದ್ದುದನ್ನು ಕಂಡು ಶಂಕರ ಶಾಸ್ತ್ರಿಗಳ ಮನೆಗೆ ಬಂದ. ನರಸಮ್ಮ ಹಾಸಿಗೆ ಹಿಡಿದಿರುವುದನ್ನು ಕಂಡು ಪಾತಾಳಕ್ಕೇ ಇಳಿದುಹೋದ. ಭದ್ರಯ್ಯನ ಸಂಗತಿ ತಿಳಿದಮೇಲಂತೂ ಅವನಿಗೆ ದಿಕ್ಕೇ ತೋಚದಂತಾಯಿತು.

ಹೌದು, ಇನ್ನು ನಾಲ್ಕೇ ದಿನಗಳ ಅವಧಿ ನರಸಮ್ಮನ ಜೀವಕ್ಕೆ. ಆನಂತರ ಅವಳು ಎಲ್ಲರನ್ನೂ ಬಿಟ್ಟು ಹೊರಟು ಹೋಗುವಳು.

ನರಸಮ್ಮನ ಸಾವು ನಿಶ್ಚಯವಾಗಿ ಬಿಟ್ಟಿತು....

ಸಂಜೆಗೆ ಬಂದ ಸುದರ್ಶನಯ್ಯಂಗಾರ್ಯರು ತಮಗೆ ತೋಚಿದಷ್ಟು ಸಮಾ ಧಾನದ ಮಾತು ಹೇಳಿದರು. ವೆಂಕಟೇಶಯ್ಯನಿಗೆ ಧೈರ್ಯವಾಗಲಿಲ್ಲ.

ಮುನಿತಾಯಪ್ಪನೇನಾದರೂ ಸಲಹೆ ಕೊಡಬಹುದೇನೋ ಎಂದು ಇಬ್ಬರೂ ಅವನ ಬಳಿಗೆ ಬಂದರು.

ಮಾವಳ್ಳಿಯ ಬೀದಿಗಳಲ್ಲಿ ನಡೆಯುತ್ತಿರುವಾಗ ಏಕೋ ಮೊದಲಿನ ಉತ್ಸಾಹವಿರಲಿಲ್ಲ ಇಬ್ಬರಿಗೂ. ಹಾಳು ಸುರಿಯುತ್ತಿರುವ ಮುನಿತಾಯಪ್ಪನ ಮನೆಯನ್ನು ನೋಡುವಾಗಲಂತೂ ಬೆಂಕಿಯನ್ನೇ ನುಂಗುವಂತಾಗುತ್ತಿತ್ತು.

" ಮುನಿತಾಯಪ್ಪಾ.... ಮುನಿತಾಯಪ್ಪಾ...."

" ಬನ್ನಿ ಸ್ವಾಮಿ ಒಳಗೆ...."

ಅತಿ ಕ್ಷೀಣವಾದ ದನಿಯಿಂದ ಸ್ವಾಗತಿಸಿದ ಮುನಿತಾಯಪ್ಪ.

" ಯಾಕೆ ಮಲಗಿದ್ದೀಯಾ ? "

" ಅವತ್ತು ನಿಮ್ಮ ಮನೆಯಿಂದ ಬಂದು ಊಟ ಮಾಡಿ ಮಲಗಿದವನು ಸ್ವಾಮಿ. ಇದುವರೆಗೂ ಎದ್ದಿಲ್ಲ ! ....ನೋಡಿ, ನಾನೊಂದು ಕಡೆ ಮಲಗಿದ್ದೀನಿ – ಅವಳೊಂದು ಕಡೆ ಬಿದ್ದುಕೊಂಡಿದ್ದಾಳೆ "

" ಮೈಗೆ ಸ್ವಸ್ಥವಿಲ್ಲವೇ ? "

" ಮೈಯೆಲ್ಲ ಹಿಂಡಿ ಮುದ್ದೆ ಮಾಡಿದ ಹಾಗಾಗಿದೆ ಸ್ವಾಮಿ. ಕೈಕಾಲು ಸೆಟೆದುಕೊಂಡಿದೆ. ಬಾಯೆಲ್ಲಾ ಉಪ್ಪುಪ್ಪು...."

" ನಿನ್ನ ಹೆಂಡತಿಗೆ ? "

" ಅವಳಿಗೆ ಮಂಕು ಮುಚ್ಚಿಕೊಂಡಿದೆ ಸ್ವಾಮಿ. ಒಂದು ಕೆಲಸ ಮಾಡಬೇಕಾದರೆ ಹತ್ತುಸಾರಿ ಹೇಳಬೇಕು. ಹತ್ತುಸಾರಿ ಹೇಳಿದರೂ ಆ ಕೆಲಸವನ್ನು ನೆಟ್ಟಗೆ ಮಾಡುವುದಿಲ್ಲ. ಕೂತರೆ ಕೂತೇ ಇರುತ್ತಾಳೆ. ನಿಂತರೆ ನಿಂತೇ ಇರುತ್ತಾಳೆ. ಮಲಗಿದರಂತೂ ಏಳುವ ಹಾಗೆಯೇ ಇಲ್ಲ ! "

ಎಂದ ಮುನಿತಾಯಪ್ಪ – ಹೊತ್ತು ಹೊತ್ತಿಗೆ ಅನ್ನ ನೀರಿಲ್ಲದೆ ಅವನ ಹಿಂದಿನ ಸ್ಥಿತಿಯನ್ನೂ – ಅಂದಿನ ಸ್ಥಿತಿಯನ್ನೂ ನೆನೆದು ಸುದರ್ಶನಯ್ಯಂಗಾರ್ಯರಿಗೆ ಕರುಳು ಚುಚ್ಚಿತು.

" ನಿನ್ನೆ ಇನ್ನೊಂದು ಅಚಾತುರ್ಯ ನಡೆದು ಹೋಯಿತು ಮುನಿತಾಯಪ್ಪ "

ಎನ್ನುತ್ತಾ ಸುದರ್ಶನಯ್ಯಂಗಾರ್ಯರು, ನರಸಮ್ಮನು ಭದ್ರಯ್ಯನ ಕಣ್ಣಿಗೆ ಬಿದ್ದುದನ್ನೂ, ಆಕೆ ಹಾಸಿಗೆ ಹಿಡಿದು ಮರಣದ ಮಡಿಲಲ್ಲಿ ತೊಳಲಾಡುತ್ತಿರುವುದನ್ನೂ ವಿವರಿಸಿದರು. ಹಾಗೆಯೇ, ಅದಕ್ಕೂ ಹಿಂದಿನ ದಿನ ನಡೆದ

ರುಕ್ಮಿಣಿಯ ಅನಾಹುತವನ್ನೂ ಬಣ್ಣಿಸಿದರು.

"ಮೊದಲಿನಿಂದಲೂ ನಾನು ಹೇಳುತ್ತಲೇ ಇದ್ದೆನಲ್ಲಾ ಸ್ವಾಮಿ. ಕೊನೆಗೂ ಎಚ್ಚರತಪ್ಪಿ ಬಿಟ್ಟರಲ್ಲ!"

"ಈಗೇನೂ ಮಾಡುವುದಕ್ಕಾಗುವುದಿಲ್ಲವೆ?"

"ನನ್ನ ಸ್ಥಿತಿ ನಿಮಗೇ ತಿಳಿದಿದೆಯಲ್ಲಾ ಸ್ವಾಮಿ. ಏನು ಮಾಡುವುದಕ್ಕಾಗುತ್ತದೆ ಹೇಳಿ"

"ಮುಂದೆ ನರಸಮ್ಮನ ಗತಿ?"

"ದೇವರೇ ಕಾಪಾಡಬೇಕು!" ಎಂದು ನಿಟ್ಟುಸಿರಿಟ್ಟ ಮುನಿತಾಯಪ್ಪ.

ಎರಡು ಕ್ಷಣಗಳ ಬಳಿಕ ಸುದರ್ಶನಯ್ಯಂಗಾರ್ಯರು ಹೊರಗೆ ಹೋಗಿ, ಹೋಟಲಿನಲ್ಲಿ ಸ್ವಲ್ಪ ತಿಂಡಿ ಕಟ್ಟಿಸಿಕೊಂಡು, ಜತೆಯಲ್ಲಿ ಬಾಳೆಹಣ್ಣನ್ನೂ ತೆಗೆದುಕೊಂಡು ಬಂದರು.

"ಇದೆಲ್ಲಾ ಯಾಕೆ ತಂದಿರಿ ಸ್ವಾಮಿ?"

"ಪರವಾಗಿಲ್ಲ ತೆಗೆದುಕೋಪ್ಪ"

ಮುನಿತಾಯಪ್ಪ ಕೃತಜ್ಞತೆಯಿಂದ ಮೂಕನಾದ.

"ನಾವಿನ್ನು ಹೊರಡುತ್ತೇವೆ. ದೇವರು ಮಾಡಿದ ಹಾಗಾಗಲಿ"

ವೆಂಕಟೇಶಯ್ಯನೂ ಸುದರ್ಶನಯ್ಯಂಗಾರ್ಯರೂ ಅಲ್ಲಿಂದ ಹೊರಟುಬಿಟ್ಟರು. ಮಲ್ಲೇಶ್ವರದ ಚೌಕದಲ್ಲಿ ಇಬ್ಬರೂ ಬಸ್ಸಿನಿಂದಿಳಿದು ಮನೆಯ ಕಡೆಗೆ ನಡೆದಾಗ, ಭದ್ರಯ್ಯನೂ ಅವರನ್ನೇ ಹಿಂಬಾಲಿಸುತ್ತಿದ್ದ. ಅದನ್ನು ಮಿತ್ರರಿಬ್ಬರೂ ಗಮನಿಸಿರಲಿಲ್ಲ.

ವೆಂಕಟೇಶಯ್ಯನನ್ನು ಮನೆಗೆ ಕಳುಹಿಸಿ, ಸುದರ್ಶನಯ್ಯಂಗಾರ್ಯರು ಮನೆಗೆ ಬಂದರು. ಭದ್ರಯ್ಯನೂ ಅವರನ್ನು ಹಿಂಬಾಲಿಸಿಯೇ ಬಂದ. ಅವರ ಣದ ಹೊರಗಡೆ- ಬೀದಿಯಲ್ಲಿ ನಿಂತು, ನೆಟ್ಟ ನೋಟದಿಂದ ಐಂಗಾರ್ಯರ ಮನೆಯನ್ನು ನೋಡಿದ.

ಆ ರಾತ್ರಿ ಸುದರ್ಶನಯ್ಯಂಗಾರ್ಯರ ಮನೆಯಲ್ಲಿ ವಿಚಿತ್ರ ಘಟನಾವಳಿ ಪ್ರಾರಂಭವಾಯಿತು........

ಸುದರ್ಶನಯ್ಯಂಗಾರ್ಯರು ಪ್ರೀತಿಯಿಂದ ಸಾಕಿದ್ದ ನಾಯಿ, ಶ್ರೀದೇವಮ್ಮನವರ ಪ್ರೀತಿಯ ಬೆಕ್ಕು, ತೌರುಮನೆಯಿಂದ ತಂದಿದ್ದ ಅಲಮೇಲುವಿನ ಮುದ್ದುಗಿಣಿ—ಮೂರೂ ಮೊದಲಿನಿಂದ ಸ್ನೇಹವಾಗಿಯೇ ಇದ್ದವು. ಒಂದ

ನ್ನೊಂದು ಕಂಡು ಕರುಬುತ್ತಿರಲಿಲ್ಲ. ಬೆಕ್ಕು – ನಾಯಿಗಳಂತೂ ಅಕ್ಕಪಕ್ಕದಲ್ಲಿದ್ದ ತಟ್ಟೆಗಳಲ್ಲಿ ಹಾಲು – ಅನ್ನ ಸ್ವೀಕರಿಸುತ್ತಿದ್ದವು. ಮನೆಗೆ ಬಂದವರೆಲ್ಲಾ ಆ ಅಚ್ಚರಿಯನ್ನು ಕಂಡು ಆನಂದಿಸುತ್ತಿದ್ದರು. ಅಲಮೇಲುವಿನ ಮದುವೆಯಾದ ಮೇಲೆ, ಅವಳು ತಂದೆಯ ಮನೆಯಿಂದ ಒಂದು ಪಂಚರಂಗಿಯ ಗಿಣಿಯನ್ನು ತಂದಿದ್ದಳು. ಮೊದಲೆರಡು ದಿನ – ಹೊಸದರಲ್ಲಿ – ಬೆಕ್ಕು ಗಿಣಿಯನ್ನು ಕಂಡು ' ಗುರ್ ' ಎಂದಿತು. ಆದರೆ ವೈದೇಹಮ್ಮನವರು ಒಂದು ಸಾರಿ ಪ್ರೀತಿಯಿಂದ ಗದರಿಸಿಕೊಂಡಮೇಲೆ ಬೆಕ್ಕು ಸುಮ್ಮನಾಯಿತು. ಗಿಣಿಗೆ ಮಾತ್ರ ಅಲ್ಪಸ್ವಲ್ಪ ಭಯವಿದ್ದೇ ಇತ್ತು. ಅದನ್ನು ಕಂಡ ವೈದೇಹಮ್ಮ ಬೆಕ್ಕನ್ನು ಒಂದು ತೊಡೆಯ ಮೇಲೆ, ಗಿಣಿಯನ್ನು ಇನ್ನೊಂದು ತೊಡೆಯ ಮೇಲೆ ಕೂಡಿಸಿಕೊಂಡು, ಅವುಗಳ ತಲೆಯನ್ನು ಸವರುತ್ತಾ ಪ್ರೀತಿಯ ಮಾತುಗಳನ್ನಾಡುತ್ತಿದ್ದರು. ಅಂಗಡಿಯಲ್ಲಿ ಮಾರುವ ಸಕ್ಕರೆ ಕಡ್ಡಿಯನ್ನು ತಂದು, ಅದರ ಒಂದು ತುದಿಯನ್ನು ಗಿಣಿಯ ಬಾಯಲ್ಲಿಯೂ ಇನ್ನೊಂದು ತುದಿಯನ್ನು ಬೆಕ್ಕಿನ ಬಾಯಲ್ಲಿಯೂ ಇಟ್ಟು, ಅವೆರಡೂ ಕಚ್ಚಾಡದೆ, ಪ್ರೀತಿಯಿಂದ ತಿನ್ನುವುದನ್ನು ಅಭ್ಯಾಸ ಮಾಡಿಸಿದರು ಪರಸ್ಪರ ಬಳಕೆ ಹೆಚ್ಚಾದ ನಂತರ ಗಿಣಿ ನಿರ್ಭಯವಾಗಿ ಬೆಕ್ಕಿನ ಬೆನ್ನಿನ ಮೇಲೆ ಕುಳಿತು ಸವಾರಿ ಮಾಡಲಾರಂಭಿಸಿತು. ಕೇವಲ ಎಂಟೇ ದಿನಗಳಲ್ಲಿ ಈ ಮಧುರ ಸ್ನೇಹವನ್ನು ಬೆಳಸಿಬಿಟ್ಟಿದ್ದರು ವೈದೇಹಮ್ಮ. ಅಲಮೇಲುವಂತೂ ಅಕ್ಕನ ಗುಣ—ಸಾಮರ್ಥ್ಯಗಳನ್ನು ಕಂಡು ಮುಗ್ಧಳಾಗಿದ್ದಳು. ವೈದೇಹಮ್ಮನವರನ್ನು ಒಂದು ಕ್ಷಣ ಅಗಲಿರಬೇಕೆಂದರೆ ಅವಳಿಗಾಗದು. 'ಅಕ್ಕಾ ಅಕ್ಕಾ' ಎನ್ನುತ್ತಾ ಅವರ ಹಿಂದೆ—ಮುಂದೆಯೇ ತಿರುಗಾಡುತ್ತಿದ್ದಳು ಆ ದೊಡ್ಡ ಹುಡುಗಿ ! ಸುದರ್ಶನಯ್ಯಂಗಾರ್ಯರಿಗೂ ಅಷ್ಟೆ—ವೈದೇಹಮ್ಮನವರನ್ನು ಕಂಡರೆ ಕಿರಿಯ ಹೆಂಡತಿಗಿಂತ ಹೆಚ್ಚು ಪ್ರೀತಿ. ಬಡಿಸುವುದಕ್ಕೆ ಅಲಮೇಲು ನಿಂತರೆ 'ವೈದೇಹಿಯನ್ನು ಕಳಿಸು' ಎನ್ನುತ್ತಿದ್ದರು. ಮಲಗುವ ಮುನ್ನ 'ವೈದೇಹಿ ಊಟ ಮಾಡಿದಳೆ ?' ಎಂದು ವಿಚಾರಿಸುತ್ತಿದ್ದರು. ಮನೆಗೆ ಬಂದರೆ, 'ವೈದೇಹಿ ಎಲ್ಲಿ ?' ಎಂಬುದು ಅವರ ಮೊದಲ ಪ್ರಶ್ನೆ. ವೈದೇಹಮ್ಮನವರೂ ಸಹ ಗಂಡನ ವಿಷಯದಲ್ಲಿಯೂ ಸವತಿಯ ವಿಷಯದಲ್ಲಿಯೂ ಅಷ್ಟೇ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದರು. ಗಂಡ ಹೂವು ತಂದರೆ, ' ನೀವೇ ಅಲಮೇಲುವಿಗೆ ಮುಡಿಸಿ ' ಎನ್ನುತ್ತಿದ್ದರು. ತಮಗಾಗಿಯೇ ಒಳ್ಳೆಯ ಸೀರೆ ಅಥವಾ ಕುಪ್ಪಸದ ಬಟ್ಟೆ ತಂದರೆ, ' ಇದು

ಅಲಮೇಲುವಿಗೆ ಚೆನ್ನಾಗಿ ಒಪ್ಪುತ್ತೆ' ಎಂದು ಹೇಳಿ ಅವಳಿಗೆ ಕೊಟ್ಟು ಬಿಡುತ್ತಿದ್ದರು. ರಾತ್ರಿಯ ವೇಳೆ ಗಂಡನಿಗೆ ನಿದ್ರೆ ಬರುವವರೆಗೂ ಕಾಲೊತ್ತುತ್ತಾ ಕುಳಿತು ಬಿಡುತ್ತಿದ್ದರು. ಮನೆಗೆಲಸಗಳನ್ನು ಮಾಡಲು ಅಲಮೇಲು ಮುಂದೆ ಬಂದರೂ, ಅವಳನ್ನು ತಡೆದು, ಮಗುವಿನಂತೆ ಮುದ್ದು ಮಾತನಾಡುತ್ತಿದ್ದರು. ಹೀಗೆ, ಆ ಮನೆಗೇ ಸಾಕ್ಷಾತ್ ದೇವತೆಯಾಗಿದ್ದರು ವೈದೇಹಮ್ಮ.

ಇಂತಹ ಅನ್ಯೋನ್ಯವಾದ ಸುಂದರ ಸಂಸಾರ ಅಂದು ರಾತ್ರಿ ಕೀಲು ತಪ್ಪಿದ ಯಂತ್ರದಂತೆ ಆಯಿತು !........

ಸುದರ್ಶನಯ್ಯಂಗಾರ್ಯರು ಒಳಗೆ ಬಂದ ಸ್ವಲ್ಪ ಹೊತ್ತಿನಲ್ಲೇ ಬದಲಾದರು ! ಅವರ ಮನಸ್ಸು ಜ್ಯೋತಿ ಮಾಯವಾದ ಇರುಳು ಹೃದಯದಲ್ಲಿ ತೊಳಲಾಡಿತು. ಅವರಲ್ಲಿದ್ದ ಸತ್ವಗುಣ ಸಂಪೂರ್ಣವಾಗಿ ಮಾಯವಾಗಿ ತಮೋಗುಣ ತಾಂಡವವಾಡಿತು !

ಅವರೊಬ್ಬರೇ ಹಾಗೆ ಬದಲಾಗಿರಲಿಲ್ಲ. ಇಡೀ ಮನೆಯೇ ವಿರುದ್ಧ ಗುಣಗಳಿಂದ ತುಂಬಿ ತುಳಕಿತು. ಹಗಲು ಇರುಳಾಯಿತು ; ಶುಕ್ಲಪಕ್ಷ ಕೃಷ್ಣ ಪಕ್ಷವಾಯಿತು ; ಬೆಣ್ಣೆ ಸುಣ್ಣವಾಯಿತು ; ಹಾಲು ಹಾಲಾಹಲವಾಯಿತು....

" ವೈದೇಹೀ....ವೈದೇಹೀ "

ಸುದರ್ಶನಯ್ಯಂಗಾರ್ಯರ ಧ್ವನಿ ಎಂದಿನಂತೆ ಮಧುರವಾಗಿರಲಿಲ್ಲ. ಕರ್ಕಶತೆ ತುಂಬಿ ತುಳುಕುತ್ತಿತ್ತು – ಆ ವಾಣಿಯಲ್ಲಿ.

ಸಿಡಿಗುಟ್ಟುತ್ತಲೆ ಬಂದರು ವೈದೇಹಮ್ಮ.

" ಎಲ್ಲಿ ಹಾಳಾಗಿ ಹೋಗಿದ್ದೆಯೇ ?"

" ನಾನೋ—ನೀವೋ ?"

ತುಂಬಾ ಅನಿರೀಕ್ಷಿತವಾಗಿತ್ತು ವೈದೇಹಮ್ಮನವರ ಉತ್ತರ.

" ಎದುರು ನಿಂತು ಮಾತನಾಡುತ್ತೀಯೇನೇ ರಾಕ್ಷಸಿ ?"

ಹಲ್ಲು ಕಡಿದರು ಸುದರ್ಶನಯ್ಯಂಗಾರ್ಯರು.

" ಹ್ಞಂ ! ಯಾರನ್ನ ನೀವು ಹೆದರಿಸೋದು "

ಸೆರಗು ಬಿಗಿದು ವೈದೇಹಮ್ಮ ಕದನಕ್ಕೇ ನಿಂತುಬಿಟ್ಟರು.

ಅಷ್ಟರಲ್ಲಿ ನಾಯನ್ನು ಹೊಡೆಯಲು ಕೋ ಪಾ ವೇ ಶ ದಿಂ ದ ಅಟ್ಟಿಸಿಕೊಂಡು ಬಂದಳು ಅಲಮೇಲು. ಸುದರ್ಶನಯ್ಯಂಗಾರ್ಯರ ಸಿಟ್ಟು

ಅವಳ ಕಡೆಗೆ ತಿರುಗಿತು.

"ಅದನ್ನೇಕೆ ಹೊಡೆಯುತ್ತೀಯೇ ಚಂಡಾಲೀ ?"

"ಇಲ್ಲ, ಅದನ್ನು ಹೋಡೆಯೋದಿಲ್ಲ. ನಿಮ್ಮನ್ನೇ ಹೊಡೀತೀನಿ"

ಕೊಂಕಿದ ದನಿಯಲ್ಲಿ ನುಡಿದ ಅಲಮೇಲು ಗಂಡನಿಗೆ ಪೆಟ್ಟು ಕೊಡಲು ಕೋಲನ್ನು ಮೇಲಕ್ಕೆತ್ತಿದಳು. ಸುದರ್ಶನಯ್ಯಂಗಾರ್ಯರು ಕೋಲನ್ನು ಕಿತ್ತು ಬಿಸುಟರು. ಅವರ ಹಣೆಯಲ್ಲಿ ಬೆವರು ಹನಿಗಳು ಮೂಡಿದ್ದುವು. ಅದೇ ಸಮಯದಲ್ಲಿ ಗಿಣಿಯು ಆರ್ತಧ್ವನಿಯಲ್ಲಿ ಕೂಗಿಕೊಂಡಿತು. ಅಲಮೇಲು ಅತ್ತ ಧಾವಿಸಿ ನೋಡುವಲ್ಲಿ, ಅವಳ ಗಿಣಿಯನ್ನು ವೈದೇಹಮ್ಮನವರ ಬೆಕ್ಕು ಕಚ್ಚಿ ತಿನ್ನುತ್ತಿತ್ತು. ಅವಳು ರೋಷವನ್ನು ತಡೆಯಲಾರದೆ ಬೆಕ್ಕನ್ನು ಅಟ್ಟಿಸಿಕೊಂಡು ಹೋದಳು. ಅದು ಅವಳನ್ನು ಮನೆಯಲ್ಲೆಲ್ಲಾ ಜೂಟಾಟ ಆಡಿಸಿ, ಕೊನೆಗೂ ಕೈಗೆ ಸಿಕ್ಕದೆ ಅಟ್ಟದ ಮೇಲೆ ಏರಿ ಕುಳಿತಿತು. ಆ ದೃಶ್ಯವನ್ನು ಕಂಡು ವೈದೇಹಮ್ಮ ಘೊಳ್ಳನೆ ನಕ್ಕರು. ಅಲಮೇಲುವಿನ ಸಿಟ್ಟು ಇಮ್ಮಡಿಸಿತು. ಆಕೆ ತುಸು ದೂರದಲ್ಲಿ ಬಿದ್ದಿದ್ದ ಕೋಲನ್ನು ತೆಗೆದುಕೊಂಡು ವೈದೇಹಮ್ಮನವರ ಬೆನ್ನಿಗೆ ಎರಡು ಬಾರಿಸಿದಳು ! ನೋವನ್ನು ತಡೆಯಲಾರದೆ ಅವರು ಕುಸಿದು ಕುಳಿತರು. ಸುದರ್ಶನಯ್ಯಂಗಾರ್ಯರು ದಿಙ್ಮೂಢರಾಗಿ ನಿಂತಿದ್ದರು.

ಗಿಣಿಯನ್ನು ತಿಂದು ಪೂರೈಸಿದ ಬಳಿಕ ಬೆಕ್ಕು ಅಟ್ಟದಿಂದ ಕೆಳಗಿಳಿದು 'ಮಿಯಾವ್ – ಮಿಯಾವ್' ಎನ್ನುತ್ತಾ ವೈದೇಹಮ್ಮನವರ ಸುತ್ತು ಮುತ್ತ ತಿರುಗಾಡಿತು. ಅವರ ನೋವನ್ನು ಕಂಡು ಅದಕ್ಕೂ ದುಃಖವಾಗಿತ್ತೆಂದು ಕಾಣುತ್ತದೆ! ಆ ದುಃಖವನ್ನು ಸಂಪೂರ್ಣವಾಗಿ ಪರಿಹರಿಸಲು ನಾಯಿ ಏದುತ್ತೇದುತ್ತ ಬಂದಿತು. ಬಂದೊಡನೆ ಬೆಕ್ಕಿನ ಮೇಲೆ ಎರಗಿ, ಅದರ ಬೆನ್ನನ್ನು ಕಚ್ಚಿಕೊಂಡು ಓಡಿಹೋಯಿತು. ಸ್ವಲ್ಪ ಹೊತ್ತಿನಬಳಿಕ ಹೊರಗೆ ಹೋದ ಸುದರ್ಶನಯ್ಯಂಗಾರ್ಯರು ಕಾಂಪೌಂಡಿನ ಗೋಡೆಯ ಬಳಿ ಸತ್ತ ಬೆಕ್ಕಿನ ತಲೆಯನ್ನು ಕಂಡರು. ಆ ಕ್ಷಣ ತಮ್ಮ ಪ್ರೀತಿಯ ನಾಯಿಯ ಮೇಲೆಯೂ ಕೋಪ ಬಂದಿತು. ಕೂಡಲೇ ಕೈಗೆ ಸಿಕ್ಕಿದ ಕೋಲಿನಿಂದ ನಾಯನ್ನು ಹೊಡೆದು ಕೊಂದುಬಿಟ್ಟರು !

ಆ ರಾತ್ರಿ ಮೂವರೂ ಊಟ ಮಾಡಲಿಲ್ಲ. ಎಲ್ಲೆಲ್ಲಿದ್ದವರು ಅಲ್ಲಲ್ಲಿಯೇ ಮಲಗಿಕೊಂಡರು. ಮರುದಿನವೂ ಹಾಗೆಯೇ ಕಳೆಯಿತು–ವಿರಸದಿಂದ.

ಎರಡನೆಯ ದಿನವೂ ಸ್ಥಿತಿ ಬದಲಾಗಲಿಲ್ಲ. ವೈದೇಹಮ್ಮನವರೂ ಅಲ ಮೇಲುವೂ ಬೇರೆ ಬೇರೆ ಅಡಿಗೆ ಮಾಡಿಕೊಂಡು ಊಟ ಮಾಡಿದರು. ಸುದರ್ಶನಯ್ಯಂಗಾರ್ಯರು ಆಫೀಸಿಗೆ ರಜ ಬರೆದು, ಹೋಟೇಲಿನಲ್ಲಿ ಹೊಟ್ಟೆ ತುಂಬಿಸಿಕೊಂಡರು.

ಮೂರನೆಯ ದಿನ ಬೆಳಗಾಯಿತು—

ಅದು ನರಸಮ್ಮನಿಗೆ ನಾಲ್ಕನೆಯ ದಿನ – ಕೊನೆಯ ದಿನ.

ವೆಂಕಟೇಶಯ್ಯ ಕಂಗಾಲಾಗಿದ್ದ. ಅವನ ಅಳ್ಳೆದೆ ತಳಮಳಿಸು ತ್ತಿದ್ದಿತು. ಬಳಿಯಲ್ಲಿ ಸ್ವಲ್ಪವಾದರೂ ಧೈರ್ಯ ಹೇಳುವವರು ಇರಲಿಲ್ಲ. ಸೌಭಾಗ್ಯಮ್ಮನವರಿಗೂ ಕಮಲಮ್ಮನವರಿಗೂ ದಿಕ್ಕೇ ತೋಚುತ್ತಿರಲಿಲ್ಲ. ಅಲ್ಲದೆ ಒಂದು ಕ್ಷಣವೂ ಪುರಸತ್ತಿರಲಿಲ್ಲ; ನೆಮ್ಮದಿಯೂ ಇರಲಿಲ್ಲ. ಗಾಯ ಗೊಂಡ ರುಕ್ಮಿಣಿಯನ್ನು ಕೋಣೆಯಲ್ಲಿ ಕೂಡಿ ಹಾಕಿದ್ದುದರಿಂದ ಅವಳು ಹೊರಗೆ ಬರುವಂತೆಯೇ ಇರಲಿಲ್ಲ. ಅವಳನ್ನೂ ನರಸಮ್ಮನನ್ನೂ ನೋಡಿ ಕೊಳ್ಳುವ ಕೆಲಸ ಸೌಭಾಗ್ಯಮ್ಮನವರಿಗೆ ಸೇರಿತ್ತು. ಕಮಲಮ್ಮನವರು ಗಂಡನ ಆರೈಕೆಗೆ ನಿಂತಿದ್ದರು. ಶಂಕರಶಾಸ್ತ್ರಿಗಳನ್ನು ಹಾಸಿಗೆಯಿಂದ ಎಬ್ಬಿಸಿ, ಅವರ ರಟ್ಟೆ ಹಿಡಿದು ಕರೆದುಕೊಂಡು ಬರುವುದು, ಸ್ನಾನ ಮಾಡಿಸುವುದು, ಪೂಜೆ ಮಾಡಿಸುವುದು, ಊಟ ಮಾಡಿಸುವುದು, ಮತ್ತೆ ನಿಧಾನವಾಗಿ ಕರೆದು ಕೊಂಡು ಹೋಗಿ ಮಲಗಿಸಿ, ಹೊದ್ದಿಸಿ, ಅವರ ಕಾಲೊತ್ತುತ್ತಾ ನಿದ್ದೆಮಾಡಿ ಸುವುದಕ್ಕೇ ಅವರಿಗೆ ಹೊತ್ತು ಸಾಲುತ್ತಿರಲಿಲ್ಲ. ಗಣೇಶನೂ ನರಸಮ್ಮನ ಮಕ್ಕಳೂ ಪರಿಸ್ಥಿತಿಯ ದುರವಸ್ಥೆಯಲ್ಲಿ ತಬ್ಬಲಿಗಳಂತೆ ಕಂಗೆಟ್ಟಿದ್ದವು.

ಮಧ್ಯಾನ್ಹದ ಸಮಯದಲ್ಲಿ—

" ಅಕ್ಕಾ, ನಾನಿನ್ನು ಬದುಕುವುದಿಲ್ಲ. ಈ ಮಕ್ಕಳ ಗತಿ ಏನಕ್ಕ ?"

ಎಂದಳು ನರಸಮ್ಮ.

" ಹಾಗೆಲ್ಲಾ ಕೆಟ್ಟ ಮಾತನಾಡಬೇಡ ನರಸೂ. ದೇವರನ್ನು ಬಲವಾಗಿ ನಂಬಬೇಕಮ್ಮ. ಅವನು ಖಂಡಿತ ಕೈಬಿಡುವುದಿಲ್ಲ "

" ನೀನು ಸುಮ್ಮನೆ ಮಲಗಮ್ಮ. ಮಾತಾಡಬೇಡ ಆಯಾಸವಾಗುತ್ತೆ"

" ಅಕ್ಕಾ, 'ಅವರಿಗೆ' ಇನ್ನೊಂದು ಮದುವೆ ಮಾಡಿ, ಸುಖವಾಗಿಡುವ ಭಾರ ನಿನಗೆ ಸೇರಿದ್ದು. ಭಾವನಿಗೂ ಈ ನನ್ನ ಕೊನೇ ಆಸೆಯನ್ನು ಹೇಳಕ್ಕ "

" ಛೆ, ಸುಮ್ಮನಿರು ನರಸು "

ಬಾಯಿ ಮುಚ್ಚಿಸಿದರು ಸೌಭಾಗ್ಯಮ್ಮ.

ಅವರಿಬ್ಬರ ಸಂಭಾಷಣೆ ವೆಂಕಟೇಶಯ್ಯನ ಅಂತರಂಗದಲ್ಲಿ ಕಲಮಲ ವುಂಟು ಮಾಡಿತು.

ಸ್ವಲ್ಪ ಹೊತ್ತಿನ ಬಳಿಕ ತೂರಾಡುತ್ತಾ ಸುದರ್ಶನಯ್ಯಂಗಾರ್ಯರ ಮನೆಗೆ ಬಂದ ವೆಂಕಟೇಶಯ್ಯ. ಅವರಾದರೂ ಜೊತೆಯಲ್ಲಿದ್ದರೆ ಸ್ವಲ್ಪ ಧೈರ್ಯ ವಾಗುತ್ತದೆ ಎಂದು ಅವನ ಯೋಚನೆ. ಆದರೆ ಆ ಯೋಚನೆಯನ್ನು ಸುದರ್ಶನಯ್ಯಂಗಾರ್ಯರು ಬುಡಮೇಲು ಮಾಡಿದರು!

" ಏನಯ್ಯಾ ದೊಡ್ಡ ಮನುಷ್ಯ ಬಂದೆ ?"

ಐಂಗಾರ್ಯರ ಬಾಯಿಂದ ಬಂದ ಆ ಮಾತು ವೆಂಕಟೇಶಯ್ಯನನ್ನು ವಿಸ್ಮಯಗೊಳಿಸಿತು. ಎಂದೂ ಅವರು ಹೀಗೆ ಮಾತನಾಡಿದವರಲ್ಲ. ' ನಮಸ್ಕಾರ ವೆಂಕಟೇಶಯ್ಯನವರೆ....ಬನ್ನಿ ಸ್ವಾಮಿ....ದಯಮಾಡಿಸಿ....' ಎಂದು ವಿನಯದಿಂದ ಮಾತನಾಡುತ್ತಿದ್ದವರು ಇಂದೇಕೆ ದರ್ಪದ ದನಿಯಲ್ಲಿ, ವ್ಯಂಗ್ಯವಾಗಿ, ತಿರಸ್ಕಾರದಿಂದ ಮಾತನಾಡುತ್ತಿದ್ದಾರೆ — ಎಂದುಕೊಂಡ ವೆಂಕಟೇಶಯ್ಯ.

" ನಿಮ್ಮನ್ನೇ ನೋಡೋಣ ಅಂತ ಬಂದೆ ಸ್ವಾಮಿ "

" ಹಹ್ಹಹ್ಹಾ !"

ವಿಕಟವಾಗಿ ನಕ್ಕರು ಸುದರ್ಶನಯ್ಯಂಗಾರ್ಯರು.

" ನೋಡಿ, ನೋಡಿ. ಚೆನ್ನಾಗಿ ನೋಡಿ....ಆಯಿತೋ ನೋಡಿದ್ದು ? ........ಸರಿ, ಇನ್ನು ಹೊರಡಿ " ಎಂದರು.

ಸುದರ್ಶನಯ್ಯಂಗಾರ್ಯರೇ ಮಾತನಾಡುತ್ತಿದ್ದಾರೆಯೋ ಅಥವ ಇನ್ನಾರಾದರೂ ಮಾತನಾಡುತ್ತಿದ್ದಾರೆಯೋ ಎಂದು ತನ್ನನ್ನು ತಾನೇ ಕೇಳಿಕೊಂಡ ವೆಂಕಟೇಶಯ್ಯ.

" ಹ್ಞಂ ಹೊರಡಿ" ಎಂದು ಆರ್ಭಟಿಸಿದರು ಸುದರ್ಶನಯ್ಯಂಗಾರ್ಯರು.

ಅಷ್ಟರಲ್ಲಿ ಒಳಗಿನಿಂದ ಬಂದ ಅಲಮೇಲು ' ಮಡಿಕೋಲಿ 'ನಿಂದ ವೆಂಕಟೇಶಯ್ಯನ ಬೆನ್ನಿಗೆ ಪೆಟ್ಟು ಕೊಟ್ಟಳು. ವೈದೇಹಮ್ಮನವರು ಅವರ ಮುಖಕ್ಕೆ ತಣ್ಣೀರೆರಚಿದರು. ತಾನು ಬಂದದ್ದು ಸುದರ್ಶನಯ್ಯಂಗಾರ್ಯರ ಮನೆಗಲ್ಲ – ನರಕಕ್ಕೆ ಎಂದುಕೊಂಡು ವೆಂಕಟೇಶಯ್ಯ ಹಿಂತಿರುಗಿದ.

ಮನೆಗೆ ಬಂದ ಮೇಲೆ ಸೌಭಾಗ್ಯಮ್ಮನವರಿಗೂ ಕಮಲಮ್ಮನವರಿಗೂ ಸುದರ್ಶನಯ್ಯಂಗಾರ್ಯರ ಮನೆಯನ್ನು ವಿವರಿಸಿದ ವೆಂಕಟೇಶಯ್ಯ.

"ಎಲ್ಲೆಲ್ಲಿಂದಲೂ ಕೆಟ್ಟ ಸುದ್ದಿಯೇ ಬರುತ್ತಿದೆಯಲ್ಲ"

ಎಂದರು ಕಮಲಮ್ಮ.

ಸೌಭಾಗ್ಯಮ್ಮನವರಂತೂ ಭದ್ರಯ್ಯನಿಂದೊದಗಿದ ದುರ್ಘಟನಾವಳಿಯನ್ನು ಕಂಡು, ಕಣ್ಣೀರು ಕರೆದು, ಮೌನವಾಗಿ ಮಹಾದೇವನಲ್ಲಿ ಮೊರೆಯಿಟ್ಟರು.

ಆ ಸುಂದರ ಹಗಲು ಕಾಳ್ಗತ್ತಲೆಯಾಗಿಯೇ ಕಳೆಯಿತು. ಸೂರ್ಯಾಸ್ತಮವಾಗಿ ಕಾಳ್ಗತ್ತಲೆಯೇ ಕವಿಯತೊಡಗಿದಾಗ ನರಸಮ್ಮನ ಬಾಳೂ ಆ ಇರುಳುನಲ್ಲಿಯೇ ಲೀನವಾಗುವುದರಲ್ಲಿತ್ತು. ಆಕೆಯ ಉಸಿರಾಟ ವೇಗವಾಗಿತ್ತು—ಆರುವ ದೀಪ ಪ್ರಕಾಶಮಾನವಾಗಿ ಉರಿಯುವಂತೆ.

ವೆಂಕಟೇಶಯ್ಯ ಮಂಡಿಯ ಮೇಲೆ ತಲೆಯೂರಿ ಕುಳಿತುಬಿಟ್ಟಿದ್ದ. ಅವನ ಮನಸ್ಸು ದುಸ್ಥಿತಿಯ ವಿಷಚಕ್ರವನ್ನು ಅವಲೋಕಿಸುತ್ತಿತ್ತು........

ಸಭಾಪತಿಶಾಸ್ತ್ರಿಗಳ ಮನೆ—

ರುಕ್ಮಿಣಿಗೊದಗಿರುವ ಮಹಾಕುತ್ತು; ಅವಳ ಸೆರೆಮನೆಯ ಬಾಳು.

ಶಂಕರಶಾಸ್ತ್ರಿಗಳ ಸುಸ್ತು ಕಾಯಿಲೆ.

ವೆಂಕಟೇಶಯ್ಯನ ಮನೆ—

ನರಸಮ್ಮನಿಗೊದಗಿರುವ-ಮರಣ ಸಂಕಟ. ಆಕೆ ಇನ್ನೇನು ಮಸಣದ ಬಳಿಯ ಮರಣದ ಮನೆಗೆ ತೆರಳುವವಳಿದ್ದಾಳೆ.

ಸುದರ್ಶನಯ್ಯಂಗಾರ್ಯರ ಮನೆ—

ಸಾತ್ವಿಕ ಗುಣ ಸಂಪೂರ್ಣವಾಗಿ ಮರೆಯಾಗಿ ತಮೋಗುಣ ತಾಂಡವವಾಡುತ್ತಿದೆ.

ಒಳ್ಳೆಯವರೆಲ್ಲಾ ಕೆಟ್ಟವರಾಗಿದ್ದಾರೆ.

ಮನೆಯೋ ಅಥವಾ ರಣರಂಗವೋ ಎನ್ನುವ ಸಂದೇಹ ಮೂಡಿದೆ.

ಮುನಿತಾಯಪ್ಪನ ಮನೆ—

ಮುನಿತಾಯಪ್ಪ ಹಾಸಿಗೆ ಹಿಡಿದಿದ್ದಾನೆ.

ಅವನ ಯಕ್ಷಿಣೀ ದೇವತೆಗಳು ಅವನನ್ನು ತೊರೆದು ಹೋಗಿದ್ದಾರೆ. ಅವನ ಶಕ್ತಿ ಉಡುಗಿ ಹೋಗಿದೆ.

ಅವನ ಹಲ್ಲುಗಳು ಉದುರಿವೆ.

ಅವನ ಹೆಂಡತಿಗೆ ಮಂಕು ಹಿಡಿದಿದೆ.

ಅವನ ಸರ್ವನಾಶವಾಗಿದೆ.

ನಾಲ್ಕು ಮನೆಯ ನಾಶಕ್ಕೆ ಕಂಕಣತೊಟ್ಟಿದ್ದಾನೆ ಭದ್ರಯ್ಯ. ಅವನ 'ಶಾಕಿನಿ' ನಾಲ್ಕು ಮನೆಗೂ ಕಾಲಿಟ್ಟು ನಾಟ್ಯವಾಡುತ್ತಿದ್ದಾಳೆ-ರುದ್ರನಾಟ್ಯ! ಅವಳ ನಿಗಿನಿಗಿ ಗೆಜ್ಜೆಯ ರಣಝೇಂಕಾರಕ್ಕೆ ಆ ನಾಲ್ಕು ಮನೆಯ ಸ್ತೋತ್ರ ಭೀಕರ ನಿಟ್ಟುಸಿರಿನ ಗಾನ ಕೂಡಿಕೊಂಡಿದೆ. ಆಯಾಸದ ಬೇಗೆಗೆ ಕಣ್ಣೀರಿನ ಪನ್ನೀರು ತಪ್ಪೆರಚುತ್ತಿದೆ.

ಇನ್ನು ರುದ್ರನಾಟ್ಯದ ತಿಲ್ಲಾನ – ಅಲರಿಪುಗಳು ಒಂದೊಂಥಾಗಿ ಪ್ರಾರಂಭವಾಗಬೇಕು. ಅದರ ಪ್ರಥಮವೆಂಬಂತೆ ನರಸಮ್ಮನ 'ಮಸಣದ ಯಾತ್ರೆ'ಯ ಪೂರ್ವ ದೃಶ್ಯ ಪ್ರಾರಂಭವಾಗಿದೆ. ಅತ್ತಿತ್ತ ತೂಗಾಡುವ 'ತಿಲ್ಲಾನ ಗತಿ' ನರಸಮ್ಮನನ್ನು ಬದುಕು – ಸಾವಿನತ್ತ ಓಲಾಡಿಸುತ್ತಿದೆ ಗಾಳಿಯ ದೀಪದಂತೆ.

ದೀಪ ಬೆಳಗುತ್ತಿತ್ತು – ವಿದ್ಯುದ್ದೀಪ ಅಂಗಳದಲ್ಲಿ. ಶಂಕರಶಾಸ್ತ್ರಿಗಳು ಪತ್ನಿಯ ಸಹಾಯದಿಂದ ಅದೇ ತಾನೆ ಪೂಜಾಮಂದಿರಕ್ಕೆ ಹೋಗಿ ಕುಳಿತರು. ಕುಳಿತೊಡನೆ ಧ್ಯಾನಾಸಕ್ತರಾದರು. ಮೈ ಮರೆತರು.

ಮೈ ಮರೆತಿದ್ದ ವೆಂಕಟೇಶಯ್ಯನೂ. ಇನ್ನು ನರಸಮ್ಮನ ಸ್ಮಶಾನ ಯಾತ್ರೆಗೆ ಸಿದ್ಧಗೊಳಿಸಬೇಕಲ್ಲವೆ ? ಆ ವಿಷಯವೇ ಅವನ ಮನಸ್ಸಿನ ತುಂಬ.

ಮನಸ್ಸಿನ ತುಂಬ ಮಹಾದೇವನನ್ನೇ ತುಂಬಿಕೊಂಡು ಮೊರೆಯಿಡುತ್ತಿದ್ದರು ಸೌಭಾಗ್ಯಮ್ಮ. ಸಾವಿತ್ರಿಯ ಸಾಹಸದಿಂದ ಸತ್ಯವಾನನು ಉಳಿದಂತೆ ಸೌಭಾಗ್ಯಮ್ಮನವರ ಪ್ರಾರ್ಥನೆಯಿಂದ ನರಸಮ್ಮ ಉಳಿಯಬೇಕಾಗಿತ್ತು.

ಉಳಿಯುವ ಆಸೆಯನ್ನೇ ಬಿಟ್ಟಿದ್ದಳು ನರಸಮ್ಮ. ಬೆಳಕೇ ಅಳಿದಂತಾಗಿತ್ತು ಅವಳ ಬದುಕಿನಲ್ಲಿ. ಬದುಕು – ಸಾವಿನ ಉಯ್ಯಾಲೆಯ ತುಯ್ದಾಟದ ರಭಸ ಹೆಚ್ಚಾಗಿತ್ತು.

ಹೆಚ್ಚಾಗಿತ್ತು ಸಭಾಪತಿಶಾಸ್ತ್ರಿಗಳ ಮನೋವೇಗ – ರೈಲಿನ ವೇಗಕ್ಕಿಂತ! ತಾವು ಕುಳಿತಿದ್ದ – ಮದರಾಸಿನ ಕಡೆಯಿಂದ ಬರುತ್ತಿದ್ದ – ಎಕ್ಸ್‌ಪ್ರೆಸ್ ಗಾಡಿ ಎಷ್ಟು ಹೊತ್ತಿಗೆ ಬೆಂಗಳೂರು ಸೇರೀತೋ ಎಂದು ಕಾತರ.

ಅಂದಿಗೆ ಹದಿನೈದು ದಿನಗಳಾಗಿತ್ತು ಊರುಬಿಟ್ಟು – ಸಭಾಪತಿ ಶಾಸ್ತ್ರಿಗಳು....

ತಿರುವಣ್ಣಾಮಲೈ ತಲಪಿದ ಮರುದಿನವೇ ಗುರುಗಳಾದ ಉಗ್ರಪ್ಪ ಸ್ವಾಮಿಗಳು ಅನುಗ್ರಹಿಸಿದರು – ಗಣಪತಿಯ ಮೂಲಮಂತ್ರವನ್ನು.

'ಲಂ' ಇತ್ಯಾದಿ ಪಂಚಪೂಜೆ; ಕರನ್ಯಾಸ; ಹೃದಯನ್ಯಾಸ; ಧ್ಯಾನ; ಪಂಚಪೂಜೆ .... ಒಂದೊಂದಾಗಿ ಮುಗಿಯಿತು.

'ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ವರವರದ ಸರ್ವ ಜನಂ ಮೆ ವಶಮಾನಯ ಸ್ವಾಹಾ'

ಮೂಲ ಮಂತ್ರೋಪದೇಶವಾಯಿತು.

ಉಗ್ರಪ್ಪಸ್ವಾಮಿಗಳು ಮಣ್ಣಿನಲ್ಲೊಂದು ಗಣೇಶನ ಮೂರ್ತಿಯನ್ನು ಮಾಡಿದರು. ಶಾಸ್ತ್ರಿಗಳು ಆ ಮೂರ್ತಿಯ ಮುಂದೆ ಮೂರು ದಿನಗಳ ಕಾಲ ಏಕಾಗ್ರಚಿತ್ತದಿಂದ ಕುಳಿತರು – ಪ್ರಾಣ ಪ್ರತಿಷ್ಠಾಪನ ಜಪಕ್ಕಾಗಿ. ನಾಲ್ಕ ನೆಯ ದಿನ ಭೀಕರಾಕೃತಿಯ ಗಣಪತಿ ಸಾಕಾರನಾಗಿ ಕಾಣಿಸಿಕೊಂಡ. ಬೆಚ್ಚಿ ಕೂಗಿಕೊಂಡರು ಶಾಸ್ತ್ರಿಗಳು. ಮರುಕ್ಷಣದಲ್ಲಿಯೇ ಅವರ ಬಾಯಿ ಕಟ್ಟಿತು. ಆನೆಯೊಂದು ಘೀಳಿಟ್ಟು ಸೊಂಡಲಿನಿಂದ ಶಾಸ್ತ್ರಿಗಳ ತಲೆಯ ಮೇಲೆ ಹೊಡೆ ದಂತಾಯಿತು. ಹಾಗೆ ಹೊಡೆದಾಗ ಬಂದ ಶಬ್ದ ಮದ್ದಲೆಯ ಸದ್ದಿನಂತೆ– ತಬಲದ 'ಛಾಪು' ಕೇಳಿಸಿದಂತೆ ಕೇಳಿಸಿತು.

ಎರಡು ಕ್ಷಣಗಳ ಬಳಿಕ ಶಾಸ್ತ್ರಿಗಳಿಗೆ ಪ್ರಜ್ಞೆ ಬಂದಿತು. ಅವರ ಧಮನಿ ಧಮನಿಗಳಲ್ಲಿ ನವರಕ್ತ ಸಂಚಾರವಾಯಿತು. ಮನಸ್ಸು ಉತ್ಸಾಹದಿಂದ ಉರಿಯಿತು.

ಪ್ರಾಣ ಪ್ರತಿಷ್ಠೆಯಾಯಿತು. ಶಾಸ್ತ್ರಿಗಳಿಗೆ ಗಣಪತಿ ಒಲಿದಿದ್ದ. ಅವರು ಅವನ ಒಲವಿಗೆ ಪ್ರಾಣವನ್ನೇ ಪಣವಾಗಿ ಒಡ್ಡಿದರು.

"ಅಯ್ಯಾ, ಇಂದಿನಿಂದ ಇನ್ನು ಎಂಟು ದಿನ 'ಮ' ಪಂಚಗಳಿಂದ ಗಣಪತಿಯನ್ನು ಪೂಜಿಸಬೇಕು. ಇದೇ 'ಎಡ ಮುರಿ' ರೂಢಿ"

"ಗುರು ಚಿತ್ತ ...."

ಮದ್ಯ ಮಾಂಸಾದಿ 'ಮ' ಪಂಚಗಳನ್ನು ಹೇಗೋ ಸರಬರಾಯಿ ಮಾಡಿದರು ಉಗ್ರಪ್ಪಸ್ವಾಮಿಗಳು. ನಿತ್ಯ ಭಯಂಕರ ಪೂಜೆ ಪ್ರಾರಂಭವಾ ಯಿತು. 'ಮ' ಪಂಚಗಳ ನೈವೇದ್ಯ ಗಣಪತಿಗೆ ಸಂದಿತು. ಸಾಧನಾಮಗ್ನ ರಾದ ಶಾಸ್ತ್ರಿಗಳು ಬ್ರಾಹ್ಮಣ್ಯವನ್ನು ಮರೆತು ನೈವೇದ್ಯವಾದ ಗಣಪತಿ ಪ್ರಸಾದ ವನ್ನು ಅನುದಿನ ಸ್ವೀಕರಿಸಿ ತೃಪ್ತರಾದರು.

ಅಷ್ಟವಿಧ ಗಣಪತಿ ಮಹಿಮಾ ಸಿದ್ಧಿ ಎಂಟು ದಿನಗಳ ಭಯಂಕರ ಪೂಜೆಯಿಂದ ಶಾಸ್ತ್ರಿಗಳ ಕರಗತವಾಯಿತು.

ಮುಂದಿನ ಎರಡು ದಿನಗಳಲ್ಲಿ ಕೆಲವು ರಹಸ್ಯ ಮಂತ್ರಗಳನ್ನೂ, ಶಕ್ತಿ ಸಂಚಯನ ಮೂಲಿಕೆಗಳ ವಿಷಯವನ್ನೂ ಸ್ವಾಮಿಗಳು ಉಪದೇಶಿಸಿದರು.

"ಅಯ್ಯಾ, ನಿನಗಿನ್ನು ಗಣಪತಿ ಪ್ರಸನ್ನನಾಗಿದ್ದಾನೆ. ಇನ್ನು ಮೇಲೆ ನೀನೇ ಗಣಪತಿ – ಗಣಪತಿಯೇ ನೀನು. ನೀನು ಗಣಪತಿಯ ಭಕ್ತ – ಗಣಪತಿ ನಿನ್ನ ಭಕ್ತ. ನೀನು ಗಣಪತಿಯ ಸೇವಕ – ಗಣಪತಿಯು ನಿನ್ನ ಸೇವಕ. ಗಣಪತಿ ನಿನ್ನ ಯಜಮಾನ – ನೀನು ಗಣಪತಿಯ ಯಜಮಾನ. ನೀನೇ ಗಣಪತಿ – ಗಣಪತಿಯೇ ನೀನು !"

ಶಾಸ್ತ್ರಿಗಳು ಉಗ್ರಪ್ಪಸ್ವಾಮಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿದರು.

"ಸಾಸಿವೆಯ ಸುಲಭ ಸುಖಕ್ಕೆ ಸಾಗರದಷ್ಟು ದುಃಖ. ಒಂದು ಸುಖದ ಮಿಂಚು ಮಿನುಗಲು ಮುತ್ತಿ ಬರುವುದು ಹತ್ತು ಯುಗದ ಕತ್ತಲು. ನಿಮಿಷದ ಅನೀತಿಯ ಸಂತೋಷಕ್ಕೆ ಯುಗ ಯುಗಾಂತರಗಳ ತೀರದ ಸಂತಾಪ. ದಾನವನಾಗುವುದು ಅತಿ ಸುಲಭ; ದೇವತೆಯಾಗುವುದು ಮಹಾ ಕಷ್ಟ. ಸುಲಭವನ್ನಪ್ಪಿ ಸುಖದ ಸುಳಿಯಲ್ಲಿ ಮೈ ಮರೆತರೆ ಅಂತ್ಯದಲ್ಲಿ ಸುಯ್ಲಿಡುತ್ತಾ ಸುಟ್ಟು ಸುರುಟಿಕೊಳ್ಳುವೆ. ಮುಂದಿನ ಜನ್ಮಗಳಲ್ಲಿ ಸೂಕರನಾಗಿ, ಸೂಕಳನಾಗಿ, ಸೂಗನಾಗಿ ಹುಟ್ಟಿ ಬಾಧೆ ಪಡುವೆ. ಲೋಕ ಕಂಟಕನಾಗಿ ಬಾಳಿ ಪಾಪದ ಬುತ್ತಿಯನ್ನು ಕಟ್ಟಿಕೊಂಡು ಪ್ರಯಾಣ ಬೆಳೆಸಬೇಡ. ಜನನ–ಮರಣಗಳೆಂಬ ಸಂಸಾರ ಚಕ್ರದಲ್ಲಿ ಬುಗುರಿಯಂತೆ ತಿರುಗಿ ತಿರುಗಿ ಬಳಲಬೇಡ. ಪ್ರಪಂಚವು ಕೆಲಸ ಮಾಡುವುದಕ್ಕಾಗಿ; ಭೋಗ ಪಡುವುದಕ್ಕಾಗಿ ಅಲ್ಲ ಒಲವೇ ನಿನ್ನ ಬಲವಾಗಲಿ. ಲೋಕಕಲ್ಯಾಣವೇ ನಿನ್ನ ಜೀವನದ ಗುರಿಯಾಗಲಿ. ದೇವತೆಯಾಗುವುದೇ ನಿನ್ನ ಉದ್ದೇಶವಾಗಲಿ"

ಉಗ್ರಪ್ಪಸ್ವಾಮಿಗಳು ಅಗಲುವ ಸಮಯದಲ್ಲಿ ಬುದ್ಧಿವಾದ ಹೇಳಿದರು. ತಾವು ಮಾಡಿದ ವಿಘ್ನೇಶ್ವರನ ಮಣ್ಣಿನ ಮೂರ್ತಿಯನ್ನು ಶಾಸ್ತ್ರಿಗಳಿಗೇ ಕೊಟ್ಟು—

"ಈ ಮೂರ್ತಿಯಲ್ಲಿ ನಿನ್ನ ಪ್ರಾಣ ಪ್ರತಿಷ್ಠೆಯನ್ನು ಮಾಡಿದ್ದೀಯೆ. ಆದ್ದರಿಂದ ಇದನ್ನು ಜೋಪಾನವಾಗಿ ಕಾಪಾಡು. ಎರಡು ಹೊತ್ತೂ ಪೂಜೆ ಸಲ್ಲಿಸು. ನಿನಗೆ ಸರ್ವಾಭೀಷ್ಟ ಸಿದ್ಧಿಯಾಗುತ್ತದೆ." ಎಂದರು.

ಸಭಾಪತಿಶಾಸ್ತ್ರಿಗಳು ಎರಡು ಕೈಗಳನ್ನೂ ನೀಡಿ ಭಕ್ತಿ-ವಿನಯಗಳಿಂದ ಗಣಪತಿಯ ಮೂರ್ತಿಯನ್ನು ಗುರುವಿನಿಂದ ತೆಗೆದುಕೊಂಡರು.

" ಹೊರಡು ಇಂದೇ ಹೊರಡು. ಈಗಲೇ ಹೊರಡು. ಅಲ್ಲಿ ನಾಲ್ಕು ಮನೆಯ ಇರುಳು ನಿನ್ನ ಬೆಳಕಿಗಾಗಿ ಬಯಸಿ ಹಂಬಲಿಸುತ್ತಿದೆ "

ಉಗ್ರಪ್ಪಸ್ವಾಮಿಗಳಿಗೆ ಇನ್ನೊಮ್ಮೆ ನಮಸ್ಕಾರ ಮಾಡಿ ಶಾಸ್ತ್ರಿಗಳು ಅಲ್ಲಿಂದ ಹೊರಟರು. ನೇರವಾಗಿ ಪಶುಪತಿ ಅಯ್ಯರ್‌ರವರ ಮನೆಗೆ ಬಂದು, ಅವರಿಂದ ರೈಲ್ವೆ ಟಿಕೀಟಿಗಾಗಿ ಹಣ ಪಡೆದು ತಿರುವಣ್ಣಾಮಲೈಯನ್ನು ಬಿಟ್ಟರು-ಕೊನೆಯ ಬಾರಿಗೆ ಅರುಣಾ ಚಲೇಶ್ವರನಿಗೆ ನಮಸ್ಕಾರ ಮಾಡಿ.

ರೈಲು ಕಾಟ್ಪಾಡಿ ಜಂಕ್ಷನ್ ಸೇರಿತು. ಅಲ್ಲಿಂದ ಮದರಾಸು-ಬೆಂಗಳೂರಿನ ಎಕ್ಸ್‌ಪ್ರೆಸ್ ಗಾಡಿಯಲ್ಲಿ ಕುಳಿತುದಾಯಿತು. ಯಾವ ಪರಿವೆಯೂ ಇಲ್ಲದೆ, ಹೊಗೆಯುಗುಳುತ್ತಾ ರೈಲು ವೇಗವಾಗಿ ಓಡಿತು-ಬೆಂಗಳೂರಿನ ಕಡೆಗೆ. ರೈಲಿನ ವೇಗಕ್ಕಿಂತ ಹೆಚ್ಚಾಗಿತ್ತು ಶಾಸ್ತ್ರಿಗಳ ಮನೋವೇಗ.

' ನಾಲ್ಕು ಮನೆಯ ಇರುಳು ನಿನ್ನ ಬೆಳಕಿಗಾಗಿ ಬಯಸಿ ಹಂಬಲಿಸುತ್ತಿದೆ '

ಗುರುಗಳು ನುಡಿದಿದ್ದರು ಜ್ಞಾನದೃಷ್ಟಿಯಿಂದ.

ನಾಲ್ಕು ಮನೆ........

ಒಂದಂತೂ ತಮ್ಮ ಮನೆ. ಇನ್ನೊಂದು ವೆಂಕಟೇಶಯ್ಯನ ಮನೆ ಇರಬೇಕು. ಉಳಿದೆರಡು ಮನೆಗಳು ಯಾವುವು ?

ಬಗೆಹರಿಯದ ಯೋಚನೆ ಸಾಗಿತು-ರೈಲು ಸಾಗಿದಂತೆ.

ಕೊನೆಗೊಮ್ಮೆ ಬೆಂಗಳೂರು ಬಂದಿತು-ರೈಲು ಸೇರಬೇಕಾದ ಊರು, ತಾನು ಸೇರಬೇಕಾದ ಊರು-ಬೆಂಗಳೂರು.

ಕಾತರದಿಂದ, ಕಳವಳದಿಂದ ಇಳಿದರು ಶಾಸ್ತ್ರಿಗಳು. ಟಿಕೇಟು ಕೊಟ್ಟು ಪ್ಲಾಟ್‌ಫಾರಂನಿಂದ ಹೊರಬಂದರು. ಮನೆಯ ಗುರುತು ಹೇಳಿ ಟ್ಯಾಕ್ಸಿಯಲ್ಲಿ ಕುಳಿತರು.

" ಸೌಭಾಗ್ಯಾ....ಸೌಭಾಗ್ಯಾ.... "

ಟ್ಯಾಕ್ಸಿ ನಿಂತೊಡನೆ, ಛಂಗನೆ ಚಿಮ್ಮಿ, ಮನೆಯ ಆವರಣಕ್ಕೆ ಬಂದು ಕೂಗಿಕೊಂಡರು ಶಾಸ್ತ್ರಿಗಳು. ಗಂಡನ ದನಿ ಕೇಳಿಸಿದೊಡನೆ ಸಾವಿರ ದೀಪಗಳ ಪ್ರಕಾಶ ಒಮ್ಮೆಗೇ ಮೂಡಿತು ಸೌಭಾಗ್ಯಮ್ಮನವರ ಮುಖದಲ್ಲಿ.

ಯಮನನ್ನು ಎದುರಿಸಲು ಸಾವಿರ ಜನ ಸುರ ಸೈನಿಕರು ಬಂದಂತಾಯಿತು ವೆಂಕಟೇಶಯ್ಯನಿಗೆ.

" ಮೊದಲು ಟ್ಯಾಕ್ಸಿಯವನಿಗೆ ಬಾಡಿಗೆ ಕೊಟ್ಟು ಕಳಿಸು "

ಎಂದರು ಸಭಾಪತಿಶಾಸ್ತ್ರಿಗಳು.

ಹಣ ತರಲು ಸೌಭಾಗ್ಯಮ್ಮ ಒಳಗೆ ಹೋಗುವಷ್ಟರಲ್ಲಿ, ವೆಂಕಟೇಶಯ್ಯ ತನ್ನ ಜೇಬಿನಿಂದಲೇ ತೆಗೆದುಕೊಟ್ಟ.

" ಸರಿ, ಮೊದಲು ಕೈಕಾಲು ತೊಳೆಯುವುದಕ್ಕೆ ನೀರು, ಆಮೇಲೆ ಕರ್ಪೂರಾರತಿ ತೆಗೆದುಕೊಂಡು ಬಾ "

ಹಾಗೆಯೇ ಮಾಡಿದರು ಸೌಭಾಗ್ಯಮ್ಮ. ಶಾಸ್ತ್ರಿಗಳು ಗಣಪತಿಗೆ ಕರ್ಪೂರಾರತಿ ಬೆಳಗಿ ಒಳಗೆ ನಡೆದರು.

ಅದುವರೆಗೆ ನಡೆದ ದುರ್ಘಟನೆಗಳನ್ನೆಲ್ಲಾ ಒಂದೊಂದೇ ವಾಕ್ಯದಲ್ಲಿ ಹೇಳಿ ಮುಗಿಸಿದ ವೆಂಕಟೇಶಯ್ಯ.

" ಸರಿ, ಇನ್ನೇನೂ ಹೆದರಬೇಕಾಗಿಲ್ಲ. ಮೊದಲು ನೀನು ಹೋಗಿ ಡಾಕ್ಟರನ್ನು ಕರೆದುಕೊಂಡು ಬಾ....ಬೇಗ ಹೊರಡು "

ಮರುಮಾತಾಡದೆ ವೆಂಕಟೇಶಯ್ಯ ಹೊರಟುಬಿಟ್ಟ.

ಶಾಸ್ತ್ರಿಗಳು ತಣ್ಣೀರಿನ ಸ್ನಾನಮಾಡಿ, ಒದ್ದೆ ಬಟ್ಟೆಯನ್ನೇ ಉಟ್ಟು ಗಣಪತಿಯ ಪೂಜೆಗೆ ಆರಂಭಿಸಿದರು. ಕೇವಲ ಅರ್ಧ ಗಂಟೆಯಲ್ಲಿ ಅರ್ಚನಾದಿಗಳು ಮುಗಿದವು. ಅನಂತರ ಎದ್ದು ಬಂದು, ನರಸಮ್ಮನ ಮುಖಕ್ಕೆ ಗಣಪತಿಯ ' ತೀರ್ಥ 'ವನ್ನು ಪ್ರೋಕ್ಷಿಸಿದರು ಮೂರು ಬಾರಿ. ಹಾಗೆಯೇ ಕೋಣೆಯ ಬೀಗ ತೆಗೆಸಿ, ರುಕ್ಮಿಣಿಗೂ ತೀರ್ಥ ಪ್ರೋಕ್ಷಣೆ ಮಾಡಿದರು.

" ಇನ್ನು ಹೊರಗೆ ಬಾಮ್ಮ ರುಕ್ಕು. ಯಾರಿಗೂ ಹೆದರಬೇಕಾಗಿಲ್ಲ!"

ಎಂದು ಧೈರ್ಯ ಹೇಳಿ, ಅವಳನ್ನು ಕರೆದುಕೊಂಡು ಗಣಪತಿಯ ಮೂರ್ತಿಯ ಬಳಿಗೆ ಬಂದು ನಮಸ್ಕಾರ ಮಾಡಿಸಿದರು. ಸಮಸ್ತ ಪೀಡಾ ಪರಿಹಾರ ಮಂತ್ರವನ್ನು ಉಚ್ಚರಿಸಿ, ಮೂರು ಬಾರಿ ಅವಳ ಮುಖಕ್ಕೆ ನೀರು ಚಿಮುಕಿಸಿ ' ಮೊರೆ ' ಹಾಕಿದರು.

ರುಕ್ಮಿಣಿ ಅಣ್ಣನ ಕಾಲು ಮುಟ್ಟಿ ನಮಸ್ಕರಿಸಿದಳು.

" ಸದಾ ಸುಖೀ ಭವ " ಎಂದು ಹರಿಸಿದರು ಶಾಸ್ತ್ರಿಗಳು.

ಅಷ್ಟರಲ್ಲಿ ಡಾಕ್ಟರೊಡನೆ ಬಂದ ವೆಂಕಟೇಶಯ್ಯ. ಕೇವಲ ಕಾಲು

ಗಂಟೆಯಲ್ಲಿ ನರಸಮ್ಮನ ಜ್ವರ ಇಳಿಮುಖವಾಗಿತ್ತು. ಡಾಕ್ಟರು ಇಂಜಕ್ಷನ್ ಚುಚ್ಚಿ, ಔಷಧಿ ಕೊಟ್ಟು ಹಿಂತಿರುಗಿದರು.

ಗೂಡಿನಲ್ಲಿದ್ದ ಅಲಾರಂ ಗಡಿಯಾರ ಒಂಬತ್ತು ಗಂಟೆ ತೋರಿಸಿತು.

ಶಾಸ್ತ್ರಿಗಳು ವೆಂಕಟೇಶಯ್ಯನನ್ನು ಕರೆದುಕೊಂಡು ಸುದರ್ಶನಯ್ಯಂಗಾರ್ಯರ ಮನೆಗೆ ಬಂದರು. ನಿಶ್ಶಬ್ದವಾಗಿ ಆವರಣವನ್ನು ಹೊಕ್ಕು, ನಾಲ್ಕೂ ಕಡೆಗೂ ನೀರು ಚಿಮುಕಿಸಿ ಮನೆಯೊಳಗಡೆಗೆ ಬಂದರು. ಯಾರೋ ಬಂದರೆಂಬ ರೋಷದಿಂದ ಅಂಗಳಕ್ಕೆ ಧಾವಿಸಿದ ಸುದರ್ಶನಯ್ಯಂಗಾರ್ಯರು ಕೆಂಗಣ್ಣಿನಿಂದ ಶಾಸ್ತ್ರಿಗಳನ್ನು ದುರುಗುಟ್ಟಿ ನೋಡಿದರು. ಮರುಕ್ಷಣದಲ್ಲೇ ಶಾಸ್ತ್ರಿಗಳು ಅವರ ಮುಖಕ್ಕೆ ನೀರೆರಚಿ ಮುಂದೆ ಸಾಗಿದರು. ವೈದೇಹಮ್ಮನವರಿಗೂ ಅಲಮೇಲುವಿಗೂ ಉದಕ ಪ್ರೋಕ್ಷಣೆಮಾಡಿ, ಮೌನವಾಗಿ ಅಲ್ಲಿಂದ ಹಿಂತಿರುಗಿದರು – ಮನೆ ಸೇರಿದರು.

ಒಂದು ಗಂಟೆಯ ಮೊದಲು ಗಾಳಿಯ ದೀಪವಾಗಿದ್ದ ನರಸಮ್ಮನ ಜೀವ ಇದೀಗ ಸುರಕ್ಷಿತವಾಗಿತ್ತು. ರುಕ್ಮಿಣಿ ಎಲ್ಲೆಲ್ಲೂ ಓಡಾಡಬಹುದಾಗಿತ್ತು. ಆನಂದ ಅದೃಶ್ಯವಾಗಿದ್ದ ಮನೆಯಲ್ಲಿ ಮತ್ತೆ ಪರಮಾನಂದದ ಹೊಳೆಯೇ ಹರಿಯಿತು.

"ಇವತ್ತು ಎಲ್ಲರೂ ಒಟ್ಟಿಗೇ ಕುಳಿತು ಊಟಮಾಡೋಣ. ಅಮ್ಮ ಬಡಿಸಲಿ....ಅಮ್ಮನ ಕೈ ಊಟ ತಿಂದು ಹದಿನೈದು ದಿನಗಳಾಯಿತು."

ಎನ್ನುತ್ತಾ ಸಭಾಪತಿಶಾಸ್ತ್ರಿಗಳು ತಂದೆಯನ್ನು ಕರೆಯಲು ಪೂಜಾ ಮಂದಿರಕ್ಕೆ ನಡೆದರು. ಶಂಕರಶಾಸ್ತ್ರಿಗಳು ಇನ್ನೂ ಧ್ಯಾನಾಸಕ್ತರಾಗಿಯೇ ಇದ್ದರು. ಸದ್ಯಕ್ಕೆ ಎಚ್ಚರಗೊಳ್ಳುವಂತಿರಲಿಲ್ಲ. ತಂದೆಯ ಧ್ಯಾನ ಭಂಗ ಮಾಡಲು ಮನಸ್ಸಿಲ್ಲದೆ ಸಭಾಪತಿಶಾಸ್ತ್ರಿಗಳು ಹಿಂತಿರುಗಿದರು.

ಎಲ್ಲರೂ ಒಟ್ಟಿಗೇ ಊಟಕ್ಕೆ ಕುಳಿತರು. ಕಳೆದ ಹದಿನೈದು ದಿನಗಳಲ್ಲಿ ನಡೆದ ಸಂಗತಿಯು ವರದಿಯಾಯಿತು. ಸೌಭಾಗ್ಯಮ್ಮನವರು ವೈದೇಹಮ್ಮನವರ ಕಷಾಯದ ಪವಾಡವನ್ನು ಬಹು ರಸವತ್ತಾಗಿ ಬಣ್ಣಿಸಿದರು. ವೆಂಕಟೇಶಯ್ಯ ಸುದರ್ಶನಯ್ಯಂಗಾರ್ಯರ ಮನೆಯಲ್ಲಿ ತನಗಾದ ಅನುಭವವನ್ನು ನಗುನಗುತ್ತಾ ವಿವರಿಸಿದ. ಮುನಿತಾಯಪ್ಪನ ಮಾತೂ ಬಂದಿತು. ಅವನ ಸ್ಥಿತಿಯನ್ನು ಉತ್ತಮ ಪಡಿಸಲು ಸಾಧ್ಯವಿಲ್ಲವೇ ಎಂಬ ಪ್ರಶ್ನೆ ಎದ್ದು ನಿಂತಿತು.

"ನನ್ನಿಂದಾಗುವಷ್ಟನ್ನೂ ಮಾಡುತ್ತೇನೆ"

ಎಂದು ಭರವಸೆಯಿಂದ ನುಡಿದರು ಶಾಸ್ತ್ರಿಗಳು.

ಊಟ ಮುಗಿಯಿತು. ಗಂಟೆ ಹತ್ತು ಮೀರಿತು.

ಆ ರಾತ್ರಿ ರುಕ್ಮಿಣಿಗೆ ಆವೇಶ ಬರಲಿಲ್ಲ. ಅದನ್ನು ಕಂಡು ಸೌಭಾಗ್ಯಮ್ಮನಿಗೆ ತುಂಬಾ ಸಂತೋಷವಾಯಿತು....'ಇಂದು ನಿಜವಾಗಿಯೂ ಶುಭ ದಿನ' – ಎಂದು ಅವರು ಹತ್ತಾರು ಬಾರಿ ಹೇಳಿಕೊಂಡರು.

ಗಂಟೆ ಹನ್ನೊಂದಾಯಿತು....ಹನ್ನೆರಡಾಯಿತು....

ಶಂಕರಶಾಸ್ತ್ರಿಗಳು ಧ್ಯಾನ ಸಮಾಧಿಯಿಂದ ಎಚ್ಚರಗೊಳ್ಳಲಿಲ್ಲ. ಎಲ್ಲರಿಗೂ ಮಲಗಲು ಹೇಳಿ, ತಾವು ಮಾತ್ರ ಪೂಜಾಮಂದಿರದ ಬಾಗಿಲಲ್ಲಿಯೇ ಕುಳಿತರು ಸಭಾಪತಿಶಾಸ್ತ್ರಿಗಳು. ಕುಳಿತಂತೆಯೇ ಆಯಾಸದಿಂದ ಅವರೂ ಕಣ್ಣುಮುಚ್ಚಿದರು. ಎಚ್ಚರವಾದಾಗ ಬೆಳಗಿನ ಐದು ಗಂಟೆಯಾಗಿತ್ತು. ಆದರೂ ಶಂಕರಶಾಸ್ತ್ರಿಗಳು ಮಾತ್ರ ಇನ್ನೂ ಧ್ಯಾನಾಸಕ್ತರಾಗಿಯೇ ಕುಳಿತಿದ್ದರು.

ಮೂಡಲ ಬಾನಂಗಣದಲ್ಲಿ ಕಂಗೊಳಿಸಿತು ಅರುಣ ಕಿರಣ. ಉಷೆಗಳೆದ ಕುರುಹಾಗಿ ಶೀತಲ ಪವನ ಪ್ರವಾಹ ಮೃದುವಾಗಿ ಜಾರಿಹೋಯಿತು. ಆ ಮನೋಹರ ವಾತಾವರಣದಲ್ಲಿ ಶಂಕರಶಾಸ್ತ್ರಿಗಳ ಮುಖ ದೇದೀಪ್ಯಮಾನವಾಗಿ ಬೆಳಗಿತು – ಮರುಕ್ಷಣದಲ್ಲೇ ಮಾಯವಾಯಿತು – ಸೂರ್ಯನು ರಾಹುಗ್ರಸ್ತನಾಗಿ ದೂಸರತೆ ಪಸರಿಸಿದಂತೆ.

ಕ್ಷಣಮಾತ್ರದ ಆ ಪರಿವರ್ತನೆಯನ್ನು ಕಂಡು ಶಾಸ್ತ್ರಿಗಳು ಬೆರಗಾದರು. ಕೂಡಲೇ ಅವರ ಅಂತರಂಗದಲ್ಲಿ ಕಲಮಲವಾಯಿತು. ಎದ್ದು ತಂದೆಯ ಬಳಿಗೆ ಧಾವಿಸಿದರು. ಸ್ವಲ್ಪಹೊತ್ತು ಅವರ ಮುಖವನ್ನೇ ನೋಡಿದರು. ಉಸಿರಿನ ವೇಗ ಕಡಿಮೆಯಾಗಿದ್ದುದು ಸ್ಪಷ್ಟವಾಗಿ ಗೋಚರಿಸಿತು.

ಎಣ್ಣೆ–ಬತ್ತಿಗಳಿದ್ದರೂ ದೇವರ ಮುಂಗಡೆ ಇದ್ದ ನಂದಾದೀಪ ಆರಿಹೋಯಿತು. ತಟ್ಟನೆ, ಧ್ಯಾನಾಸಕ್ತರಾಗಿದ್ದ ಶಂಕರಶಾಸ್ತ್ರಿಗಳೂ ಹಿಂದಕ್ಕೆ ವಾಲಿ ಕೆಳಗುರುಳುವುದರಲ್ಲಿದ್ದರು. ಆದರೆ ಅಷ್ಟರಲ್ಲಿ ಸಭಾಪತಿಶಾಸ್ತ್ರಿಗಳು ಅವರನ್ನು ಹಿಡಿದುಕೊಂಡು, ಕೆಳಗೆ ಮಲಗಿಸಿದರು........ಕಮಲಮ್ಮನವರ ಮಾಂಗಲ್ಯ ಕಡಿದುಹೋಗಿತ್ತು.

ಗೋಳಾಟ, ಹಲುಬಾಟ ಒಂದೇ ಸಮನಾಗಿ ಸಾಗಿತು.

ತಾನು ವಿದ್ಯೆ ಕಲಿತು ಬಂದುದನ್ನು ಕಂಡು ಸಂತೋಷಪಡಲು ತಂದೆ

ಬದುಕಲಿಲ್ಲವಲ್ಲಾ ಎಂಬುದು ಸಭಾಪತಿಶಾಸ್ತ್ರಿಗಳ ಕೊರಗು. ತನ್ನ 'ವಿದ್ಯೆ' ಅವರನ್ನು ಬದುಕಿಸುವಷ್ಟು ಶಕ್ತಿಯುತವಾಗಿಲ್ಲವಲ್ಲ — ಎಂದುಕೊಂಡರು. 'ವಯಸ್ಸಾಯಿತು. ಆಯುಸ್ಸು ತೀರಿತು. ಅತಂಕನೂರಿಗೆ ಹೋಗುವ ಕಾಲ ಬಂದಿತ್ತು. ಹೋದರು' ಎಂದು ತನಗೆ ತಾವೇ ಸಮಾಧಾನ ಮಾಡಿ ಕೊಂಡರು.

ಒಂಬತ್ತು ಗಂಟೆಯ ವೇಳೆಗೆ ಸುದರ್ಶನಯ್ಯಂಗಾರ್ಯರು ಬಂದರು. ಅವರ ತಮೋಗುಣ ಕಳೆದು ಸತ್ವಗುಣ ಮತ್ತೆ ತುಂಬಿಕೊಂಡಿತ್ತು. ಆದರೆ ಅವರ ಹಿಂದಿನ ಮತ್ತು ಇಂದಿನ ಸ್ಥಿತಿಯನ್ನು ಪ್ರಶ್ನಿಸಲು ಯಾರಿಗೂ ಮನಸ್ಸಿ ರಲಿಲ್ಲ ವ್ಯವಧಾನವಿರಲಿಲ್ಲ.

ಶಂಕರಶಾಸ್ತ್ರಿಗಳ ಸ್ಮಶಾನಯಾತ್ರೆಗೆ ಎಲ್ಲವೂ ಸಿದ್ಧವಾಯಿತು. ವೆಂಕ ಟೇಶಯ್ಯ ತನಗೆ ಪರಿಚಿತರಾಗಿದ್ದ – ತನ್ನ ಜಾತಿಯ ಶವವಾಹಕರನ್ನು ಕರೆ ಯಲು ಹೋದಾಗ ತಿರಸ್ಕಾರದ ಮಾತುಗಳನ್ನು ಕೇಳಬೇಕಾಯಿತು.

"ಅವನ ಮಗ ವಾಮಾಚಾರ ಕಲಿಯುವುದಕ್ಕೆ ಹೋಗಿದ್ದನಂತೆ. ಅವನು ವೈದೀಕ ಬ್ರಾಹ್ಮಣನೋ ಅಥವಾ ವಾಮಾಚಾರದ ಮಾದಿಗನೋ ? ಜಾತಿಯಿಲ್ಲ, ಕುಲವಿಲ್ಲ, ಅನಿಷ್ಟ – ಭ್ರಷ್ಟ....ಅಂಥವನ ತಂದೆಯನ್ನು ಹೊರು ವುದಕ್ಕೆ ನಾವು ಬರುವುದೇ ? ನಮಗೇನು ಜಾತಿ, ಕುಲ, ಮತ, ಮಠ, ಗುರು, ಆಚಾರ—ಏನೂ ಇಲ್ಲವೆ ? ನಿಮ್ಮಂಥ ಪಾಷಂಡಿಗಳಾಗಿದ್ದರೆ ಆ ಮಾತೇ ಬೇರೆ........ನಾವಂತೂ ಬರುವುದಿಲ್ಲ"

ಎಂದು ನಿರ್ದಾಕ್ಷಿಣ್ಯವಾಗಿ ನುಡಿದುಬಿಟ್ಟರು ಜಾತಿಯ ಹಿತೈಷಿಗಳು. ಅದನ್ನು ಕೇಳಿದ ಸುದರ್ಶನಯ್ಯಂಗಾರ್ಯರು ಸಿಡಿಮಿಡಿಗೊಂಡರು. ಕೂಡಲೇ ಬಳೇಪೇಟೆಯ ಕಡೆ ನಡೆದು ನಾಲ್ಕುಮಂದಿ ಶ್ರೀ ವೈಷ್ಣವರನ್ನೇ ಕರೆತಂದರು. ಶವವನ್ನು ಸ್ಮಶಾನಕ್ಕೇ ಸಾಗಿಸಿ, ಅಂತ್ಯಕ್ರಿಯೆಗಳನ್ನು ಮುಗಿಸಿದ್ದಾಯಿತು.

ಹನ್ನೆರಡು ದಿನಗಳ ಕ್ರಿಯೆ ಮುಗಿಯುವವರೆಗೂ ಸಭಾಪತಿಶಾಸ್ತ್ರಿಗಳು ಬೇರಾವುದರ ಕಡೆಗೂ ಗಮನವೀಯಲಿಲ್ಲ. ಸುದರ್ಶನಯ್ಯಂಗಾರರೂ ವೆಂಕ ಟೇಶಯ್ಯನೂ ಅವರ ಎಲ್ಲ ಕೆಲಸಗಳಲ್ಲಿಯೂ ಸಹಾಯಕರಾಗಿ ನಿಂತರು. ಆ ಅವಧಿಯಲ್ಲಿ ನರಸಮ್ಮನಿಗೂ ಸಂಪೂರ್ಣ ಗುಣವಾಗಿ, ಆಕೆಯೂ ಮನೆಗೆಲಸ ಗಳಲ್ಲಿ ನೆರವಾಗಲು ಅನುಕೂಲವಾಯಿತು. ಪೌರೋಹಿತ್ಯಕ್ಕಾಗಿ ಕೆಚ್ಚೆದೆ ಯಿಂದ ಮುಂದೆ ಬಂದಿದ್ದ ಅಹೋಬಲರಾಯರೂ ಸಹ ಶಾಸ್ತ್ರಿಗಳಿಗೆ ಪ್ರತಿ

ಕ್ಷಣದಲ್ಲಿಯೂ ಧೈರ್ಯ ಹೇಳುತ್ತಾ, ಅವರಿಗೆ ಯಾವ ವಿಧದಲ್ಲಿಯೂ ನೋವಾಗದಂತೆ ನಯವಾಗಿ ವರ್ತಿಸುತ್ತಿದ್ದರು.

ಅಹೋಬಲರಾಯರು ಸುದರ್ಶನಯ್ಯಂಗಾರ್ಯರ ಮಿತ್ರರು. ಇಬ್ಬರದೂ ಅಕ್ಕ-ಪಕ್ಕದ ಮನೆಗಳು. ರಾಯರು ಬಹಳ ವರ್ಷಗಳ ಹಿಂದೆಯೇ ನಗರದ ಬ್ಯಾಂಕೊಂದರಲ್ಲಿ ಕೆಲಸಕ್ಕೆ ಸೇರಿ, ಇದೀಗ ಆ ಬ್ಯಾಂಕಿನ ಮಲ್ಲೇಶ್ವರಂ ಶಾಖೆಯ ಮ್ಯಾನೇಜರರಾಗಿದ್ದರು. ವಿದ್ಯಾವಂತರೂ, ವಿವೇಕಶಾಲಿಗಳೂ, ಪ್ರಗತಿ ಮನೋಭಾವನೆಯುಳ್ಳವರೂ ಆಗಿದ್ದುದರಿಂದ ಅವರಿಗೆ ಧರ್ಮದ ಹೆಸರಿನಲ್ಲಿ ಶಾಸನವಾಗಿರುವ ನೀಚ ಸಂಪ್ರದಾಯಗಳ – ಅಂಧಾನುಕರಣೆಗಳ ಬಗ್ಗೆ ತೀವ್ರವಾದ ರೋಷವಿತ್ತು. ಹಿಂದೊಮ್ಮೆ ಗ್ರಾಮೋದ್ಧಾರ ಕಾರ್ಯದಲ್ಲಿ ರಾಯರೂ ಕೂಡಿಕೊಂಡು, ಚರಂಡಿಗಳ ನೈರ್ಮಲ್ಯ, ಅಸ್ಪೃಶ್ಯರ ಕೇರಿಯನ್ನು ಶುಚಿಗೊಳಿಸುವುದು, ಅವರಮಕ್ಕಳಿಗೆ ಅಕ್ಷರ ಬೋಧಿಸುವುದು—ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದಾಗ, ಜಾತಿಯ ಹಿತೈಷಿಗಳು ಛೀಮಾರಿ ಹಾಕಿ, ಪಂಕ್ತಿಭೋಜನ ಮಠ ಪ್ರವೇಶ ಇತ್ಯಾದಿಗಳನ್ನು ಮಾಡಬಾರದೆಂದು ಬಹಿಷ್ಕಾರ ಹಾಕಿದ್ದರು. ರಾಯರು ಯಾವುದಕ್ಕೂ ಸೊಪ್ಪುಹಾಕದೆ ತಮ್ಮ ಕರ್ತವ್ಯದಲ್ಲಿ ಮಗ್ನರಾದರು. ಮನೆಯಲ್ಲಿ ನಡೆಯುವ ಶುಭಾಶುಭ ಕಾರ್ಯಗಳಿಗೆ ಜಾತಿಯ ಪುರೋಹಿತರು ಬರಲು ಹಿಂಜರಿದು ಹಿಂದೆ ನಿಂತು ತಿರಸ್ಕಾರದ ದೃಷ್ಟಿಯನ್ನು ಬೀರಿದಾಗ ರಾಯರೇ ಸ್ವತಃ ಪೌರೋಹಿತ್ಯವನ್ನು ಕಲಿತು, ತಮ್ಮ ಕೆಲಸಗಳನ್ನು ತಾವೇ ಮಾಡಿಕೊಂಡು, 'ಎಲ್ಲವನ್ನೂ ಎದುರಿಸಲು ಸಿದ್ಧನಾಗಿದ್ದೇನೆ' ಎಂಬುದನ್ನು ತೋರಿಸಿದರು. ಧರ್ಮವನ್ನೂ ಸಮಾಜವನ್ನೂ ದಿಟ್ಟತನದಿಂದ ಏಕಾಂಗಿಯಾಗಿ ನಿಂತು ಎದುರಿಸಿದ ರಾಯರನ್ನು ಕಂಡು ಜಾತಿಯ ಜನ ಮೂಗಿನ ಮೇಲೆ ಬೆರಳಿಟ್ಟುಕೊಂಡರು. 'ಎಂದಿಗೂ ಇವನು ನಮಗೆ ಸಗ್ಗುವುದಿಲ್ಲ; ಉಪಾಯದಿಂದಲೇ ಒಲಿಸಿಕೊಳ್ಳಬೇಕು' – ಎಂದು ಯೋಚಿಸಿದ ಜಾತಿ ಧರ್ಮ ಧುರೀಣರು, ಪದವೀಧರರಾಗಿ, ಸನ್ಯಾಸವನ್ನು ಸ್ವೀಕರಿಸಿ, ಮಠದ ಅಧಿಕಾರಕ್ಕೆ ಬಂದ ಹೊಸ ಗುರುಗಳ ಬಳಿ ರಾಯರ ವಿಷಯವನ್ನು ಅರಿಕೆ ಮಾಡಿಕೊಂಡು, ಅವರ ಮೇಲೆ ಹಾಕಿದ್ದ ಬಹಿಷ್ಕಾರವನ್ನು ತೆಗೆಸಿದರು. ಆದರೂ ರಾಯರು ಮಾತ್ರ ಯಾವುದಕ್ಕೂ ಗಮನ ವೀಯದೆ – ಲಕ್ಷಿಸದೆ, ತಮ್ಮ ಪಾಡಿಗೆ ತಾವು ಇರತೊಡಗಿದರು. ಜಾತಿಯ ಮೇಲಾಗಲಿ, ಧರ್ಮದ ಮೇಲಾಗಲಿ ಅವರ

ಹೃದಯದಲ್ಲಿ ಒಲವು ಬೆಳೆಯುವುದು ದುಸ್ತರವಾಗಿತ್ತು. ಆ ಬಗ್ಗೆ ಒಲವಿಗೆ ಬದಲಾಗಿ ಎಂದೂ ಆರದ ಕೆಂಡದ ಉಂಡೆಗಳು ಅವರ ವೈ ಮನದಲ್ಲಿ ಪ್ರಜ್ವಲಿಸುತ್ತಿದ್ದವು.

ರಾಯರ ವಿಷಯವೆಲ್ಲವೂ ಸುದರ್ಶನಯ್ಯಂಗಾರ್ಯರಿಗೆ ತಿಳಿದಿತ್ತು. ಎಂತಲೇ ಪ್ರಕೃತ ಸಂದರ್ಭದಲ್ಲಿ ಜಾತೀಯತೆಯ ಸರ್ಪದ ವಿಷನಾಲಗೆ ಹೊರ ಚಾಚಿದಾಗ, ಅದನ್ನು ದಿಟ್ಟತನದಿಂದ ತುಳಿದು, ಅಹೋಬಲರಾಯರನ್ನು ಕರೆತಂದರು.

ಹನ್ನೆರಡು ದಿನಗಳ ಕ್ರಿಯೆ ಸಾಂಗವಾಗಿ ನೆರವೇರಿತು. ಶಂಕರಶಾಸ್ತ್ರಿಗಳ ನಾಲ್ಕು ಮಂದಿ ಹೆಣ್ಣುಮಕ್ಕಳೂ ತಮ್ಮ ತಮ್ಮ ಸಂಸಾರದೊಂದಿಗೆ ಬಂದು ತಂದೆಯ ಅಂತ್ಯಕ್ರಿಯೆಯಲ್ಲಿ ಭಾಗವಹಿಸಿ ಹಿಂತಿರುಗಿದರು.

" ಸ್ವಾಮಿ, ಈ ನಿಮ್ಮ ಉಪಕಾರವನ್ನು ಈ ಜನ್ಮದಲ್ಲಿ ಮರೆಯುವುದು ಸಾಧ್ಯವೇ ಇಲ್ಲ "

ಎಂದು ಸಭಾಪತಿಶಾಸ್ತ್ರಿಗಳು ಅಹೋಬಲರಾಯರಿಗೆ ಕೃತಜ್ಞತೆಯನ್ನು ಸಮರ್ಪಿಸಿದರು.

" ಇದು ಉಪಕಾರವಲ್ಲ ಶಾಸ್ತ್ರಿಗಳೆ. ಮನುಷ್ಯನು ಮನುಷ್ಯನಿಗಾಗಿ ಮಾಡುವ ಕರ್ತವ್ಯ. ' ಆತ್ಮವತ್ ಸರ್ವ ಭೂತೇಷು ' ಎಂಬುದನ್ನರಿತವರಿಗೆ ಕರ್ತವ್ಯವೇ ಉಪಕಾರ ; ಉಪಕಾರವೇ ಕರ್ತವ್ಯ "

" ಜಾತಿ, ಮತ, ಸಮಾಜಗಳನ್ನು ಎದುರಿಸುವುದು ಕಷ್ಟವಿದೆ ರಾಯರೆ"

" ಎದುರಿಸಬೇಕಾದುದನ್ನು ಎದುರಿಸಲೇ ಬೇಕು. ಹಾಗೆ ಮಾಡದೆ ತಲೆಬಾಗಿದರೆ ಹೆದರುವವನ ಮೇಲೆ ಸತ್ತ ಕಪ್ಪೆಯನ್ನೆಸೆದು ಇನ್ನಷ್ಟು ಹೆದರಿಸುತ್ತಾರೆ; ಹೇಡಿಯನ್ನಾಗಿ ಮಾಡುತ್ತಾರೆ "

" ನಿಮ್ಮಂತವರ ಬೆಂಬಲವಿದ್ದರೆ ನಾನು ಏನು ಬೇಕಾದರೂ ಎದುರಿಸಬಲ್ಲೆ ರಾಯರೆ ! "

ಶಾಸ್ತ್ರಿಗಳಿಗೂ – ರಾಯರಿಗೂ ಆತ್ಮೀಯತೆ ಬೆಳೆಯಲು ಈ ಒಂದು ಮಾತೇ ಸಾಕಾಯಿತು.

" ನೀವು ಸ್ವಲ್ಪವೂ ಹೆದರಬೇಕಾಗಿಲ್ಲ ಶಾಸ್ತ್ರಿಗಳೆ. ನಿಶ್ಚಯವಾಗಿಯೂ ನಾನು ಸದಾ ನಿಮ್ಮ ಬೆನ್ನ ಹಿಂದೆಯೇ ಇರುತ್ತೇನೆ "

ಎಂದು ಆಶ್ವಾಸನೆ ನೀಡಿದರು ಅಹೋಬಲರಾಯರು.

ಅಂದಿನಿಂದ ಶಾಸ್ತ್ರಿಗಳ ಆಪ್ತ ವರ್ಗದಲ್ಲಿ ರಾಯರೂ ಒಬ್ಬರಾದರು. ಕ್ರಮೇಣ ಪರಸ್ಪರ ಅನ್ಯೋನ್ಯತೆ ಬೆಳೆಯಿತು – ಗಾಢವಾಗಿ.

ಶಂಕರಶಾಸ್ತ್ರಿಗಳು ತೀರಿಕೊಂಡ ಹದಿನೈದು ದಿನಗಳ ಬಳಿಕ ವೆಂಕಟೇಶಯ್ಯ ಗುಣಮುಖಳಾಗಿದ್ದ ನರಸಮ್ಮನನ್ನೂ ಮಕ್ಕಳನ್ನೂ ಕರೆದುಕೊಂಡು ತನ್ನ ಮನೆಗೆ ಹೊರಟು ಹೋದ. ಹೋಗುವಾಗ ನರಸಮ್ಮ ತಬ್ಬಲಿಯಂತೆ ಅತ್ತುಬಿಟ್ಟಳು – ಆ ಸ್ವರ್ಗದ ತವರು ಮನೆಯನ್ನು ಅಗಲಲಾರದೆ. ವೆಂಕಟೇಶಯ್ಯನಿಗೂ ಕಣ್ಣು ತುಂಬಿ ಬಾಯಿ ಕಟ್ಟಿತ್ತು.

"ಅಳಬೇಡ ನರಸು. ಸುಖವಾಗಿ ಹೋಗಿ ಬಾ ತಾಯಿ. ಇದು ನಿನ್ನ ಮನೆ. ಬೇಕಾದಾಗ ಬಂದು ಸುಖವಾಗಿರು. ನಾವೆಲ್ಲಾ ನಿನ್ನವರು. ನಿನ್ನ ಸುಖವೇ ನಮ್ಮ ಸುಖ. ನಗುತ್ತಾ ನೆಮ್ಮದಿಯಾಗಿರು. ಸಂತೋಷವಾಗಿ ಹೋಗಿ ಬಾ" ಎಂದು ಬೀಳ್ಕೊಟ್ಟರು ಸೌಭಾಗ್ಯಮ್ಮ.

"ಒಳ್ಳೆಯದು ವೆಂಕಟೇಶ. ಹೋಗಿ ಬಾ. ಆಗಾಗ ಬಂದು ಹೋಗುತ್ತಿರು" ಎಂದಷ್ಟೇ ನುಡಿದು ಶಾಸ್ತ್ರಿಗಳು ವೆಂಕಟೇಶಯ್ಯನನ್ನು ಕಳುಹಿಸಿಕೊಟ್ಟರು. ಅನಂತರ ಗಣಪತಿಯ ತೀರ್ಥವನ್ನು ಒಂದು ಪಾತ್ರೆಯಲ್ಲಿ ಹಾಕಿಕೊಂಡು, ಸುದರ್ಶನಯ್ಯಂಗಾರ್ಯರನ್ನೂ ಕರೆದುಕೊಂಡು ಮುನಿತಾಯಪ್ಪನ ಮನೆ ಸೇರಿದರು.

ಎಂದಿನಂತೆಯೇ ಇತ್ತು ಮುನಿತಾಯಪ್ಪನ ಮನೆಯ ಸ್ಥಿತಿ. ಆಕಡೆ ಹೆಂಡತಿ–ಈಕಡೆ ಗಂಡ ಒಂದೊಂದು ಮೂಲೆಯಲ್ಲಿ ಮುದುರಿಕೊಂಡಿದ್ದರು.

ಶಾಸ್ತ್ರಿಗಳು ಉದಕ ಪ್ರೋಕ್ಷಣೆ ಮಾಡುತ್ತಾ ಒಳಗೆ ನಡೆದರು. ಮುನಿತಾಯಪ್ಪ ಶಾಸ್ತ್ರಿಗಳ ಮುಖವನ್ನು ಗುರುತಿಸಿ ಎದ್ದು ಕುಳಿತ. ಅವನ ಮುಖಕ್ಕೂ, ಅವನ ಹೆಂಡತಿಯ ಮುಖಕ್ಕೂ ಮಂತ್ರೋದಕವನ್ನು ಎರಚಿ, ಮೌನವಾಗಿ ಹಿಂತಿರುಗಿದರು ಶಾಸ್ತ್ರಿಗಳು.

ಮರುದಿನ ಮಧ್ಯಾನ್ಹ ಮುನಿತಾಯಪ್ಪನೇ ಶಾಸ್ತ್ರಿಗಳ ಮನೆಗೆ ಬಂದ. ಆದರೆ ಶಾಸ್ತ್ರಿಗಳು ಉಗ್ರಪೂಜೆಗೆ ಕುಳಿತಿದ್ದುದರಿಂದ ಯಾರೊಡನೆಯೂ ಮಾತನಾಡುವಂತಿರಲಿಲ್ಲ. ಅವರ ಬದಲು ಸೌಭಾಗ್ಯಮ್ಮನವರೇ ಮುನಿತಾಯಪ್ಪನನ್ನು ಸ್ವಾಗತಿಸಿ, ಮಾತನಾಡಿಸಿದರು. ಕಾಫಿ–ಉಪಾಹಾರ ಕೊಟ್ಟು ಆದರಿಸಿದರು.

"ಅಯ್ಯೋನೋರ್ನ ಇವತ್ತು ನೋಡುವ ಹಾಗೆಯೇ ಇಲ್ಲವೇ ತಾಯಿ?"

"ಇಲ್ಲಪ್ಪ. ಅವರು ಯಾರಿಗೂ ಮುಖ ತೋರಿಸುವುದಿಲ್ಲ. ಮಾತೂ ಆಡುವುದಿಲ್ಲ"

"ನಾಳೆ ?"

"ನಾಳೆ ಸಾಯಂಕಾಲ ಬಾ—ನಾಲ್ಕು ಗಂಟೆಯ ಹೊತ್ತಿಗೆ ಮನೆಯಲ್ಲೇ ಇರುತ್ತಾರೆ. ಎಲ್ಲಿಗೂ ಹೋಗುವುದಿಲ್ಲ."

"ಆಗಲಿ ತಾಯಿ" ಎಂದ ಮುನಿತಾಯಪ್ಪ.

ಎರಡು ನಿಮಿಷ ಮೌನವಾಗಿದ್ದು ಅನಂತರ ಮೆಲ್ಲ ದನಿಯಲ್ಲಿ ಕೇಳಿದ—

"ಭದ್ರಯ್ಯನ ಸುದ್ದಿ ಹಾಗೇ ಬಿಟ್ಟು ಬಿಟ್ಟರಾ ತಾಯಿ ಅಯ್ಯನೋರು ?"

"ಹಾಗೆಯೇ ಬಿಡುವುದುಂಟೇನಪ್ಪ ? ಅದಕ್ಕಾಗಿಯೇ ಇವತ್ತು ಉಗ್ರಪೂಜೆ........"

ಸೌಭಾಗ್ಯಮ್ಮನ ಉತ್ತರ ಕೇಳಿ ಮುನಿತಾಯಪ್ಪನ ಮುಖದಲ್ಲಿ ಅಪೂರ್ವವಾದ ಆನಂದ ಶೋಭಿಸಿತು.

"ಸರಿ ತಾಯಿ....ನಾಳೆ ಬರ್ತೀನಿ"

ಎನ್ನುತ್ತಾ ಮುನಿತಾಯಪ್ಪ ಹೊರಡಲನುವಾದ.

ಸೌಭಾಗ್ಯಮ್ಮನವರು ಕೂಡಲೇ ಒಳಗೆ ಹೋಗಿ, ಒಂದು ಲಕೋಟೆಯನ್ನು ತಂದು—

"ಯಜಮಾನರು ಇದನ್ನ ನಿನಗೆ ಕೊಡುವುದಕ್ಕೆ ಹೇಳಿದ್ದಾರಪ್ಪ"

ಎಂದು ಹೇಳಿ ಮುನಿತಾಯಪ್ಪನ ಕೈಗಿತ್ತರು.

"ಇದೇನು ತಾಯಿ ?"

"ಏನೋ ನನಗೆ ತಿಳಿಯದಪ್ಪ. ಮನೆಗೆ ಹೋಗಿ ನಿಧಾನವಾಗಿ ನೋಡಿಕೋ" ಎಂದರು ಸೌಭಾಗ್ಯಮ್ಮ.

ಮುನಿತಾಯಪ್ಪ ಹೊರಟುಹೋದ.

ಆ ದಿನ ಸಂಪೂರ್ಣವಾಗಿ ಶಾಸ್ತ್ರಿಗಳು ಪೂಜಾಮಂದಿರದಿಂದ ಹೊರಗೆ ಬರಲೇ ಇಲ್ಲ. ಊಟವನ್ನೂ ಮಾಡಲಿಲ್ಲ. ಅವರ ಉಗ್ರಪೂಜೆ ಮುಗಿಯುವ ವೇಳೆಗೆ ಮರುದಿನ ಬೆಳಗಿನ ಆರುಗಂಟೆಯಾಗಿತ್ತು.

ಶಾಸ್ತ್ರಿಗಳಿಗೆ ಅಂದು ಸಡಗರವೋ ಸಡಗರ. ಬೇಗನೆ ಸ್ನಾನಮಾಡಿ, ನಿತ್ಯ ಕ್ರಮದ ಅರ್ಧ ಗಂಟೆಯ ಪೂಜೆ ಮುಗಿಸಿದರು. ಅನಂತರ ಉಪಹಾರ ಸ್ವೀಕರಿಸಿ, ಸುದರ್ಶನಯ್ಯಂಗಾರ್ಯರ ಮನೆಗೆ ಬಂದರು. ಬಂದೊಡನೆ—

" ಸುದರ್ಶನ, ಇವತ್ತು ಸಾಯಂಕಾಲ ನಾಲ್ಕು ಗಂಟೆಗೆ ಸರಿಯಾಗಿ ನೀನೂ ನಿನ್ನ ಮನೆಯವರೂ ನಮ್ಮ ಮನೆಯಲ್ಲಿ ಹಾಜರಾಗಿರಬೇಕು. ಖಂಡಿತವಾಗಿಯೂ ತಪ್ಪಿಸಿಕೊಳ್ಳಬೇಡ. ಇವತ್ತು ಹೇಗಿದ್ದರೂ ಭಾನುವಾರ. ಅಹೋಬಲರಾಯರನ್ನೂ ಅವರ ಮನೆಯವರನ್ನೂ ಕರೆದುಕೊಂಡು ಬಾ. ಹಾಗೆಯೇ ಮುನಿತಾಯಪ್ಪನಿಗೂ ಸುದ್ದಿ ತಿಳಿಸಿ, ಅವನನ್ನೂ ಅವನ ಹೆಂಡತಿಯನ್ನೂ ಖಂಡಿತ ಬರಹೇಳು. ಕೃಷ್ಣಮಾಚಾರ್ಯರನ್ನೂ – ನಾಮಗಿರಿಯಮ್ಮನವರನ್ನೂ ನೀನೇ ಕರೆದುಕೊಂಡು ಬಾ "

ಎಂದು ಹೇಳಿ ಹೊರಡಲನುವಾದರು.

" ಏನು ಸಮಾಚಾರ ಸಭಾಪತಿ ?"

ಸುದರ್ಶನಯ್ಯಂಗಾರ್ಯರು ಆಶ್ಚರ್ಯಚಕಿತರಾಗಿ ಕೇಳಿದರು.

" ಸಮಾಚಾರವೆಲ್ಲಾ ಆಮೇಲೆ ಗೊತ್ತಾಗುತ್ತದೆ. ನಾಲ್ಕು ಗಂಟೆಗೆ ಮುಂಚಿತವಾಗಿಯೇ ಎಲ್ಲರೊಡನೆಯೂ ಬಂದು ಸೇರು ಮರೆಯಬೇಡ "

ಎನ್ನುತ್ತಾ ಸಭಾಪತಿ ಶಾಸ್ತ್ರಿಗಳು ಅಲ್ಲಿಂದ ಹೊರಟುಬಿಟ್ಟರು. ನೇರವಾಗಿ ವೆಂಕಟೇಶಯ್ಯನ ಮನೆಗೆ ಬಂದು ಅವನಿಗೂ ಅದೇ ಮಾತುಗಳನ್ನು ಹೇಳಿದರು.

" ಮೊನ್ನೆತಾನೆ ನಿಮ್ಮ ಮನೆಯಿಂದ ವಾಪಸ್ಸು ಬಂದಿದ್ದೇವೆ. ಮತ್ತೆ ಇವತ್ತು ಏಕಣ್ಣ ? "

ಸಂಕೋಚದಿಂದ ಕೇಳಿದ ವೆಂಕಟೇಶಯ್ಯ.

" ಪರವಾಗಿಲ್ಲ ಬಾರಯ್ಯ. ಏಳು ಗಂಟೆ ಹೊತ್ತಿಗೆ ವಾಪಸ್ಸು ಬಂದು ಬಿಡುವಿಯಂತೆ. ಎಲ್ಲರನ್ನೂ ಕರೆದುಕೊಂಡು ಬಾ. ತಮಾಷೆ ನೋಡಲು ಮರೆಯಬೇಡ "

ಎನ್ನುತ್ತಾ ಸಭಾಪತಿಶಾಸ್ತ್ರಿಗಳು ಪೇಟೆಯ ಕಡೆಗೆ ಹೊರಟರು. ಚಿಕ್ಕಪೇಟೆಗೆ ಬಂದು ಒಂದು ಅಗಲವಾದ ದೊಡ್ಡ ಕನ್ನಡಿಯನ್ನು ಕೊಂಡು ಮನೆಗೆ ಹಿಂತಿರುಗುವ ವೇಳೆಗೆ ಮಧ್ಯಾಹ್ನವಾಗಿತ್ತು.

ಊಟ ಮುಗಿಸಿದ ಬಳಿಕ, ಶಾಸ್ತ್ರಿಗಳು ಅಕ್ಕಿಯನ್ನು ಸೀಯಿಸಿ ಕಪ್ಪು ತಯಾರಿಸಿದರು. ಅಂಗಳದ ಗೋಡೆಯ ಮಧ್ಯದಲ್ಲಿ ತಾವು ತಂದ ದೊಡ್ಡ ಕನ್ನಡಿಯನ್ನು ತೂಗು ಹಾಕಿ, ಅದರ ಉದ್ದದ ಅರ್ಧಕ್ಕೆ ಕಪ್ಪು ಬಳಿದರು. ಅನಂತರ ಯಾವುದೋ ಬೇರನ್ನು ತೇಯ್ದು, ಅದರ ಗಂಧವನ್ನು ಉಳಿದರ್ಧ

ಭಾಗಕ್ಕೆ ಹಚ್ಚಿದರು. ಅದರ ಮೇಲೆ ತೆಳುವಾದ ಒಂದು ಬಟ್ಟೆಯನ್ನು ಹೊದಿಸಿ, ತಮ್ಮ ಕೋಣೆಗೆ ಬಂದು ವಿಶ್ರಮಿಸಿಕೊಳ್ಳತೊಡಗಿದರು.

"ಸ್ವಲ್ಪ ಹೊತ್ತು ಮಲಗಿ ನಿದ್ರೆ ಮಾಡೀಂದ್ರೆ. ರಾತ್ರಿಯೆಲ್ಲಾ ನಿದ್ದೆ ಗೆಟ್ಟಿದ್ದೀರಿ" ಎಂದರು ಸೌಭಾಗ್ಯಮ್ಮ.

"ಇಲ್ಲ ಸೌಭಾಗ್ಯೂ. ಇವತ್ತೊಂದು ದಿನ ಕಳೆಯಲಿ. ಆಮೇಲೆ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತೇನೆ. ಅದಕ್ಕಿಂತ ಬೇರೆ ಕೆಲಸವೇ ಇಲ್ಲ"

ಎಂದು ಸಭಾಪತಿಶಾಸ್ತ್ರಿಗಳು ನಸುನಗೆ ನಕ್ಕು ನುಡಿದರು.

ಸೌಭಾಗ್ಯಮ್ಮನವರು ಹಿಂದಿನ ದಿನ ಮುನಿತಾಯಪ್ಪ ಬಂದು ಹೋದ ಸಂಗತಿಯನ್ನು ತಿಳಿಸಿದರು.

"ಅಯ್ಯೋ ಪಾಪ, ಅವನಿಗೆ ಇಲ್ಲೇ ಊಟಮಾಡಿಸಿ ಕಳಿಸಿದ್ದರೆ ಚೆನ್ನಾಗಿತ್ತು ಸೌಭಾಗ್ಯ"

"ಏನೋ ನನಗೆ ತೋಚಲಿಲ್ಲಾಂದ್ರೆ. ಬರೀ ಕಾಫಿ – ತಿಂಡಿ ಕೊಟ್ಟೆ ಅಷ್ಟೆ."

"ಪಾಪ, ಈಗ ಅವನ ಕೈ ಬರಿದಾಗಿದೆ. ಮನೆಯಲ್ಲಿ ಏನೂ ಇದ್ದಂತೆ ಕಾಣುವುದಿಲ್ಲ. ಸ್ವಲ್ಪ ಅಕ್ಕಿ ಬೇಳೆಯನ್ನಾದರೂ ಕೊಡಬೇಕಾಗಿತ್ತು"

"ಮಡಿಯಲ್ಲಿದ್ದೆ. ಅಕ್ಕಿ ಚೀಲ ಮುಟ್ಟುವ ಹಾಗಿರಲಿಲ್ಲ. ಅದಕ್ಕೆ ಐವತ್ತು ರೂಪಾಯಿ ತೆಗೆದು ಕವರಿನಲ್ಲಿಟ್ಟು ಕೊಟ್ಟು ಬಿಟ್ಟೆ."

ಎಂದರು ಸೌಭಾಗ್ಯಮ್ಮ.

ಸಭಾಪತಿಶಾಸ್ತ್ರಿಗಳ ಮುಖ ಆಶ್ಚರ್ಯದಿಂದ ಅಗಲವಾಗಿ ಅರಳಿತು.

"ನಿಜವೇ ಸೌಭಾಗ್ಯ ?"

"ಹೌದೂ ಅಂದ್ರೆ"

ಶಾಸ್ತ್ರಿಗಳು ಆನಂದವನ್ನು ತಡೆಯಲಾರದೆ ತುಂಬಿದ ಹೃದಯದಿಂದ ಸೌಭಾಗ್ಯಮ್ಮನವರನ್ನು ಬಿಗಿಯಾಗಿ ಅಪ್ಪಿಕೊಂಡರು.

"ಸೌಭಾಗ್ಯ, ಇವತ್ತು ಸುದರ್ಶನಯ್ಯಂಗಾರ್ಯರ ಮನೆಯವರು, ವೆಂಕಟೇಶಯ್ಯನ ಮನೆಯವರು, ಮುನಿತಾಯಪ್ಪನವರ ಮನೆಯವರು – ಎಲ್ಲರೂ ಬರುತ್ತಾರೆ. ಏನಾದರೂ ಒಂದಿಷ್ಟು ತಿಂಡಿ ಮಾಡು. ನಾಲ್ಕು ಗಂಟೆ ಹೊತ್ತಿಗೆ ನಿಮಗೆಲ್ಲಾ ಒಂದು ತಮಾಷೆ ತೋರಿಸುತ್ತೇನೆ"

ಎಂದು ಶಾಸ್ತ್ರಿಗಳು ಪತ್ನಿಯನ್ನು ಚುಂಬಿಸಿ ಅಡಿಗೆ ಮನೆಗೆ ಕಳುಹಿಸಿ

ಕೊಟ್ಟರು.

ಸೌಭಾಗ್ಯಮ್ಮನವರು ರವೆ ಸಜ್ಜಿಗೆ, ಉಪ್ಪಿಟ್ಟು, ಬೋಂಡ, ಕಾಫಿ – ಸಿದ್ಧ ಮಾಡಿದರು. ಅಷ್ಟರಲ್ಲಿ ಶಾಸ್ತ್ರಿಗಳು ಮತ್ತೊಮ್ಮೆ ಸ್ನಾನಮಾಡಿ, ಗಣಪತಿ ಅರ್ಚನೆ ಮುಗಿಸಿದರು.

ಮೂರೂವರೆ ಗಂಟೆಗೆ ಸರಿಯಾಗಿ ವೆಂಕಟೇಶಯ್ಯ ತನ್ನ ಪರಿವಾರ ದೊಡನೆ ಜಟಕಾದಲ್ಲಿ ಬಂದಿಳಿದ. ಅವನ ಹಿಂದೆಯೇ ದ್ವಿಪತ್ನೀ ಸಹಿತರಾಗಿ ಸುದರ್ಶನಯ್ಯಂಗಾರ್ಯರೂ, ಪತ್ನಿ – ಪುತ್ರಿಯೊಡನೆ ಅಹೋಬಲರಾಯರೂ ಬಂದರು. ಮುನಿತಾಯಪ್ಪ ಬರುವುದು ತಡವಾಯಿತು. ಅಂತೂ ಅವನೂ ನಾಲ್ಕು ಗಂಟೆಗೆ ಸರಿಯಾಗಿ ಬಂದಿದ್ದರಿಂದ ಸಭಾಪತಿಶಾಸ್ತ್ರಿಗಳಿಗೆ ಸಂತೋಷ ವಾಯಿತು.

" ಕೃಷ್ಣಮಾಚಾರ್ಯರು ಬರಲಿಲ್ಲವಲ್ಲಾ "

ಎಂದು ಅರೆಕ್ಷಣ ಶಾಸ್ತ್ರಿಗಳು ಚಿಂತಿಸಿದರು.

" ಅವರು ಬರುವುದಕ್ಕೆ ಪುರಸತ್ತಿಲ್ಲ ಸಭಾಪತಿ. ಈಗ ನಾಲ್ಕು ಗಂಟೆಗೆ ಸರಿಯಾಗಿ ಅವರ 'ಚಕ್ರಪೂಜೆ' ಮುಗಿದಿರುತ್ತದೆ. ಮತ್ತೆ ಆರು ಗಂಟೆಗೆ ಪುನಃ ಆರಂಭ. ಆದ್ದರಿಂದ ಇಲ್ಲಿಗೆ ಬಂದು ಹೋಗಲು ಅವರಿಗೆ ಅವಕಾಶ ವಾಗುವುದಿಲ್ಲ." ಎಂದರು ಸುದರ್ಶನಯ್ಯಂಗಾರ್ಯರು.

" ನಾಮಗಿರಿಯಮ್ಮನವರನ್ನಾದರೂ ಕರೆದುಕೊಂಡು ಬಂದಿದ್ದರೆ ಚೆನ್ನಾಗಿತ್ತು "

" ಅವರಿಗೆ ಮೈ ಸ್ವಸ್ಥವಿಲ್ಲ. ಹಾಸಿಗೆ ಹಿಡಿದಿದ್ದಾರೆ "

" ಸರಿ, ಇನ್ನೇನು ಮಾಡುವುದಕ್ಕಾಗುತ್ತದೆ "

ಎಂದುಕೊಂಡು ಸುಮ್ಮನಾದರು ಶಾಸ್ತ್ರಿಗಳು.

ಆಹ್ವಾನಿತರೆಲ್ಲಾ ಅಂಗಳದಲ್ಲಿ ಕನ್ನಡಿಗೆ ಎದುರಾಗಿ ಕುಳಿತರು. ಶಾಸ್ತ್ರಿಗಳು ಮುಂದೇನು ಮಾಡುತ್ತಾರೋ ಎಂದು ಎಲ್ಲರಿಗೂ ಕುತೂಹಲ.

ತಯಾರಿಸಿದ್ದ 'ಕಪ್ಪ'ನ್ನು ಸಭಾಪತಿಶಾಸ್ತ್ರಿಗಳು ಎಲ್ಲರಿಗೂ ಕೊಟ್ಟು—

" ಈ ಅಂಜನವನ್ನು ಎಲ್ಲರೂ ಕಣ್ಣಿಗೆ ಹಚ್ಚಿಕೊಳ್ಳಿ "

ಎಂದರು. ಅವರು ಹೇಳಿದಂತೆಯೇ ಆಹ್ವಾನಿತರೆಲ್ಲರೂ 'ಕಪ್ಪ'ನ್ನು ತಮ್ಮ ತಮ್ಮ ಕಣ್ಣುಗಳಿಗೆ ಹಚ್ಚಿಕೊಂಡರು.

ಅನಂತರ—

" ಇವತ್ತು ಭದ್ರಯ್ಯನ ಬಲಭಂಗಮಾಡುವ ಸಂತೋಷ ಸಮಾರಂಭ. ನೀವೆಲ್ಲಾ ನೋಡಿ ಆನಂದಿಸಬೇಕಷ್ಟೇ ಅಲ್ಲದೆ, ಈ ಘಟನೆಗೆ ಸಾಕ್ಷಿಗಳಾಗಿರ ಬೇಕು "

ಎಂದು ಶಾಸ್ತ್ರಿಗಳು ಪೀಠಿಕೆ ಹಾಕಿ, ಕನ್ನಡಿಯಮೇಲೆ ಮುಚ್ಚಿದ್ದ ಬಟ್ಟೆಯನ್ನು ಬದಿಗೆ ಸರಿಸಿದರು. ಕುಳಿತಿದ್ದವರೆಲ್ಲಾ ಕನ್ನಡಿಯ ಕಡೆಗೇ ನೋಡಿ, ಅಲ್ಲಿ ಏನೂ ಕಾಣಿಸದಿದ್ದುದರಿಂದ, ಶಾಸ್ತ್ರಿಗಳ ಕಡೆಗೆ ನೋಡಿದರು. ಕೂಡಲೇ ತಮ್ಮ ತಪ್ಪು ಅರಿವು ಮಾಡಿಕೊಂಡ ಶಾಸ್ತ್ರಿಗಳು ಅಂಗಳದ ಕಿಟಕಿ ಗಳನ್ನೂ ಬಾಗಿಲನ್ನೂ ಮುಚ್ಚಿ ಮತ್ತೆ ಕನ್ನಡಿಯ ಬಳಿಗೆ ಬಂದು ನಿಂತು, ಅಸ್ಪಷ್ಟವಾಗಿ ಮಂತ್ರೋಚ್ಚಾರಣೆ ಮಾಡತೊಡಗಿದರು. ತಟ್ಟನೆ ಕನ್ನಡಿಯಲ್ಲಿ ಬೆಳಕು ಸುಳಿಯಿತು! ಎಲ್ಲರ ದೃಷ್ಟಿಯೂ ಅತ್ತ ಸೆಳೆಯಿತು. ದೃಶ್ಯ ಚಿತ್ರ ಪ್ರಾರಂಭವಾಯಿತು........

........ಅಲಸೂರು ಪೇಟೆಯಲ್ಲಿ ಭದ್ರಯ್ಯನ ಮನೆ. ನಾಲ್ಕಾರು ಮಂದಿ ಗಿರಾಕಿಗಳು ಒಳ ಅಂಗಳದಲ್ಲಿ ಕುಳಿತಿದ್ದಾರೆ. ಮುಡಿಯನ್ನು ಕಟ್ಟಿ, ಮೀಸೆಯನ್ನು ಹುರಿಮಾಡಿದ ಭದ್ರಯ್ಯ ಕೋಣೆಯಲ್ಲಿ ಕುಳಿತು, 'ಶಾಕಿನಿ' ವಿಗ್ರಹದಮೇಲೆ ಹೆಂಡವನ್ನು ಸುರಿಯುತ್ತಲಿದ್ದಾನೆ. ಬಳಿಯಲ್ಲೇ ನಾಲ್ಕಾರು ಪಂಚಲೋಹದ ತಗಡುಗಳಿವೆ.

........ಜೇಡಿಮಣ್ಣಿನಲ್ಲಿ ಮಾಡಿದ ಶಾಕಿನಿಯ ಪ್ರತಿಮೆ ಇದ್ದಕ್ಕಿದ್ದಂತೆ ಸೀಳು ಬಿಟ್ಟಿತು. ಭದ್ರಯ್ಯ ಬೆರಗುಗಂಗಳಿಂದ ನೋಡಿದ. ಅವನು ನೋಡುತ್ತಿದ್ದಂತೆಯೇ ಆ ವಿಗ್ರಹ ಚೂರುಚೂರಾಗಿ, ಚೆಲ್ಲಾಪಿಲ್ಲಿಯಾಯಿತು.

........ಭದ್ರಯ್ಯನ ಮುಖದಲ್ಲಿ ಭೀತಿ ಮೂಡಿತು. ಮರುಕ್ಷಣ ದಲ್ಲಿಯೇ ಎದೆಯಲ್ಲಿ ಅಸಾಧ್ಯವಾದ ನೋವು ಆರಂಭವಾಯಿತು.

........ಅಂಗೈಯ್ಯಲ್ಲಿ ಎದೆಯನ್ನು ಬಿಗಿಯಾಗಿ ಹಿಡಿದುಕೊಂಡು ಹೊರಗೆ ಬಂದ ಭದ್ರಯ್ಯ. ಕುಳಿತಿದ್ದ ಗಿರಾಕಿಗಳನ್ನು ನೋಡಿ – ' ಹೋಗಿ ಹೋಗಿ ' ಎನ್ನುವಂತೆ ಕೈ ಸನ್ನೆ ಮಾಡಿದ. ಅವರು ಹೋದ ಬಳಿಕ ಬಾಗಿಲು ಮುಚ್ಚಿದ.

........ನೋವು ತಡೆಯಲಾರದೆ ನೆಲದಮೇಲೆ ಬಿದ್ದು ಹೊರಳಾಡಿದ ಭದ್ರಯ್ಯ. ಅವನ ವೃದ್ಧ ತಾಯಿ ಮಗನನ್ನು ನೋಡಿ ದಿಕ್ಕು ತೋಚದೆ ನಿಂತುಬಿಟ್ಟಳು.

........ಭದ್ರಯ್ಯ ಕನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡ.

........'ಶಾಕಿನಿ' ಪೂಜೆಗೆಂದು ಇಟ್ಟಿದ್ದ ಹಸಿಯ ಮಾಂಸವನ್ನು ಗಬಗಬಸಿ ತಿಂದ. ಬಳಿಯಲ್ಲೇ ಇದ್ದ ಹೆಂಡವನ್ನು ಬಾಯಿಗೆ ಸುರಿದುಕೊಂಡ.

........ಹೆಂಡದ ಸೀಸೆ ಜಾರಿತು. ತೂರಾಡುತ್ತಾ ತೂರಾಡುತ್ತಾ ಹುಚ್ಚು ನರ್ತನವನ್ನೇ ಆರಂಭಿಸಿಬಿಟ್ಟ ಭದ್ರಯ್ಯ.

........ಕುಣಿಯುತ್ತಿದ್ದಂತೆಯೇ ಅವನ ಮುಡಿಯ ಗಂಟು ಕತ್ತರಿಸಿದಂತೆ ಕೆಳಗುರುಳಿತು. ತಲೆಯ ಕೂದಲೆಲ್ಲಾ ಕೆಳಗುದುರಿ ಅಕಚನಾದ ಭದ್ರಯ್ಯ. ಅವನ ಮೀಸೆಯೂ ಕಳಚಿ ಕೆಳಗೆ ಬಿತ್ತು.

........ಹಲ್ಲುಗಳು ಉದುರಿದವು. ಬಾಯಿಂದ ರಕ್ತ ಸುರಿಯಿತು. ಮುಖದಮೇಲೆ ಬೊಬ್ಬೆಗಳು ಕಾಣಿಸಿಕೊಂಡವು.

........ಧೊಪ್ಪನೆ ಕೆಳಗೆ ಬಿದ್ದ ಭದ್ರಯ್ಯ. ಚಂಡಿ ಹಿಡಿದ ಮಕ್ಕಳಂತೆ ಕಾಲನ್ನು ನೆಲಕ್ಕೆ ಝಾಡಿಸಿದ. ಕೋಣೆಯಲ್ಲೆಲ್ಲಾ ಹೊರಳಾಡಿದ. ಅನಂತರ ಎದ್ದು ನಿಂತ.

........ಕೋಣೆಯ ಬಾಗಿಲು ತೆರೆದ. ಬೇಗಬೇಗನೆ ಹೆಜ್ಜೆಹಾಕುತ್ತಾ ಹೊರಗೆ ನಡೆದ. ಎಲ್ಲಿಗೆ ಎಂಬುದರ ಪರಿವೆಯಿಲ್ಲದೆ ಅವನ ಕಾಲುಗಳು ಸೆಳೆದುಕೊಂಡು ಹೋದವು.

........ಆಹ್ವಾನಿತರಿಗೆ ಪರಿಚಿತವಾಗಿದ್ದ ಮಲ್ಲೇಶ್ವರದ ಬೀದಿಗಳಲ್ಲಿ ಬರುತ್ತಿದ್ದ ಭದ್ರಯ್ಯ. ಹಾಗೆಯೇ ಬಂದು ಶಾಸ್ತ್ರಿಗಳ ಮನೆಯ ಆವರಣ ವನ್ನೂ ಹೊಕ್ಕಿದ್ದಾಯಿತು.

ಅಷ್ಟರಲ್ಲಿ 'ಡಭೀರ್' ಎಂಬ ಶಬ್ದ ಕೇಳಿತು. ಪ್ರೇಕ್ಷಕರೆಲ್ಲಾ ಬೆಚ್ಚಿ ದರು. ಕೂಡಲೇ ಶಾಸ್ತ್ರಿಗಳು ಕನ್ನಡಿಗೆ ಬಟ್ಟೆಯನ್ನು ಹೊದಿಸಿ, ಅಂಗಳದ ಬಾಗಿಲನ್ನು ತೆರೆದರು. ಕುತೂಹಲದಿಂದ ಎಲ್ಲರೂ ಅತ್ತ ದೃಷ್ಟಿ ಹೊರಳಿಸಿ ದರು........ಭದ್ರಯ್ಯ ಬಿದ್ದಿದ್ದಾನೆ!

ದೀರ್ಘದಂಡ ನಮಸ್ಕಾರ ಮಾಡುವವನಂತೆ ಬಾಗಿಲ ಬಳಿ–ಹೊಸಲಿನ ಮೇಲೆ ತಲೆಯಿಟ್ಟು ಬಿದ್ದಿದ್ದಾನೆ ಭದ್ರಯ್ಯ! ಮೈಮೇಲೆ ಪ್ರಜ್ಞೆಯಿಲ್ಲ. ಉಸಿರು ಮಾತ್ರ ಆಡುತ್ತಿದೆ.

ಒಳಗೆ ಹೋಗಿ ಶಾಸ್ತ್ರಿಗಳು ಗಣಪತಿಯ ತೀರ್ಥವನ್ನು ತಂದು ಅವನ ಮೇಲೆ ಚಿಮುಕಿಸಿದರು. ಎರಡು ನಿಮಿಷಗಳ ಬಳಿಕ ಭದ್ರಯ್ಯನಿಗೆ ತಿಳಿವು

ಮೂಡಿತು. ಅವನು ಎದ್ದು ನಿಂತ. ಎದುರಿಗಿದ್ದವರನ್ನೆಲ್ಲಾ ನೋಡಿದ. ರುಕ್ಮಿಣಿ, ನರಸಮ್ಮ, ಮುನಿತಾಯಪ್ಪ, ಸುದರ್ಶನಯ್ಯಂಗಾರ್ಯ್ಯರು, ಸಭಾಪತಿ ಶಾಸ್ತ್ರಿಗಳು—ಪರಿಚಿತ ಮುಖಗಳ, ಪೀಡಿಸಲ್ಪಟ್ಟ ವ್ಯಕ್ತಿಗಳ ಗುರುತು ಹತ್ತಿತು. ಇವನ ಮುಖ ಕಂಗೆಟ್ಟಿತು. ತಟ್ಟನೆ ಸಭಾಪತಿಶಾಸ್ತ್ರಿಗಳ ಕಾಲು ಹಿಡಿದುಕೊಂಡು ಗೋಳಿಟ್ಟ ಭದ್ರಯ್ಯ.

" ಶಕ್ತಿ ಇದೆ ಎಂದು ಹೆಮ್ಮೆಪಟ್ಟು ದುರುಪಯೋಗಪಡಿಸಿ, ಲೋಕ ಕಂಟಕನಾದರೆ ಒದಗುವ ಗತಿ ಇದೆ........ಹೋಗು ಇನ್ನಾದರೂ ಸರಿಯಾಗಿ ಬಾಳು. ನ್ಯೈಮುರಿದು ದುಡಿದು ನೆಮ್ಮದಿಯಾಗಿ ಬದಕು "

ಶಾಸ್ತ್ರಿಗಳು ಗಂಭೀರವಾಗಿ ನುಡಿದರು.

ಭದ್ರಯ್ಯ ಎದ್ದು ನಿಂತ. ಎಲ್ಲರೆಡೆಗೆ ಅಸಾಹಯಕ ನೋಟ ಬೀರಿದ. ಸಭಾಪತಿಶಾಸ್ತ್ರಿಗಳನ್ನೂ ದೈನ್ಯದಿಂದ ನೋಡಿದ. ಮರುಕ್ಷಣದಲ್ಲಿಯೇ ಅವನ ನೋಟ ಬದಲಿತು. ಕಣ್ಣು ಕೆಂಪಾಯಿತು. ದೃಷ್ಟಿ ಕ್ರುದ್ಧವಾಯಿತು. ಅಲ್ಲಿ **ಸೇಡಿನ ಕಿಡಿ** ಸೃಷ್ಟಿಯಾಗಿದ್ದುದು ಸ್ಪಷ್ಟವಾಗಿ ಗೋಚರಿಸಿತು.

ಇನ್ನೊಮ್ಮೆ ಎಲ್ಲರ ಕಡೆಗೂ ದುರದುರನೆ ನೋಡಿ, ಅಲ್ಲಿಂದ ಹೊರಟು ಬಿಟ್ಟ ಭದ್ರಯ್ಯ. ಆಹ್ವಾನಿತರ ಮುಖದ ಮೇಲೆಲ್ಲಾ ವಿಜಯದ ಕಳೆ ಮೂಡಿತ್ತು. ಭದ್ರಯ್ಯನ ಬಲಭಂಗವನ್ನು ಕಂಡು ಎಲ್ಲರಿಗೂ ತುಂಬಾ ಸಂತೋಷವಾಗಿತ್ತು.

" ಸ್ವಾಮಿ, ಇವತ್ತು ನನಗೆ ' ಹಾಲು – ತುಪ್ಪ ' ಕುಡಿದಷ್ಟು ಸಂತೋಷವಾಯಿತು " ಎಂದ ಮುನಿತಾಯಪ್ಪ.

" ಸುದರ್ಶನಯ್ಯಂಗಾರ್ಯರೇ ಇನ್ನೊಂದು ಸಾರಿ ನಿಮ್ಮ ಕೈಯಲ್ಲಿ ಬೈಯ್ಯಿಸಿಕೊಂಡು ಕಿರಿಯ ಹೆಂಡತಿಯ ಕೈಯಲ್ಲಿ ಕೋಲಿನೇಟು ತಿಂದು ಹಿರಿಯ ಹೆಂಡತಿಯಿಂದ ತಣ್ಣೀರೆರಚಿಕೊಂಡು ವಾಪಸ್ಸು ಬರುವ ಅವಕಾಶ ತಪ್ಪಿಹೋಯಿತು !"

ಎಂದು ನಕ್ಕ ವೆಂಕಟೇಶಯ್ಯ. ಉಳಿದವರೂ ಆ ಮಾತಿಗೆ ಕಿಲಕಿಲನೆ ನಕ್ಕರು.

" ಮುಖ್ಯ ನರಸೂ ಪ್ರಾಣ ಉಳಿಯಿತು; ರುಕ್ಕುವಿನ ಗತಿ ನೆಟ್ಟಗಾಯಿತು" ಎನ್ನುತ್ತಾ ಸೌಭಾಗ್ಯಮ್ಮ ಒಳಗೆ ನಡೆದರು. ಅವರೊಡನೆ ರುಕ್ಮಿಣಿಯೂ ಹೋಗಿ ತಿಂಡಿಯ ತಟ್ಟೆಗಳನ್ನು ತಂದು ಎಲ್ಲರಿಗೂ ಕೊಟ್ಟಳು.

" ಕಣ್ಣಿಗೆ ರಂಜನೆ, ಮನಸ್ಸಿಗೆ ನೆಮ್ಮದಿ, ಹೃದಯಕ್ಕೆ ಸಂತೋಷ— ಇಷ್ಟೇ ಸಾಲದು ಅಂತ ಬಾಯಿಗೂ ರುಚಿ ಮಾಡಿಬಿಟ್ಟಿರಲ್ಲಾ ಶಾಸ್ತ್ರಿಗಳೆ !"

ಎನ್ನುತ್ತಾ ತಿಂಡಿಯ ತಟ್ಟೆಗೆ ಕೈ ಹಾಕಿದರು ಅಹೋಬಲರಾಯರು.

" ಇದಕ್ಕಿಂತ ದೊಡ್ಡ ಭಾಗ್ಯದ ದಿನವಿಲ್ಲ !"

ಎಂದರು ವೈದೇಹಮ್ಮ.

ಅಷ್ಟರಲ್ಲಿ ಶಾಸ್ತ್ರಿಗಳು—

" ಸುದರ್ಶನನಿಗೆ ಗಂಡು ಮಗು ಹುಟ್ಟಿದ ದಿನ ಇದಕ್ಕಿಂತಲೂ ಮಹಾ ಭಾಗ್ಯದ ದಿನ " ಎಂದರು.

ಅಲಮೇಲು ನಾಚಿಕೆಯಿಂದ ಮುಖ ಮುಚ್ಚಿಕೊಂಡಳು.

" ಹೀಗೆಯೇ ಒಂದರ ಹಿಂದೊಂದು ಭಾಗ್ಯದ ದಿನಗಳು ಬರುತ್ತಿರಲಿ; ಬಾಯಿ ಸಿಹಿಯಾಗುತ್ತಿರಲಿ "

ಎಂದರು ಅಹೋಬಲರಾಯರ ಪತ್ನಿ ತುಂಗಾಬಾಯಿ. ಅವರ ಮಾತಿಗೆ ಉಳಿದವರು ಮುಸಿ ಮುಸಿ ನಕ್ಕರು.

ತಿಂಡಿಯ ತಟ್ಟೆಗಳು ಬರಿದಾದುವು. ಕಾಫಿ ಸಮಾರಾಧನೆ ಮುಗಿಯಿತು. ಎಲ್ಲರೂ ಹೊರಟು ನಿಂತರು.

ಸೌಭಾಗ್ಯಮ್ಮನವರು ಹೆಂಗಸರಿಗೆಲ್ಲಾ ಕುಂಕುಮ ಕೊಟ್ಟರು. ಅನಂತರ ರವಿಕೆ ಕಣವಿಟ್ಟು ಎಲ್ಲರಿಗೂ ತಾಂಬೂಲ ಕೊಟ್ಟರು.

ರುಕ್ಮಿಣಿ ಮುತ್ತೈದೆಯರಿಗೆಲ್ಲಾ ನಮಸ್ಕಾರ ಮಾಡಿ ಆಶೀರ್ವಾದ ಪಡೆದುಕೊಂಡಳು.

" ಬೇಗನೆ ನಿನ್ನ ಗಾಯಗಳೆಲ್ಲಾ ವಾಸಿಯಾಗಿ, ಒಳ್ಳೆ ಗಂಡನೊಡನೆ ಮದುವೆಯಾಗಿ ಸುಖವಾಗಿ ಬಾಳಮ್ಮ " ಎಂದರು ವೈದೇಹಮ್ಮ.

ಆಹ್ವಾನಿತರೆಲ್ಲಾ ಶಾಸ್ತ್ರಿಗಳಿಗೆ ವಂದನೆ ತಿಳಿಸಿ, ತಮ್ಮ ತಮ್ಮ ಮನೆಗಳತ್ತ ನಡೆದರು. ಅಂದು ಎಲ್ಲರಿಗೂ ತುಂಬಾ ಸಂತೋಷವಾಗಿತ್ತು. ಆದರೂ ಸಭಾಪತಿಶಾಸ್ತ್ರಿಗಳಿಗೆ ಮಾತ್ರ ಭದ್ರಯ್ಯನ ಕಣ್ಣಲ್ಲಿ ಕಂಡ ಸೇಡಿನ ಕಿಡಿ ಒಂದು ಬಗೆಯ ಕಳವಳವನ್ನೇ ಉಂಟುಮಾಡಿತ್ತು.



# ಸುದರ್ಶನ ಪ್ರಕಟನೆಗಳು

| | | | |
|---|---|---|---|
| *೧. | ಗೋಮುಖವ್ಯಾಘ್ರ | — | ತಾ. ರಾ. ನಾಗರಾಜ, ಶ್ರೀಪತಿ |
| *೨. | ಪ್ರೇಮದರ್ಶನ | — | ಕೃಷ್ಣ |
| ೩. | ಮೊದಲ ನೋಟ | — | ತ. ರಾ. ಸು. |
| ೪. | ಅಭಯ | — | ನಿರಂಜನ |
| ೫. | ಸ್ವಯಂವರ | — | ಮ. ನ. ಮೂರ್ತಿ |
| ೬. | ಬಾಳ ಬಂಧನ | — | ದಾಶರಥಿ ದೀಕ್ಷಿತ |
| ೭. | ಕಲಾವಿದ | — | ಪ್ರಕಾಶ್ |
| ೮. | ಮಂಗಳ ದೀಪ | — | ಶ್ರೀನಿವಾಸರಾವ್ ಕೊರಟಿ |
| ೯. | ರಷ್ಯಾದ ಕಥೆಗಳು | — | ಉಮಾಪತಿ |
| ೧೦. | ನಪುಂಸಕ | — | ಶ್ರೀಕೃಷ್ಣಪಾಟೀಲ |
| ೧೧. | ಮಸಣದ ಹೂವು | — | ತ. ರಾ. ಸು. |
| ೧೨. | ಅಪವಾದ | — | ಶ್ರೀಕೃಷ್ಣಪಾಟೀಲ |
| ೧೩. | ನತದೃಷ್ಟೆ | — | ನವಗಿರಿನಂದ |
| ೧೪. | ಶಕ್ತಿ ಪೂಜೆ | — | ಇಂದಿರಾತನಯ |

* ಪ್ರತಿಗಳು ಮುಗಿದಿವೆ

## ಅಚ್ಚಿನಲ್ಲಿ

| | |
|---|---|
| ಮಾವನ ಮನೆ (ಗೆಳೆಯರ ಮದುವೆಯ ಉಡುಗೊರೆಗಾಗಿ) | ದಾಶರಥಿ ದೀಕ್ಷಿತ |
| ಸೇಡಿನ ಕಿಡಿ (ಶಕ್ತಿ ಪೂಜೆಯ ಮುಂದುವರೆದ ಕತೆ) | ಇಂದಿರಾತನಯ |
| ಪೂಜಾತಂತ್ರ (ಸೇಡಿನಕಿಡಿಯ ಮುಂದುವರೆದ ಕಾದಂಬರಿ) | ಇಂದಿರಾತನಯ |

## ಪ್ರಕಾಶನದಲ್ಲಿ ಬರಲಿರುವ ಕೃತಿಗಳು

| | | |
|---|---|---|
| ರಾಜೇಶ್ವರಿ (ಮೊದಲನೋಟದ ಉತ್ತರಭಾಗ) | | ತ. ರಾ. ಸು. |
| ಗುಟ್ಟಿನಮಡದಿ | — | ತಾ. ರಾ. ನಾಗರಾಜ |
| ಕ್ಷೇತ್ರಯಾತ್ರೆ | — | ತಾ. ರಾ. ನಾಗರಾಜ |
| ಸಮಾಗಮ | — | ತ. ರಾ. ಸು. |
| ಪುಸ್ತಕ ಹೇಳಿದ ಕತೆ (ನವೀನ ಕಾದಂಬರಿ) | | ಕೃಷ್ಣಸ್ವಾಮಿರಾವ್ |
| ಪ್ರೇಮ ಬಂಧನ | — | ಲೀಲಾಶೇಖರ್ |
| ಹಾಸ್ಯಪೂರ್ಣ ಕಾದಂಬರಿ | — | ಶ್ರೀ ಅಷ್ಟಾವಕ್ರ |
| ಒಬ್ಬಟ್ಟಿನ ಕಂಟ್ರಾಕ್ಟು | — | ಎಲ್. ಸೂರಪ್ಪ |

# ಸುದರ್ಶನ ಪ್ರಕಾಶನ

ತಾರಾನಿವಾಸ : : ತಿಪಟೂರು

## ಚಂದಾ ನಿಯಮಗಳು

ನಮ್ಮ ಮಾಲೆಯ ಪುಸ್ತಕಗಳನ್ನು ಚಂದಾ ಪದ್ಧತಿಯಲ್ಲಿ ಅನೇಕ ಓದುಗರು ಅಪೇಕ್ಷಿಸಿರುವುದರಿಂದ, ಅವರ ಮನೀಕ್ಷೆಯಂತೆ ಈ ಚಂದಾಪದ್ಧತಿಯನ್ನು ಜಾರಿಗೆ ತರುತ್ತೇವೆಂದು ತಿಳಿಸಲು ಸಂತೋಷಿಸುತ್ತೇವೆ.

★ ಚಂದಾ ಅವಧಿಯು ಜನವರಿಯಿಂದ ಡಿಸೆಂಬರ್ ಅಂತ್ಯ.

★ ಉತ್ತಮದರ್ಜೆಯ ಸಾಹಿತ್ಯ ಒದಗಿಸುವುದು ಪ್ರಕಾಶನದ ಧ್ಯೇಯ.

★ ಪ್ರಕಾಶನದಲ್ಲಿ ಕಾದಂಬರಿ, ಕತೆ, ನಾಟಕ, ನಗೆಬರೆಹ, ನಗೆ ಕಾದಂಬರಿ ಮುಂತಾದ ವಿವಿಧ ರೀತಿಯ ಸಾಹಿತ್ಯ ಪ್ರಕಟವಾಗುತ್ತದೆ.

★ **ಪ್ರತಿವರ್ಷ ಸುಮಾರು 1400 ಪುಟದಿಂದ 2000 ಪುಟದವರೆಗೆ ಸಾಹಿತ್ಯವನ್ನು ಒದಗಿಸಲಾಗುವುದು.**

★ **ಪ್ರಕಾಶನದ ಚಂದಾ ವರ್ಷಕ್ಕೆ ಎಂಟು ರೂಪಾಯಿಗಳು ಮಾತ್ರ.**

★ **ಪುಸ್ತಕಗಳನ್ನು ಸರ್ಟಿಫಿಕೆಟ್ ಆಫ್ ಪೋಸ್ಟಿಂಗ್ ದ್ವಾರ ಕಳಿಸಲಾಗುವುದು.**

★ **ರಿಜಿಸ್ಟರ್ ಅಂಚೆದ್ವಾರ ಅಪೇಕ್ಷಿಸುವವರು ಹತ್ತು ರೂಪಾಯಿ ಕಳಿಸಬೇಕು. ಚಂದಾಹಣದ ಬಹುಭಾಗ ಅಂಚೆಯ ಇಲಾಖೆಯೇ ಎಳೆದುಕೊಳ್ಳುವುದರಿಂದ ಈ ಪದ್ಧತಿಯು ಅನಿವಾರ್ಯವಾಗಿದೆ.**

**ಇಂದೇ ಚಂದಾದಾರರಾಗಿರಿ.**

# ಅತಿ ಶೀಘ್ರದಲ್ಲಿಯೇ ಪ್ರಕಟವಾಗುತ್ತದೆ

ಇಂದಿರಾತನಯ ಅವರು ಬರೆದ ಕಾದಂಬರಿ

# ಸೇಡಿನ ಕಿಡಿ

[ 'ಮಂತ್ರ ಶಕ್ತಿ' ಮತ್ತು 'ಶಕ್ತಿ ಪೂಜೆ' ಕಾದಂಬರಿಗಳ ಮುಂದಿನ ಭಾಗ]

ಬಲಭಂಗ ಹೊಂದಿದ ಭದ್ರಯ್ಯನ ಹೃದಯಗಹ್ವರದಲ್ಲಿ ಹೊಗೆಯಾಡುತ್ತಿತ್ತು ಸೇಡಿನ ಕಿಡಿ. ಗಣಪತಿ ಔಪಾಸನೆಯನ್ನು ಸಿದ್ಧಿಸಿಕೊಂಡು, ತಮ್ಮ ಆತ್ಮ ಶಕ್ತಿಯನ್ನು ವೃದ್ಧಿಮಾಡಿಕೊಂಡು ಲೋಕಕಲ್ಯಾಣ ಕಾರ್ಯದಲ್ಲಿ ನಿರತರಾಗಿದ್ದ ಸಭಾಪತಿ ಶಾಸ್ತ್ರಿಗಳು ದೇಶ ವಿದೇಶಗಳಲ್ಲಿ ಪ್ರವಾಸ ಮಾಡಿ, ನಾನಾ ಬಗೆಯ ಗುಪ್ತಶಕ್ತಿ ವಿದ್ಯೆಗಳನ್ನು ಕರಗತಮಾಡಿಕೊಂಡು ದಿವ್ಯಜೀವನ ನಡೆಸುತ್ತಿದ್ದುದನ್ನೂ, ತಾನು ಬಯಸಿದ ರುಕ್ಮಿಣಿಯು ಶ್ರೀಕಂಠಶಾಸ್ತ್ರಿಯೊಡನೆ ಮದುವೆಯಾಗಿ ಸುಖ ಸಂಸಾರ ನಡೆಸುತ್ತಾ ಸಂತೋಷವಾಗಿರುವುದನ್ನೂ ಕಂಡಾಗ ಭದ್ರಯ್ಯನ ಮತ್ಸರದುರಿ ಧಗ್ಗನೆ ಹೊತ್ತಿಕೊಂಡು ಪ್ರಜ್ವಲಿಸಿತು. ಮತ್ತೊಮ್ಮೆ ಅಗಾಧ ಪ್ರಯತ್ನದಿಂದ ಆತ ಸಾಧಿಸಿಕೊಂಡ ಪ್ರಬಲಶಕ್ತಿ ಸಭಾಪತಿಶಾಸ್ತ್ರಿಗಳ ಸರ್ವಶಕ್ತಿಯನ್ನೂ ಒಂದೇ ಕ್ಷಣದಲ್ಲಿ ಉಡುಗಿಸಿತು; ರುಕ್ಮಿಣಿಯ ಸಂಸಾರವನ್ನೂ ಒಡೆಯಿತು. ಹಲವಾರು ಮಂದಿಯ ಪ್ರಾಣಗಳನ್ನು ಸೆಳೆಯಲು ಯತ್ನಿಸಿತು. ಇಂತಹ ಸಂದಿಗ್ಧ ವಿಷಮ ಸನ್ನಿವೇಶದಲ್ಲಿ ಜಾಜಿಹಳ್ಳಿಯ ವೆಂಕಪ್ಪನವರೊಡನೆ ಬಂದ ಚಿನ್ನಪ್ಪ. ಆತನ ಶುದ್ಧವಾದ ಆತ್ಮ ಶಕ್ತಿಯೂ, ಶ್ರೀ ಕೃಷ್ಣನ ಮಹಾಭಕ್ತೆಯಾದ ವೈದೇಹಮ್ಮನವರ ಸಾತ್ವಿಕ ಶಕ್ತಿಯೂ ಭದ್ರಯ್ಯನ ಪ್ರಬಲ ಶಕ್ತಿಯೊಡನೆ ಹೋರಾಟಕ್ಕೆ ನಿಂತವು........

ಈ ಶಕ್ತಿ ಸಂಗ್ರಾಮದ ಸೋಲು ಗೆಲುವಿನ ನಡುವೆ ನಡೆದ ವೈವಿಧ್ಯಪೂರ್ಣ ರೋಮಾಂಚಕಾರೀ ಘಟನೆಗಳ ಮನರಂಜಕ ಮಾಲೆಯೇ ಸೇಡಿನ ಕಿಡಿ.

ಸುಮಾರು ೩೦೦ ಪುಟಗಳು ] [ ಬೆಲೆ : ೧-೮-೦

---

ಸುದರ್ಶನ ಪ್ರಕಾಶನ — ತಾರಾನಿವಾಸ — ತಿಪಟೂರು